# ನನ್ನೂರು ಮಿರ್ಲೆ: ಒಂದು ಸಚಿತ್ರ ಕೈಪಿಡಿ

## ಎಂ. ಎಸ್. ಶ್ರೀಧರ್

**2020**

‘ಮಿರ್ಲೆ ಮನೆ’

ಬೆಂಗಳೂರು - 560078; ಫೋ: ಮೋ: 9964063960;

ಇ-ಮೈಲ್: mirlesridhar@gmail.com

# ಅರ್ಪಣೆ

ಇಪ್ಪತ್ತನೇ ಶತಮಾನದ ಆದಿಯ ತನ್ನ ಬಾಲ್ಯದ ಮಿರ್ಲೆ ನೆನಪುಗಳನ್ನು ವಿಪುಲವಾಗಿ ಹಂಚಿಕೊಂಡು ನನ್ನಲ್ಲಿ ಮಿರ್ಲೆಯ ಇತಿಹಾಸದಲ್ಲಿ ಆಸಕ್ತಿ ಮೂಡಿಸಿದ ಶತಾಯುಷಿ (ನಿಧನ 2002) ನನ್ನ ತಾಯಿ ಶ್ರೀಮತಿ ರಾಮಮ್ಮ ಅವರ ಸವಿ ನೆನಪಿಗೆ



# ಪರಿವಿಡಿ

# ಮೊದಲ ಮಾತು

ಬಾಲ್ಯದ ಶಾಲಾ ದಿನಗಳಿಂದ ಮೊದಲ್ಗೊಂಡು ಇಂದಿನವರೆವಿಗೂ ಪ್ರಪಂಚದ ಯಾವ್ಯಾವುದೋ ಊರು-ದೇಶಗಳ ಭೂಗೋಳ, ಚರಿತ್ರೆ, ವಾಣಿಜ್ಯ, ಕೃಷಿ, ಜನಜೀವನ, ಸಂಸ್ಕೃತಿ ಇತ್ಯಾದಿ ತಿಳಿಯುತ್ತಿದ್ದರೂ ನನ್ನೂರ ಇತಿಹಾಸವಾಗಲಿ ಅಲ್ಲಿನ ಕಾಲುವೆಗಳು, ದೇವಸ್ಥಾನಗಳು, ವಿಶಿಷ್ಠ ವ್ಯಕ್ತಿಗಳು ಇತ್ಯಾದಿ ತಿಳಿಯುವ ಪ್ರಯತ್ನ ಮಾಡಲಿಲ್ಲ. ನೆನಪನ್ನೇ ಹಿಂಬಾಲಿಸಿ ಪ್ರಯತ್ನಿಸಿದಾಗ ಸೂಕ್ತ ದಾಖಲೆಗಳು ದುರ್ಲಭ ಮತ್ತು  ಅಪೂರ್ಣ ಎಂಬುದರ ಅರಿವಾಯಿತು. ಖನಿಷ್ಠ ಮುಂದಿನ ಪೀಳಿಗೆಗಾದರೂ ದೊರೆಯುವಂತೆ ನನ್ನ 1950 ಮತ್ತು 60ರ ದಶಕದ ಬಾಲ್ಯದ ದಿನಗಳಲ್ಲಿ ನನ್ನ ಸೀಮಿತ ದೃಷ್ಟಿಗೆ ಮತ್ತು ಸಂಪರ್ಕಕ್ಕೊದಗಿದ ಹಾಗೂ ಕೇಳಿ,  ಓದಿ ತಿಳಿದುಕೊಂಡದ್ದನ್ನು ದಾಖಲಿಸಿ ಒಂದು ಅಪೂರ್ಣವಾದರೂ ಆರಂಭಿಕ ಕೈಪಿಡಿಯನ್ನಾಗಿಸುವ ಪ್ರಯತ್ನವಿದು. ನನ್ನ ನೆನಪುಗಳನ್ನ ಅವಲಂಬಿಸಿ ಅನಸಿಕೆ-ಅನುಭವಗಳನ್ನು ನಿವೇದಿಸುವಾಗ ಏಷ್ಟೇ ಎಚ್ಚರ ವಹಿಸಿದರೂ ಅಲ್ಲಲ್ಲಿ ಅತ್ಮಕಥೆಯ ಸ್ವರೂಪಕ್ಕೆ ತಿರುಗುವ ಅನಪೇಕ್ಷಣೀಯ ಲಕ್ಷಣಗಳು ಉಳಿದು ಕೊಂಡಿವೆ. ಇದನ್ನು ಸತತ ಪರಿಷ್ಕರಿಸಿ ಬೆಳೆಸಿ ಬಳಸುವ ಅಗತ್ಯವಿದೆ. ಈ ಪ್ರಯತ್ನದಲ್ಲಿ ಬಹಳಷ್ಟು ಮಿರ್ಲೆವರು ಈಗಾಗಲೇ ಸಹಕರಿಸಿ ಮಾಹಿತಿ ಒದಗಿಸಿದ್ದಾರೆ. ವಿಶೇಷವಾಗಿ ಫೇಸ್ ಬುಕ್ ನ ಗುಂಪು "ಮಿರ್ಲೆ ಪೀಪಲ್" ನಲ್ಲಿ ಇಲ್ಲಿನ ಬಹುತೇಕ ಮಾಹಿತಿ, ಅನಸಿಕೆ, ಅಭಿಪ್ರಾಯಗಳನ್ನು ತಿಳಿಸಿದಾಗ ಮಿರ್ಲೆ ಮಿತ್ರರನೇಕರು ಸಂವಾದ ರೂಪದಲ್ಲಿ ಹೆಚ್ಚಿನ ಪೂರಕ ಮಾಹಿತಿ ಒದಗಿಸಿದ್ದಾರೆ. ಅವುಗಳಲ್ಲಿ ಹಲವನ್ನು ಇಲ್ಲಿ ಬಳಸಿಕೊಂಡಿದ್ದೇನೆ.

## ಸ್ಥಳೀಯ ಇತಿಹಾಸ ಮತ್ತು ಭೂಗೋಳಗಳಿಗೆ ನಮ್ಮ ಪಠ್ಯಗಳಲ್ಲಿ ಸ್ಥಳವಿಲ್ಲ!

ಊರಿನ ಶಾಲೆಗಳಲ್ಲಿ ಯಾರೂ ನೋಡಿರದ, ಮುಂದೆಯೂ ನೋಡುವ ಸಾಧ್ಯತೆಯಿಲ್ಲದ ಸೂಯಜ್ ಕಾಲುವೆ ಬಗ್ಗೆ ಹೇಳಿದರೇ ಹೊರತು ಎದುರಿಗೇ ಹರಿವ ದಿನನಿತ್ಯ ನೋಡುವ ಚಾಮರಾಜ ಕಾಲುವೆ ಬಗ್ಗೆ ಹೇಳಲೇ ಇಲ್ಲ. ಅಂತೆಯೆ ನೈಲ್ ನದಿಯ ಬಗ್ಗೆ ಆಗಾಗ್ಯೆ ಉವಾಚ, ಕಾವೇರಿ ನದಿಯ ಬಗ್ಗೆ ಇಲ್ಲ. ಸ್ಥಳೀಯ ಇತಿಹಾಸ, ಭೂಗೋಳ, ವಾಣಿಜ್ಯ,

ಇತ್ಯಾದಿಗಳಿಗೆ ನಮ್ಮ ಪಠ್ಯಗಳಲ್ಲಿ ಸ್ಥಳವಿಲ್ಲ. ಉಪಾಧ್ಯಾಯರುಗಳಿಗೂ ತಾವು ಉದ್ಯೋಗ ಮಾಡುವ, ವಾಸಿಸುವ ಸ್ಥಳದ ಇತಿಹಾಸ, ಭೂಗೋಳ, ಮತ್ತಿತರ ಮಾಹಿತಿ ಬಗ್ಗೆ ಆಸಕ್ತಿಯಿಲ್ಲ. ಅವು ನಮ್ಮ ಪರೀಕ್ಷೆಗೆ ಮತ್ತು ಉದ್ಯೋಗಕ್ಕೆ ನಿಷ್ಪ್ರಯೋಜಕವಾದವುಗಳು ಎಂದು ಅಸಡ್ಡೆ. ನಾವು ಚಾಮರಾಜನಾಲೆ ಹುಟ್ಟುವಕಡೆಯಿಂದ ಕೊನೆಯವರೆವಿಗೆ ಅಥವ ಕಾವೇರಿ ತೀರದಲ್ಲಿ ಶಾಲೆಯಿಂದಲೇ ಟ್ರೆಕ್ಕಿಂಗ್ ಹೊಗುವಂತಿದ್ದಿದ್ದರೆ ಎಷ್ಟು ಚೆನ್ನ ಎಂದು ಈಗ ಅನ್ನಿಸುತ್ತಿದೆ. ಒಟ್ಟಿನಲ್ಲಿ ಶಾಲೆಗಳು, ಗ್ರಾಮಾಡಳಿತ, ತಾಲ್ಲೂಕು ಆಡಳಿತ, ಪೋಷಕರು, ಹಿರಿಯರು ಸ್ಥಳೀಯ ಜ್ಞಾನವನ್ನು ಸಂಗ್ರಹಿಸಿ, ಧಾಕಲಿಸಿ ಮುಂದಿನ ಪೀಳಿಗೆಗೆ ಕ್ರಮವಾಗಿ




ವರ್ಗಾಯಿಸದ ಕಾರಣ ಇಂದು ನಾವು ತಿಳಿಯಬಯಸುವ ಮಿರ್ಲೆ ಕೆರೆ ಹೆಅಸರಿನ ಹಿಂದಿರುವ ಮಾಚನಾಯಕ ಯಾರು? "ಮಿರ್ಲೆ ಅಣೆಕಟ್ಟೆ" ಯಾವುದು? "ಮಿರ್ಲೆ ನಾಲೆ" ಯಾವುದು? ಮಿರ್ಲೆಯಮ್ಮ ಯಾವ ದೇವತೆ? ಅವುಗಳ ಹೆಸರೇಕೆ ಬದಲಾಯಿತು? ಮೈಸೂರು ಸಂಸ್ಥಾನದ ಮೊದಲ ಪ್ರಜಾಪ್ರತಿನಿಧಿ ಸಭೆಗೆ 1881ರಲ್ಲಿ ಆಯ್ಕೆಯಾದ 'ಮಿರ್ಲೆ ರಾಮೇಗೌಡ' ಯಾರು? ತೀರಾ ಇತ್ತೀಚಿನ ಪ್ರವಾಸಿ ಮಂದಿರದ ಫೋಟೊಸಹಿತ ಮಾಹಿತಿ, ಇತ್ಯಾದಿ ಇತಿಹಾಸದ ನಿಖರ ಮಾಹಿತಿಗಳು ಲಭ್ಯವಿಲ್ಲವಾಗಿವೆ. ಜೊತೆಗೆ ನೋಡಿರದ ಸ್ಥಳ ಮತ್ತು ವ್ಯಕ್ತಿಗಳ ಹೆಸರುಗಳು ಹಾಗೂ ಇಸವಿಗಳಿಂದ ತುಂಬಿದ ಚರಿತ್ರೆಯನ್ನು ಜ್ಞಾಪಕದಲ್ಲಿಡಲು ಬಾಯಿಪಾಠ ಮಾಡಬೇಕಿದೆ. Wright ಸಹೋದರರು ಮೊದಲಬಾರಿಗೆ ವಿಮಾನವನ್ನು ಆವಿಷ್ಕರಿಸಿ ಹಾರಿಸಿದ ವರ್ಷ (1903) ಚಾಮರಾಜ ನಾಲೆಯಲ್ಲಿ ಮೊದಲಬಾರಿಗೆ ಮಿರ್ಲೆಯಲ್ಲಿ ನೀರು ಹರಿಯಿತು ಎನ್ನುವಂತಿದ್ದರೆ ಎಷ್ಟು ಚನ್ನ!

ಸ್ವಾತಂತ್ರ್ಯಪೂರ್ವದಲ್ಲಿ ಹಿರಿಯಣ್ಣನಗುಡಿಯಲ್ಲಿ ಕೋಣನ ಬಲಿ ನಡೆಯುತ್ತಿತ್ತು ಎಂದು

ಹಿರಿಯರು ಹೇಳಿದರೆ ನಂಬಲು ಕಷ್ಟವಾಗುತ್ತಿತ್ತು. ಇಂತಹದ್ದೇ ಕೋಣನ ಬಲಿ ಗೊರೂರಿನಲ್ಲಿ ನಡೆಯುತ್ತಿದ್ದದ್ದನ್ನು ಶ್ರೀ ರಾಮುಸ್ವಾಮಿ ಅಯ್ಯಂಗಾರ್ ಅವರು "ಬಾಲ್ಯದ ದಿನಗಳು" ಪುಸ್ತಕದಲ್ಲಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಅದೇ ರೀತಿ ಆ ಕಾಲದ ಮಿರ್ಲೆಯವರೇ ಯಾರಾದರೂ ಇದನ್ನು ದಾಖಲಿಸಿದ್ದರೆ ಇಂದಿನ ಪೀಳಿಗೆಗೆ ಹೆಚ್ಚು ನಿಖರವಾಗಿ ತಿಳಿಯುತ್ತಿತ್ತು.

ಇವೆಲ್ಲವನ್ನೂ ಮುಂದಿನ ಪೀಳಿಗೆಗೆ ತಿಳಿಸಬೇಕೇಕೆ ಎಂಬುದೊಂದು ಸಹಜ ಪ್ರಶ್ನೆ. ನಿಜ, ಮಿರ್ಲೆಯಲ್ಲಿ ಹುಟ್ಟಿ, ಆಡಿ ಬೆಳೆದವರಿಗೆ ಮಾತ್ರ ಇದು ರುಚಿಸಬಹುದೇ ಹೊರತು ಇತರರಿಗಲ್ಲ. ಉದಾಹರಣೆಗೆ ನನ್ನ ಮಕ್ಕಳಿಗೆ ಹೆಚ್ಚೆಂದರೆ ಮಿರ್ಲೆ ತನ್ನ ತಂದೆಯ ಹುಟ್ಟೂರು ಎಂಬ ಕೌತುಕಭರಿತ ಅಭಿಮಾನವಷ್ಟೆ. ವ್ಯಕ್ತಿ 15-16 ವರ್ಷ ತುಂಬುವಷ್ಟರಲ್ಲಿ ತನ್ನ ಶುದ್ಧ, ನಿರ್ಮಲ ನೆನಪಿನ ಕೋಶದ ಪ್ರತಿಶತ ೯೦ ರಷ್ಟನ್ನು ಮೊದಲಬಾರಿಗೆ ಎಂದಿಗೂ ಅಳಿಸಲಾರದಂತೆ ಅನಾಯಾಸವಾಗಿ ತನಗರಿವಿಲ್ಲದೆಯೇ ತನ್ನ ಸುತ್ತಲ ಪರಿಸರದಿಂದ ತುಂಬಿಕೊಳ್ಳುತ್ತಾನೆ. ಉಳಿದ ಪ್ರತಿಶತ 10ರಷ್ಟರಲ್ಲೇ ಮುಂದಿನ ವಿದ್ಯಾಭ್ಯಾಸ, ನೌಕರಿ, ಇತ್ಯಾದಿಗಳನ್ನು ನಿಭಾಯಿಸುತ್ತಿರುತ್ತಾನೆ. ಬಿಡುವು ದೊರೆತಾಗ ನೆನಪಿನ ಕೋಶವನ್ನು ತೆರೆಯಲೆತ್ನಿಸಿದರೆ ಅದರಲ್ಲಿನ ಸುಭದ್ರ ಸ್ಪಷ್ಟ ಚಿತ್ರಗಳು ತೆರೆದುಕೊಂಡು ಹಲವಾರು ಪ್ರಶ್ನೆಗಳು, ಉಪಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಅವುಗಳನ್ನು ಹತ್ತಿಕ್ಕಿ ನೆನಪಿನ ಕೋಶವನ್ನು ಮುಚ್ಚಿಡುವುದು ಅನಿವಾರ್ಯವಾಗುತ್ತದೆ. ಬದುಕಿನ ಸಂಜೆಯಲ್ಲಿ ಉಕ್ಕಿಬರುವ ನೆನಪುಗಳ (ಕೆಲವು ಅಸ್ಪಷ್ಟ, ಅಪೂರ್ಣವಾದರೂ) ಒತ್ತಡವನ್ನು ಪರಿಹರಿಸುವ ಪ್ರಯತ್ನವೆಂದು ಆರಂಭಿಸಿದೆನಾದರೂ ಇದು ಮತ್ತಷ್ಟು ನೆನಪುಗಳನ್ನು ಉತ್ಪತ್ತಿಮಾಡುತ್ತಿರುವಂತೆ ತೋರುತ್ತದೆ.

ಈ ಸಂಗ್ರಹವನ್ನು ಒಂದು ಪುಸ್ತಕವನ್ನಾಗಿ ಹೊರತರಬೇಕೆಂದು ಹತ್ತು ವರ್ಷಗಳ ಹಿಂದೆಯೇ ಪ್ರಾರಂಭಿಸಿದೆನಾದರೂ ಅಲ್ಲಲ್ಲಿ ಅಪೂರ್ಣವಾದದ್ದು ಬಹಳಷ್ಟು ಇದ್ದದ್ದರಿಂದ ಬಿಡಿಬಿಡಿಯಾಗಿ Facebookನ Mirle People Groupನಲ್ಲಿ ಹಂಚಿಕೊಂಡು, ಈಗ ಎಲ್ಲವನ್ನೂ ಸಂಗ್ರಹಿಸಿ ಆಯ್ದ ಪ್ರತಿಕ್ರಿಯೆಗಳನ್ನೂ ಸೇರಿಸಿ ಈ ಕೈಪಿಡಿಯನ್ನು ನಿಮ್ಮ ಮುಂದೆ ಇಡುತ್ತಿದ್ದೇನೆ. ಈ ಸಂಗ್ರಹ

ಎಲ್ಲ ಧೃಷ್ಠಿಯಿಂದಲೂ ಅಪೂರ್ಣ. ಮುಂದೆ ಇತರರು ಬೆಳೆಸಿದರೆ ಮಾತ್ರ ಪೂರ್ಣತೆಯತ್ತ ಬೆಳೆಯಬಹುದು. ಜೊತೆಗೆ 2020ರ ಕರೋನ ಪಿಡುಗು ಮತ್ತಷ್ಟು ಮಾಹಿತಿ, ಫೋಟೊ ಸಂಗ್ರಹಣೆಗೆ ತೊಡಕಾಗಿ ಇದ್ದಷ್ಟನ್ನೇ ಬಳಸಿ ಪುಸ್ತಕ ಮುಗಿಸುವಂತಾಯಿತು.

ನಾನು ಸಾಹಿತಿಯೂ ಅಲ್ಲ, ಇದು ಸಾಹಿತ್ಯ ಕೃತಿಯೂ ಅಲ್ಲ. ಗತಕಾಲದ ನೆನಪಿನ ಗುಂಗು ವಯಸ್ಸಾದಂತೆ ತೀವ್ರವಾಗಿ ಗುರುತು ಹಾಕಿದ ಟಿಪ್ಪಣಿಗಳಿವು. ಅದರ ಜೊತೆಗೆ ದೊರಕಿದ, ಕೇಳಿ ತಿಳಿದ ಮಾಹಿತಿಯನ್ನು ಪೂರಕವಾಗಿ ಸೇರಿಸಲು ಪ್ರಯತ್ನಿಸಿದ್ದೇನೆಯಷ್ಟೆ. ಅಂತೆಯೇ **ನಾನೇಕೆ ಬರೆದೆ?** ಎಂಬುದಕ್ಕೆ ಟಿ. ಎಸ್. ಸತ್ಯನ್ ಅವರು ಹೇಳಿದ "ತನ್ನ ಗತಕಾಲವನ್ನು ನೆನೆಸಿಕೊಳ್ಳದ, ಆ ಕಾಲದ ಘಟನೆಗಳನ್ನು ದಾಖಲಿಸಿಡದ ಮನುಷ್ಯ ಜಾತಿ ತನ್ನ ಕುಲಕ್ಕೇ ಹೊರತು" ಎಂಬ ಮಾತುಗಳೇ ಉತ್ತರ ಎಂದು ತಿಳಿದಿದ್ದೇನೆ (ಸತ್ಯನ್, ಟಿ. ಎಸ್, 2003).

## ಕೃತಜ್ಞತೆಗಳು:

ಮಾಹಿತಿ ದೊರಕಿಸಿದ ಮತ್ತು ನನ್ನ ಪ್ರಶ್ನೆಗಳಿಗೆ ಉತ್ತರಿಸಿದ ನನ್ನ ಹಿರಿಯ ಸಹೋದರರಾದ ಶ್ರೀ ಬಾಲಸುಂದರ್ ಮತ್ತು ದಿ. ಶ್ರೀ ದೇಶರಜ್, ಗೆಳೆಯರಾದ ಎಂ. ಆರ್. ಜಯರಾಮೇಗೌಡ, ಎಂ.ಆರ್. ಶಂಕರಯ್ಯ, ಸೀತಾರಾಮು ಮಿರ್ಲೆ, ಮಿರ್ಲೆ ನಟರಾಜ್ ಅವರುಗಳಿಗೆ ಋಣಿ. Facebookನಲ್ಲಿ Mirle People Groupನಲ್ಲಿ like ಮಾಡಿ, ಪ್ರತಿಕ್ರಿಯಿಸಿ, ಮಾಹಿತಿ ಮತ್ತು ಕೆಲವು ಚಿತ್ರಗಳನ್ನು ಒದಗಿಸಿ, ಇದರಲ್ಲಿ ಸೇರಿಸಲು ಅನುಮತಿ ನೀಡಿದ ಎಲ್ಲ ಮಿತ್ರರಿಗೆ ಧನ್ಯವಾದಗಳು. ನನ್ನನ್ನು ಪ್ರೋತ್ಸಾಹಿಸಿ ಇ-ಪುಸ್ತಕದ ಬಗ್ಗೆ ಉತ್ತೇಜಿಸಿ, ಹೆಜ್ಜೆ ಹೆಜ್ಜೆಗೂ ಪ್ರಗತಿಯನ್ನು ವಿಚಾರಿಸಿ ನನಗೆ ಕನ್ನಡ ತಂತ್ರಾಂಶ ಮತ್ತು ತಾಂತ್ರಿಕ ಸಲಹೆ-ಸಹಕಾರ ನೀಡಿ ಈ ಇ-ಪುಸ್ತಕ ಹೊರತರುವಲ್ಲಿ ಮುಖ್ಯ ಪಾತ್ರವಹಿಸಿದ ನನ್ನ ಮಗಳು ಶ್ರೀಮತಿ ಸ್ನೇಹ ಮಿರ್ಲೆ ಶ್ರೀಧರ್ ಗೆ ಕೃತಜ್ಞತೆಗಳು. ಈ ಪುಸ್ತಕವನ್ನು ನಾನೇ type, format ಮತ್ತು design ಮಾಡಿ ಕಾಗುಣಿತದ ತಪ್ಪುಗಳನ್ನು ಸಾಧ್ಯವದಷ್ಟು ತಿದ್ದಿದ್ದೇನೆ. ಇನ್ನೂ ಕಾಗುಣಿತದ ತಪ್ಪುಗಳಿದ್ದರೆ, ಮನ್ನಿಸಿ ಓದಿ.

# 1

# ಪೀಠಿಕೆ

ಮಿರ್ಲೆಯ ಬಗೆಗಿನ ಶಾಸನಗಳ ಮತ್ತು ಗೆಜೆಟಿಯರ್ ಗಳ ಸ್ಥೂಲ ಹಾಗೂ ಕನಿಷ್ಠ ದಾಖಲೆಗಳನ್ನು ಬಿಟ್ಟರೆ ಹೆಚ್ಚಿನ ವಿವರಗಳು ಲಿಖಿತರೂಪದಲ್ಲಿ ದೊರೆಯುವುದಿಲ್ಲ. ಕೆಲವು ಪುಸ್ತಕಗಳು ಆಕಸ್ಮಿಕವಾಗಿ ಹಾಗೂ ಪರೋಕ್ಷವಾಗಿ ಅಷ್ಟೇನು ನಿಖರವಲ್ಲದ ಮಾಹಿತಿಯನ್ನು ಒದಗಿಸಬಹುದು. ಆದ್ದರಿಂದ, ಮಿರ್ಲೆ ಇತಿಹಾಸವನ್ನು ಈ ಕನಿಷ್ಠ ಮಾಹಿತಿಗಳನ್ನಿಟ್ಟುಕೊಂಡೆ ಮುಂದಿನ ಪೀಳಿಗಾಗಿ ನಾವೇ ಈಗ ಬೆಳೆಸಬೇಕಿದೆ. ಹೀಗೆ ಮಾಹಿತಿ ಸಂಗ್ರಹಿಸಿ ದಾಖಲಿಸುವಾಗ ಬಹಳ ಜಾಗರೂಕತೆಯಿಂದ ಒಬ್ಬ ಸಂಶೋಧಕನಂತೆ ಮುಂದುವರೆಯಬೇಕಾಗುತ್ತದೆ. ಈ ಕಾರ್ಯದಲ್ಲಿ ಇಂಟರ್ ನೆಟ್ ಧಿಡೀರ್ ಸಂಸ್ಕೃತಿ ಅಷ್ಟೊಂದು ಪ್ರಯೋಜನಕ್ಕೆ ಬಾರದು. ನಾನು ಮಿರ್ಲೆಯಲ್ಲಿ 50 ಮತ್ತು 60ರ ದಶಕದಲ್ಲಿದ್ದೆ. ಈ ಸೀಮಿತ ಕಾಲಮಾನದಲ್ಲಿ ನನ್ನ ಸಂಪರ್ಕಕ್ಕೆ ಬಂದ ವ್ಯಕ್ತಿಗಳ, ಓಡಾಡಿದ ಸ್ಥಳಗಳ ಬಗ್ಗೆ ನಾನು ಅಂದು ಗ್ರಹಿಸಿ ಇಂದು ನೆನಪು ಮಾಡಿಕೊಂಡಂತೆ ಮತ್ತು ಇತರರಿಂದ ಕೇಳಿದ್ದನ್ನು ಮಾತ್ರ ಹೇಳಲು ಸಾದ್ಯ. ಹೀಗೆಯೇ ಅನೇಕರು ಪ್ರಯತ್ನಿಸಿ ಎಲ್ಲವನ್ನೂ ಒಟ್ಟುಗೂಡಿಸಿದರೆ ಮಿರ್ಲೆಯ ಒಂದು ಸ್ಥೂಲ ಚಿತ್ರ ಸಾದ್ಯವಾಗಬುಹುದೇನೊ. ಆದರೂ ಅದು ಪೂರ್ಣ ಮತ್ತು ನಿಖರ ಇತಿಹಾಸ ಎನ್ನಿಸಿಕೊಳ್ಳಲಾರದು. Memory is by its nature subjective and selective ಎಂದು Tony Judt  ಎಂಬ ಯೂರೋಪಿನ ಇತಿಹಾಸಕಾರ ಹೇಳಿದ್ದಾನೆ. ಆದರೂ ನಮ್ಮ ಗುರಿ ಕಲ್ಪಿತ ಸ್ಥಳಪುರಾಣವಲ್ಲ, ನಂಬಲರ್ಹ ಸ್ಥಳೀಯ ಇತಿಹಾಸವಾಗಬೇಕು. ವಿಶ್ವಾಸಾರ್ಹ ಮಾಹಿತಿಗಾಗಿ ಗಂಭೀರ ಪ್ರಯತ್ನಗಳ ಅವಶ್ಯಕತೆ ಇದೆ.

## *ಪೂರ್ವಜರ (ವಂಶಸ್ತರ) ಸಂಶೋಧನೆಯ ಒಂದು ಅಪೂರ್ವ ಮಾದರಿ*

ಮಿರ್ಲೆಯಿಂದ ವಲಸೆ ಹೋದವರು ಒಂದೆರಡು ತಲೆಮಾರಿನ ನಂತರ ವಂಶಸ್ಥರನ್ನು ಅರಸಿ ಮಿರ್ಲೆಗೆ ಯಾವಾಗಲಾದರೂ ಬಂದು ಹುಡುಕುವುದು ಸಹಜ. ಆದರೆ ಇಂತಹ ಒಂದು

ಅಪೂರ್ವ ಪ್ರಸಂಗ ಜ್ಞಾಪಕಕ್ಕೆ ಬರುತ್ತದೆ. Alex Haley ಎಂಬ ಅಮೆರಿಕಾದ ಜನಪ್ರಿಯ ಸಾಹಿತಿ ತನ್ನ ಬಾಲ್ಯದಲ್ಲಿ ಅಜ್ಜಿ ಹೇಳಿದ ಮಾಹಿತಿಯಿಂದ ಪ್ರಭಾವಿತನಾಗಿ ಸುಮಾರು ಆರು ತಲೆಮಾರಿನ ಹಿಂದೆ ಆಫ್ರಿಕಾದಿಂದ ಬಂದ ತನ್ನ ಪೂರ್ವಜರನ್ನು ಹತ್ತು ವರ್ಷಗಳ ಕಾಲ ಮೂರು ಖಂಡಗಳಲ್ಲಿ 5 ಲಕ್ಷ ಮೈಲಿ ಸುತ್ತಾಡಿ ಆಫ್ರಿಕಾದ Juffure ಎಂಬ ಹಳ್ಳಿಯಲ್ಲಿ ಪತ್ತೆ ಹಚ್ಚುತ್ತಾನೆ. Lord Ligonier ಎಂಬಾತ 1767ರಲ್ಲಿ ಅವನ ವಂಶದ ಮೂಲ ಪುರುಷ "ಕುಂಟಕಿಂಟೆ" ಎಂಬ 16 ವರ್ಷದ ಬಾಲಕನನ್ನು ಗುಲಾಮನನ್ನಾಗಿ ಕೊಂಡು ಮೇರಿಲ್ಯಾಂಡಗೆ ಕರೆದೊಯ್ದು ವರ್ಜೀನಿಯಾದ ಪ್ಲಾಂಟರ್ ಒಬ್ಬನಿಗೆ ಮಾರುತ್ತಾನೆ. ಈ ಕುಂಟಕಿಂಟೆಯ ಆರು ತಲೆಮಾರಿನ ಎರಡು ಶತಮಾನಗಳ ಜೀತಗಾರರ 729 ಪುಟದ ಅಧ್ಭುತ ಕಥನವೆ Roots: The Saga of an American Family. ಈ ಲೇಖಕನ ವಸ್ತುನಿಷ್ಠೆ, ಉತ್ಸಾಹ, ಶ್ರದ್ಧೆ ಮತ್ತು ಅರ್ಪಣಾ ಮನೋಬಾವ ಎಲ್ಲರಿಗೂ ಸ್ಪೂರ್ತಿದಾಯಕ. ಸಾಧಾರಣವಾಗಿ ಬೇರೆ ಯಾರಾದರೂ ಆಗಿದ್ದರೆ ತನ್ನ ವಂಶದ ಮೂಲ ಪುರುಷ ಗುಲಾಮ ಎಂದು ತಿಳಿದು ಮುಚ್ಚಿಟ್ಟಿಬಿಡುತ್ತಿದ್ದರೇನೊ!

ಈ ವಿಷಯದಲ್ಲಿ ಇಂಗ್ಲೇಂಡಿನಾದ್ಯಂತ ಎಲ್ಲ ಪ್ರದೇಶಗಳಲ್ಲಿರುವ ಸ್ಥಳೀಯ ಇತಿಹಾಸ ಕೇಂದ್ರಗಳು ಎಲ್ಲರಿಗೂ ಒಂದು ಮಾದರಿ ಎನಿಸಿವೆ. ಯಾವುದೇ ಊರಿನ ಯಾವುದೇ ವ್ಯಕ್ತಿಯ ವಂಶಾವಳಿ, ವೃತ್ತಿ, ಕಡೆಗೆ ಸಮಾಧಿಯ ಗುರುತುಗಳನ್ನು ಬಹಳ ಸುಲಭದಲ್ಲಿ ಈ ಕೇಂದ್ರಗಳಿಂದ ಪಡೆಯಬಹುದಾಗಿದೆ. ಸಾಂಸ್ಕೃತಿಕ ಸಿರಿವಂತಿಕೆ ಅದರ ಸಂರಕ್ಷಣೆಯಲ್ಲಿದೆಯೇ ಹೊರತು, ಸ್ಥಳಪುರಾಣಗಳನ್ನು ಸೃಷ್ಟಿಸಿ, ವೈಭವೀಕರಿಸುವುದರಲ್ಲಿ ಅಲ್ಲ ಎಂಬುದನ್ನು ಮನಗಾಣಬೇಕಾದರೆ ಇಂತಹ ಕೇಂದ್ರಗಳನ್ನು ಅರಿಯಬೇಕು. ಪ್ರತೀ ಪ್ರದೇಶದಲ್ಲಿ ಸುಸಜ್ಜಿತವಾದ ಗ್ರಂಥಾಲಯ, ವಸ್ತು ಸಂಗ್ರಹಾಲಯ, ಕಲಾಕೇಂದ್ರ, ಪತ್ರಾಗರ ಮತ್ತು ಬಹಳ ಮುಖ್ಯವಾಗಿ ಇತಿಹಾಸ ಕೇಂದ್ರಗಳಿವೆ. ಇವುಗಳನ್ನು ತಮ್ಮ ಸಾಂಸ್ಕೃತಿಕ ಸಿರಿವಂತಿಕೆಯ ಧ್ಯೋತಕ ಎಂಬಂತೆ ಆರ್ಥಿಕ ಸಂಪನ್ಮೂಲಗಳ ಕೊರತೆಯ ನಡುವೆಯೂ ಅಚ್ಚುಕಟ್ಟಾಗಿ ನಿರ್ವಹಿಸಿರುವುದು ಬ್ರಿಟೀಷರು ಈ ಕೇಂದ್ರಗಳ ಬಗ್ಗೆ ಇರಿಸಿರುವ ಆದರ, ನಂಬಿಕೆ, ಅಭಿಮಾನ ಮತ್ತು ಪ್ರೋತ್ಸಾಹಗಳ ಧ್ಯೋತಕ. ಹೀಗೊಮ್ಮೆ ವಾಲ್ಸಾಲ್ ಪ್ರಾದೇಶಿಕ

ಕೇಂದ್ರ ಪ್ರಕಟಿಸಿದ ಪುಸ್ತಕದಲ್ಲಿ ನೂರು ವರ್ಷದಷ್ಟು ಹಳೆಯ ಫೋಟೊ ಜೊತೆಗೆ ಅದೇ ಸ್ಥಳದ ಇಂದಿನ ಚಿತ್ರದೊಂದಿಗೆ ವಿವರಿಸಲಾಗಿತ್ತು. ಉತ್ತೇಜಿತನಾಗಿ, ಆ ಕೇಂದ್ರಕ್ಕೆ ಭೇಟಿ ನೀಡಿದಾಗ ಅಲ್ಲಿನ ವಿವಿಧ ಸೇವೆಗಳು ಬೆರಗುಗೊಳಿಸುವಂತಿದ್ದುವು.

ಕನಿಷ್ಟ ಎಲ್ಲರೂ ಅವರವರ ವಂಶದ ಮೂರು-ನಾಲ್ಕು ತಲೆಮಾರಿನ **ವಂಶವೃಕ್ಷದ ನಕ್ಷೆ** (ಚಾರ್ಟ್) ತಯಾರಿಸಲು ಸಾಧ್ಯವಾದರೆ ಒಂದು ಊರಿನ ಮಾಹಿತಿಯ ಮಹಾಪೂರವೇ ದೊರೆತಂತಾಗುತ್ತದೆ.

ಇದುವರೆವಿಗೆ ಅವಜ್ಞೆಗೆ ಒಳಗಾದ  ಮಿರ್ಲೆಯ ಚಾರಿತ್ರಿಕ ಮಾಹಿತಿ/ ಸಂಗತಿಗಳನ್ನ ವಸ್ತುನಿಷ್ಟವಾಗಿ ಸಂಗ್ರಹಿಸಿ ಧಾಖಲು ಮಾಡಿದರೆ ಮಾತ್ರ ಮುಂದಿನ ಪೀಳಿಗೆಗೆ ಮಿರ್ಲೆಯ ನೈಜ ಚಿತ್ರದ ಸ್ವಲ್ಪ ಮಟ್ಟಿನ ಅರಿವು ಮೂಡಿಸಲು ಸಾಧ್ಯ ಎಂದು ನಂಬಿದ್ದೇನೆ. ಈ ಕಾರ್ಯದಲ್ಲಿ ದೊರೆಯಬಹುದಾದ ಅಲ್ಪಸ್ವಲ್ಪ ಧಾಖಲೆಗಳು, ಹಿರಿಯರಿಂದ ದೊರೆತ ಅನೌಪಚಾರಿಕ ಮೌಖಿಕ ಮಾಹಿತಿ/ ಕೇಳಿದ ಅನುಭವಗಳು, ಫೇಸ್ ಬುಕ್ ನ ಮಿರ್ಲೆ ಪೀಪಲ್ ಗ್ರೂಪ್ ನ ಸ್ನೇಹಿತರ ಪ್ರತಿಕ್ರಿಯೆ/ ಚರ್ಚೆ ರೂಪದಲ್ಲಿ ದೊರೆತ ಮಾಹಿತಿ, 50 ಮತ್ತು ೬೦ರ ದಶಕಗಳ ನನ್ನ ಬಾಲ್ಯದಲ್ಲಿ  ಮತ್ತು ಮುಂದಿನ ದಶಕಗಳಲ್ಲಿ ಆಗಾಗ್ಯೆ ಮಿರ್ಲೆಗೆ ಭೇಟಿ ನೀಡಿದಾಗ ಕೇಳಿದ್ದು, ನೋಡಿದ್ದು, ಅನುಭವಿಸಿದ್ದು, ವೈಯಕ್ತಿಕ ಸಂಪರ್ಕಕ್ಕೆ ದೊರೆತಷ್ಟನ್ನು ಮಾತ್ರ ಸುಮಾರು 50 ವರ್ಷಗಳ ನಂತರ ನನ್ನ ನೆನಪಿನ ಶಕ್ತಿಯ ಮಿತಿಯೊಳಗೆ ಈ ಮೂಲಕ ಎಲ್ಲರೊಟ್ಟಿಗೆ ಹಂಚಿಕೊಳ್ಳುವ ಪ್ರಯತ್ನವಿದು. ನನ್ನ ತಲೆಮಾರಿನವರೇ ತಮ್ಮ ಸ್ಮೃತಿ ಕೋಶದಿಂದ ತಿಳಿಸಬಹುದಾದದ್ದು ಬಹಳಷ್ಟಿದೆ. ಇನ್ನು ನನ್ನ ಮುಂದಿನ ತಲೆಮಾರುಗಳ ಮಿರ್ಲೆ ಇತಿಹಾಸ/ ಪರಿಚಯ ಅವರುಗಳಿಂದಲೇ ಆಗಬೇಕು.

## ಹಿಂದಿನದೆಲ್ಲವೂ ಒಳ್ಳೆಯದು, ಇಂದಿನದೆಲ್ಲವೂ ಕೆಟ್ಟದ್ದು ಎಂಬ ಪೂರ್ವಗ್ರಹ

ಗ್ರಾಮೀಣ ಪ್ರದೇಶದಿಂದ ಬಂದ ಸಮಾಜ ಸೇವಾಸಕ್ತ ಸ್ನೇಹಿತರೊಬ್ಬರು ಬಹಳ ನಿಷ್ಠುರವಾಗಿ ಹೇಳುತ್ತಿದ್ದರು: ನಮ್ಮ ಹಳ್ಳಿಗಳ ಬಡತನದ ಬದುಕನ್ನ ನಗರದ ಕೊಳಚೆಗೇರಿ

ಬದುಕಿಗೆ ಹೋಲಿಸಲೇಬಾರದು ಎಂದು. ಹೌದು, ಹಳ್ಳಿಗರು ಪಟ್ಟಣಗಳ ಕೊಳಚೆಗೇರಿ ನಿವಾಸಿಗಳಿಗಿಂತ ಆರ್ಥಿಕವಾಗಿ ದುರ್ಬಲರಿರಬಹುದು, ಆದರೆ ಸಾಂಸ್ಕೃತಿಕವಾಗಿ ಶ್ರೀಮಂತರು. ಹೆಸರೇ ಸೂಚಿಸುವಂತೆ ಕೊಳಚೆಗೇರಿ ಕೊಳಕಿಗೇ ಖ್ಯಾತಿ. ಆದರೆ ಹಳ್ಳಿಯ ಬಡತನಕ್ಕೂ ಕೊಳಕಿಗೂ ಸಂಬಂಧವಿಲ್ಲ. ಈ ಸಂದರ್ಭದಲ್ಲಿ ಮಿರ್ಲೆಯ ಒಂದು ಚಿತ್ರ ನೆನಪಿಸಿಕೊಳ್ಳಲಿಚ್ಛಿಸುತ್ತೇನೆ.  ಹಳ್ಳಿಯಲ್ಲಿ ಬಡವರಾಗಲಿ ಅಥವ ಶ್ರೀಮಂತರಾಗಲಿ ಎತ್ತುಗಳಿಗೆ ಹಸಿರು ಹುಲ್ಲು ಹಾಕಿ ಮಾಲೀಶ್ ಮಾಡಿ ಕೆರೆಗೆ ನೀರುಕುಡಿಸಲು ಹೆಮ್ಮೆ ಯಿಂದ (ಮತ್ತು ಪೈಪೋಟಿಯಿಂದಲೂ) ಮೆರವಣಿಗೆ ಮಾಡಿದಂತೆ ಕರೆದೊಯ್ಯುವ ಗಂಡಸರು ಮತ್ತು ತಾಮ್ರ ಮತ್ತು ಹಿತ್ತಾಳೆ  ಪಾತ್ರೆಗಳನ್ನು (ಕಂಚು ಮುಟ್ಟು) ಪೈಪೋಟಿಯಿಂದ ಫಳ ಫಳ ಹೊಳೆವಂತೆ ಸ್ವಚ್ಛಗೊಳಿಸಿ ತಲೆಮೇಲೆ ಮತ್ತು ಸೊಂಟದಲ್ಲಿ ನೀರಿನ ಬಿಂದಿಗೆ/ ಪಾತ್ರೆ ಹೊತ್ತು ಕೆರೆ ಕಾಲುವೆಯಿಂದ ಮನೆಕಡೆಗೆ ಹೆಮ್ಮೆಯಿಂದ ಪ್ರದರ್ಶಿಸಿತ್ತಿರುವರೋ (ಕ್ಯಾಟ್ ವಾಕ್ ಮಾಡಿ?) ಎಂಬಂತೆ ಸಾಗುವ ಹೆಂಗಸರ ಚಿತ್ರ ಅತ್ಯಂತ ಮುದ ನೀಡುವ ನಮ್ಮ ಕಾಲದ ನೆನಪು.  ಭೂಮಾತೆ ಸೇವೆ , ಗೋಮಾತೆ ಸೇವೆ, ಇತ್ಯಾದಿಗಳಿಗೆ ಮೌಢ್ಯ ಎನ್ನಲು ಹಿಂಜರಿಕೆಯಾದರೂ ವ್ಯವಹಾರಿಕ ಶೂನ್ಯತೆಯಿಂದ ತಮ್ಮ ಜೀವಿತವನ್ನೇ ಸವೆಸುವ ಮುಗ್ಧತೆ ಸರಿಯೆ ಎನ್ನುವ ಪ್ರಶ್ನೆ ಕಾಡುತ್ತದೆ. ನೆನಪು ಆಪ್ಯಾಯಮಾನವಾದ್ದರಿಂದ ಗತಕಾಲದ್ದೆಲ್ಲವೂ ಇಂದಿಗಿಂತ ಒಳ್ಳೆಯದಾಗಿ ಗೋಚರಿಸುತ್ತಿರುತ್ತವೆ.

## ಮಿರ್ಲೆಯ ಅತಿಯಾದ ಖ್ಯಾತಿ ಜೊತೆಗೇ ಸ್ವಲ್ಪ ಕುಖ್ಯಾತಿಯೂ ತಳುಕು ಹಾಕಿಕೊಂಡಿದೆ

ಸಾಧಾರಣವಾಗಿ ನಾವೆಲ್ಲರೂ ಹೆಮ್ಮೆಯಿಂದ ಮಿರ್ಲೆಯವರೆಂದು ಹೇಳಿ ನಮ್ಮ ಊರಿನ ವೈಶಿಷ್ಟ್ಯತೆಗಳು ಮತ್ತು ಪ್ರಸಿದ್ಧಿಯಾದವುಗಳನ್ನು ವಿವರಿಸಬಯಸುತ್ತೇವೆ. ಎಲ್ಲರಿಗೂ ಮಿರ್ಲೆಯ ಬಗ್ಗೆ ಒಳ್ಳೆಯದನ್ನು ಕೇಳಲು ಇಷ್ಟಪಡುತ್ತೇವೆ-ಕಾತರರಾಗಿರುತ್ತೇವೆ. ಆದರೆ ಇತ್ತೀಚೆಗಷ್ಟೆ ಅಷ್ಟೇನು ಅಪೇಕ್ಷಣೀಯವಲ್ಲದ ಕಾರಣಗಳಿಗಾಗಿ ಮಿರ್ಲೆ ಮಾಧ್ಯಮಗಳಲ್ಲಿ ಸುದ್ಧಿಯಾಯಿತು. ಬಹಳ ಹಿಂದಿನಿಂದ ಹಲವಾರು ವಿಷಯಗಳಿಗಾಗಿ ಮಿರ್ಲೆ ಖ್ಯಾತಿ ಹಾಗೂ ಕುಖ್ಯಾತಿ ಎರಡನ್ನೂ ಪಡೆದಿರುವ ಪ್ರತೀತಿಗಳಿವೆ. ಕೆಲವು ಉತ್ಪ್ರೇಕ್ಷೆಯಿಂದ

ಕೂಡಿರಲೂಬಹುದು. ಮಿರ್ಲೆ ಹೆಚ್ಚು ನೀರಾವರಿ ಪ್ರದೇಶಹೊಂದಿರುವ ಜಮೀನ್ದಾರರುಗಳಿರುವ ಸಂಪತ್ ಭರಿತ, ಸಮೃದ್ಧ ಊರು. ಒಟ್ಟಿನಲ್ಲಿ ಮಿರ್ಲೆಯವರು ಶ್ರೀಮಂತರು ಎನ್ನುವುದು ಎಷ್ಟು ಪ್ರಚಲಿತವಿತ್ತೆಂದರೆ ಕಾಲೇಜಿನಲ್ಲಿ ಫೀಜು ಮನ್ನಾಮಾಡುವ ಸಮಿತಿಯವರು ಮಿರ್ಲೆ ವಿಧ್ಯಾರ್ಥಿಗಳಿಗೆ ಫೀಜು ಮನ್ನಾಮಾಡುವುದನ್ನು ನಿರಾಕರಿಸಲು ಮುಂದಾಗುತ್ತಿದ್ದರು. ಮೇಲಾಗಿ ಮಿರ್ಲೆಯವರು ಹೆಚ್ಚು ವರದಕ್ಷಿಣೆ ಕೊಡುವವರು ಇತ್ಯಾದಿ ಧನಾತ್ಮಕ ಗುಣಗಳ ಜೊತೆಜೊತೆಗೆ ಮದುವೆಗೆ ಹೆಣ್ಣು ನೋಡಲು ಬಂದವರನ್ನು ಹೈಜಾಕ್ ಮಾಡಿ ಒಮ್ಮೆಗೇ ನಾಲ್ಕಾರು ಹೆಣ್ಣು ತೋರಿಸುವವರು, ಚಾಡಿ ಹೇಳಿ ಮದುವೆ ತಪ್ಪಿಸುವವರು, ಜಗಳ-ಪುಂಡಾಟಿಕೆಯಲ್ಲಿ ತೊಡಗುವವರು, ಇತ್ಯಾದಿ ಋಣಾತ್ಮಕ ಗುಣಗಳು ಸಾಮಾನ್ಯವಾಗಿ ಕೇಳಿಬರುತ್ತಿತ್ತು. ಇಂತಹ ಅಪಖ್ಯಾತಿಗೆ ಕಾರಣವಾಗುವ ಪ್ರಸಂಗಗಳು ಸಂಖ್ಯೆಯಲ್ಲಿ ಕಡಿಮೆಯಿದ್ದರೂ, ಅಂತಹ ಋಣಾತ್ಮಕ ಪ್ರಸಂಗಗಳಿಗೆ ಸಮಾಜದಲ್ಲಿ ಹೆಚ್ಚಿನ ಆಧ್ಯತೆಮೇಲೆ ಪ್ರಚಾರ-ಪ್ರಸಾರ ಸಿಗುವುದು ಸರ್ವಸಾಧಾರಣ.

ಇಂತಹ ಮಿರ್ಲೆಯ ಕುಖ್ಯಾತಿಗೆ ಕಾರಣವಾದ ಒಂದು ವಿಚಿತ್ರ ಅನುಭವವನ್ನು ಹಂಚಿಕೊಳ್ಳುತ್ತೇನೆ. ಇಲ್ಲಿ ಯಾರನ್ನೂ ಗುರಿಯಾಗಿಸಿ ನಿಂದಿಸಿ ಅವಮಾನಿಸುವ ದುರುದ್ಧೇಶ ಖಂಡಿತ ಇಲ್ಲ.  ಇದು ಮೈಸೂರು ಮಹಾರಾಜ ಕಾಲೇಜಿನ ಪ್ರೊ. ಮೈಲಾರ ರಾವ್ ಬಳಿ 1967ರಲ್ಲಿ ಸ್ನೇಹಿತ ಮಿರ್ಲೆ ರಾಜಣ್ಣ ಮತ್ತು ನಾನು ಮನೆ ಪಾಠಕ್ಕೆ ಸೇರಲು ಹೋದಾಗ ನಡೆದ ಪ್ರಸಂಗ. ಪ್ರೊ. ಮೈಲಾರ ರಾವ್ ಅವರು ವಿಶಿಷ್ಟ ವ್ಯಕ್ತಿತ್ವದ ಖ್ಯಾತ ಇಂಗ್ಲೀಷ್ ಪ್ರಾಧ್ಯಾಪಕರು. ಅವರ ಮನೆ ವರಾಂಡದಲ್ಲಿ ಕುಳಿತು ಪಾಠಕ್ಕೆ ಸೇರಿಸಿಕೊಳ್ಳಲು ಕೋರಿದಾಗ, ಯಾವ ಊರಿನವರು ಎಂದರು. ನಾವು ಮಿರ್ಲೆ ಎಂದ ತತ್ ಕ್ಷಣ ಕೆಂಡಾಮಂಡಲವಾಗಿ ಅವರ ಎಂದಿನ ವಿಶಿಷ್ಟ ಗ್ರಾಮ್ಯ ಬಾಷೆಯಲ್ಲಿ ಬೈದು ನಮ್ಮನ್ನು ಹೊರದೂಡಲು ಮುಂದಾದರು.  ಆ ಕೋಪದಲ್ಲಿ ಅವರು ನಮ್ಮನ್ನು ಹೊಡೆಯದೆ ಇದ್ದದ್ದು ಮತ್ತು ಕತ್ತು ಹಿಡಿದು ಹೊರಗೆ ತಳ್ಳದೇ ಇದ್ದುದೆ ನಮ್ಮ ಪುಣ್ಯ. ನಾವು ಭಂಡತನದಿಂದ ಗೋಗರೆದಮೇಲೆ ಮಿರ್ಲೆಯವರಮೇಲಿನ ಅವರ ಕೋಪದ ಕಾರಣ ಹಿಂದಿನ ವರ್ಷಗಳಲ್ಲಿ ಮಿರ್ಲೆ ವಿದ್ಯಾರ್ಥಿಯೊಬ್ಬ ಪಾಠ ಹೇಳಿಸಿಕೊಂಡು ಹಣ ಕೊಡದೆ ಮೋಸಮಾಡಿದ್ದ ಎಂದು

ತಿಳಿಯಿತು.

ಸಾದಾರಣವಾಗಿ ಜಾತಿ, ಧರ್ಮ, ಗ್ರಾಮೀಣ ಹಿನ್ನೆಲೆ, ಬಾಷೆಗಳಿಂದಗಿ ಪಕ್ಷಪಾತ ತೋರುವುದರಿಂದ ಮುಜುಗರ, ಕೀಳರಿಮೆ ಮತ್ತು ನೋವಿಗೆ ಒಳಗಾಗುವುದುಂಟು. ಆದರೆ ಹುಟ್ಟಿದ ಊರಿನ ಹೆಸರು ಹೇಳಿ ಮುಜುಗರಕ್ಕೊಳಗಾಗಿರುವುದು ಕೆಲವೇ ಸಂದರ್ಭಗಳಾದರೂ ಮರೆಯಲಾರದ ಧುಃಸ್ವಪ್ನದಂತಹ ಅನುಭವಗಳು.

ಊರ ಹೊರಗೆ ಅಪಖ್ಯಾತಿಗೆ ಕಾರಣವಾದ ಹಾಗೂ ಊರಿನ ಅಭಿವೃದ್ಧಿಗೆ ಮಾರಕವಾದ ಕೆಲವನ್ನು ಇಲ್ಲಿ ಸಂಕ್ಷಿಪ್ತವಾಗಿ ಹೇಳಿ, ಹೆಚ್ಚಿನ ವಿವರಗಳನ್ನು ಆಯಾಭಾಗದಲ್ಲಿ ಅವಶ್ಯವೆನಿಸಿದರೆ ವಿವರಿಸುತ್ತೇನೆ. ನೂರು ವರ್ಷಗಳ ಹಿಂದೆ ಸ್ಥಾಪಿಸಿದ ಪೋಲೀಸ್ ಔಟ್ ಪೋಸ್ಟ್ ಮುಚ್ಚಿಸಿದ್ದು, ಜಗಳವಾಡಿ ಸರ್ಕಾರಿ ಬಸ್ ಕಂಡಕ್ಟರ್ ಮೇಲೆ ಹಲ್ಲೆ, ಹಾಡಹಗಲೇ ಬಸ್ ಸಂಚರಿಸುವ ಮುಖ್ಯ ರಸ್ತೆಯಲ್ಲೇ ನಡೆದ ಕೊಲೆ, ಐಯ್ಯರ್ ಹೋಟೆಲ್ ಮುಚ್ಚಿಸಿ ಊರು ಬಿಡಿಸಿದ್ದು, ಬ್ಯಾಂಕ್ ಮೇನೇಜರ್ ಭಯಭೀತರಾಗಿ ತಮ್ಮ ಕುಟುಂಬದ ವಾಸವನ್ನೇ ಕೆ. ಆರ್. ನಗರಕ್ಕೆ ಬದಲಿಸಿ ದಿನವೂ ಅವರೊಬ್ಬರೇ ಅಲ್ಲಿಂದ ಬಂದು ಹೋಗಲು ಆರಂಭಿಸಿದ್ದು, ರಾತ್ರಿ ಕುಡಿದು ಗಲಾಟೆ ಮಾಡುತ್ತಿದ್ದದ್ದರಿಂದ ರಾತ್ರಿ ತಂಗುತ್ತಿದ್ದ ಸರ್ಕಾರೀ ಬಸ್ ಗಳನ್ನು ರದ್ದುಪಡಿಸಿದ್ದು, ಇತ್ಯಾದಿ.

# 2

# ಮಿರ್ಲೆ ಹಿನ್ನೆಲೆ ಮತ್ತು ಹೆಸರು

ಮಿರ್ಲೆ ಮೈಸೂರು ಜಿಲ್ಲೆ ಕೃಷ್ಣರಾಜನಗರ ತಾಲ್ಲೂಕಿನಲ್ಲಿ ಸಾಲಿಗ್ರಾಮದಿಂದ ಪೂರ್ವಕ್ಕೆ 7 ಕಿ. ಮೀ. ಮತ್ತು ಪ್ರಖ್ಯಾತ ಕಾವೇರಿ ಜಲಪಾತ ಚುಂಚನಕಟ್ಟೆಯಿಂದ ದಕ್ಷಿಣಕ್ಕೆ 4 ಕಿ. ಮೀ. ದೂರಕ್ಕೆ ಕಾವೇರಿ ತೀರದಲ್ಲಿ ನದಿಯ ಉತ್ತರಕ್ಕೆ 3 ಕಿ. ಮೀ. ದೂರದಲ್ಲಿ **ಅಕ್ಷಾಂಶ** 12° 31' 39 (ಉತ್ತರ) ಮತ್ತು **ರೇಖಾಂಶ** 76° 18' 53 (ಪೂರ್ವ) [Latitude (DMS): 12° 31' 39 N ; Longitude (DMS): 76° 18' 53 E] ಒಳಗೊಂಡಿದೆ. ಮಿರ್ಲೆಯ ಬಗೆಗೆ ಅರಿಯುವಾಗ ಕೃಷ್ಣರಾಜನಗರ, ಸಾಲಿಗ್ರಾಮ ಮತ್ತು ಚುಂಚನಕಟ್ಟೆ ಬಗೆಗೆ ತಿಳಿಯಬೇಕಾದದ್ದು ಅವಶ್ಯ. ನಕ್ಷೆಯಲ್ಲಿ ಮಿರ್ಲೆ ತಾಲ್ಲೂಕಿನ ಕೇಂದ್ರದಲ್ಲಿದೆ. (ಗೂಗಲ್ ನಕ್ಷೆಯಲ್ಲಿ ಮತ್ತು ಕೆಲವು ಅಂತರ್ಜಾಲ ತಾಣಗಳಲ್ಲಿ ಮಿರ್ಲೆಯನ್ನು ತಪ್ಪಾಗಿ ಗುರುತಿಸಲಾಗಿದೆ. ಉದಾ: ಒಂದೆಡೆ ಅಮೃತೇಶ್ವರ ದೇವಸ್ಥಾನ ಕನ್ನಂಬಾಡಿ ಕಟ್ಟೆಯ ಹಿನ್ನೀರಿನಲ್ಲಿ ಮುಳುಗುವುದರಲ್ಲಿದ್ದುದರಿಂದ ಸ್ಥಳಾಂತರಿಸಲಾಯಿತು ಎಂದಿದೆ!).

ಮಿರ್ಲೆ ತಾಲ್ಲೂಕಿನ ಆರು ಕಂದಾಯ ಹೋಬಳಿಗಳಲ್ಲಿ ಮತ್ತು ಆರು ಜಿಲ್ಲಾ ಪಂಚಾಯಿತಿ ಕ್ಷೇತ್ರಗಳಲ್ಲಿ ಒಂದು. ಅಲ್ಲದೆ 21 ತಾಲ್ಲೂಕು ಪಂಚಾಯಿತಿ ಕ್ಷೇತ್ರಗಳಲ್ಲಿ ಒಂದು. ಮಿರ್ಲೆ ಹೋಬಳಿಗೆ 26 ಕಂದಾಯ ಗ್ರಾಮ/ ಉಪಗ್ರಾಮಗಳು ಸೇರಿವೆ.

ಜಿಲ್ಲೆಯ ಬುಹುಭಾಗ **ಮಿಗ್ ಮೈಟ್** ಎಂಬ ಎರಡು ಶಿಲೆಗಳು (ಗ್ರಾನೈಟೆ ಮತ್ತು ಯಾವುದಾದರೂ ಮತ್ತೊಂದು ಶಿಲೆ) ಬೆರೆತರೂ ಪ್ರತ್ಯೇಕವಾಗಿ ಗುರುತಿಸಬಹುದಾದಂತಹ ಮತ್ತು ಹಲವು ಭಾರಿ ಒಂದಾದಮೇಲೆ ಒಂದರಂತೆ ಸೇರಿರುವ ಶಿಲಾಪದರಗಳಿಂದ ಕೂಡಿದೆ.

ಅತ್ಯಂತ ಹೆಚ್ಚು ಶಾಖದಲ್ಲಿ ರೂಪಾಂತರಗೊಂಡು ಮತ್ತೆ ಘನೀಕರಿಸುವ ಕ್ರಿಯೆಯಲ್ಲಿ ಈ ಶಿಲೆ ಉದ್ಭವವಾಗುತ್ತದೆ.







ಚಾಮರಾಜ ನಾಲೆಯನ್ನು ತೋಡುತ್ತಿದ್ದ ಸರಿ ಸುಮಾರು 1900ರ ಆಸುಪಾಸಿನಲ್ಲಿ ಊರ ಪಕ್ಕದಲ್ಲಿ ದೊಡ್ಡ ಕಪ್ಪು ಬಂಡೆಗಳು ಎದುರಾದದ್ದರಿಂದ ಕಲ್ಲು ಒಡ್ಡರನ್ನು ಕರೆಯಿಸಿ ಕೆಲಸ ಮಾಡಿಸಲಾಯಿತು. ಒಡೆದ ಕಪ್ಪು ಕಲ್ಲುಗಳು ಕಾಲುವೆ ಪಕ್ಕದಲ್ಲಿ ಬಹಳಕಾಲ ಬಿದ್ದಿದ್ದವು.

ಅಂತೆಯೆ ಬಣಜಿಗರ ಬೀದಿಯಲ್ಲಿ ಯತೇಚ್ಛವಾಗಿ ಕಪ್ಪುಕಲ್ಲುಗಳಿದ್ದದರಿಂದ ಕರೀಕಲ್ಲ ಬೀದಿ ಎಂಬ ಹೆಸರು ಬಂದಿತು. ಅಲ್ಲದೆ ಮಿರ್ಲೆಯಲ್ಲಿ ಯತೇಚ್ಛವಾಗಿ ವಿಭುತಿ ಮಣ್ಣು, ಚೌಳು ಮಣ್ಣು ಮತ್ತು ಕಾಗೆ ಬಂಗಾರ (mica) ದೊರೆಯುತ್ತಿತ್ತು.

ಬಹಳಕಾಲ **ಭೂಕಂಪನ ಮುಕ್ತ ಪ್ರದೇಶ** ಎಂದೇ ತಿಳಿದಿದ್ದ ಜಿಲ್ಲೆಯಲ್ಲಿ ಕಳೆದ 150 ವರ್ಷಗಳಲ್ಲಿ ಕರ್ನಾಟಕದ ಇತರ ಪ್ರದೇಶ ಮತ್ತು ಕೊಯಮತ್ತೂರಿನಲ್ಲಿ ಭೂಕಂಪನ ಸಂಭವಿಸಿದಾಗ ಖನಿಷ್ಠ ಕಂಪನವನ್ನು ಅನುಭವಿಸಿದೆ.  ಇತ್ತೀಚೆಗೆ ಮೈಸೂರಿನಲ್ಲಿ 2020ರ ಏಪ್ರಿಲ್ 3 ರಂದು 2.6 ರಷ್ಟು (Richter scale) ಲಘು ಭೂಕಂಪನವಾಗಿದೆ.

## *ಮಿರ್ಲೆ ಎಡತೊರೆ ತಾಲ್ಲೂಕಿನ ಭಾರೀ ಗ್ರಾಮ, ರಸವತ್ತಾದ ಗ್ರಾಮ ಮತ್ತು ಸಂಪತ್ತುಳ್ಳ ಗ್ರಾಮ:*

ಎಡತೊರೆಯ 1902/3ರ ಸುಮಾರಿನ ಅಮುಲ್ದಾರ್ ನವರತ್ನ ರಾಮರಾವ್ ಅವರು "ಎಡತೊರೆ ತಾಲ್ಲೂಕಿನ ಭಾರೀ ಗ್ರಾಮ; ಅದರ ಹೆಸರು ಮಿರ್ಲೆ...ನದಿಯ ಉತ್ತರ ಭಾಗದಲ್ಲಿ ಮಿರ್ಲೆ, ಸಾಲಿಗ್ರಾಮ, ಭೇರ್ಯ ಮೊದಲಾದ ರಸವತ್ತಾದ ಗ್ರಾಮಗಳಿವೆ. ಈ ಗ್ರಾಮಗಳಲ್ಲಿ ಹೆಸರುವಾಸಿಯಾದ ರೈತರುಗಳಿದ್ದರು. ಸಾಮಾನ್ಯವಾಗಿ ಇಲ್ಲಿನ ಮುಖಂಡರೆಲ್ಲ ಒಕ್ಕಲಿಗರೇ" ಎನ್ನುತ್ತಾರೆ. ತಾಲ್ಲೂಕಿನ ಜಲ ಸಂಪತ್ತನ್ನು ಉದ್ದೇಶಿಸಿ ಇನ್ನೊಂದೆಡೆ ನದಿಗಳೇ ಲಾವಣ್ಯವಾದ ಇಲ್ಲಿ ಈಜು ಬಾರದವನೆ ಪಾಪಿ, ದೋಣಿಗಳಲ್ಲಿ ವಿಹರಿಸದವನು ತನ್ನನ್ನು ತಾನು ವಂಚಿಸಿದ ಮೂಢ ಎನ್ನುತ್ತಾರೆ. ಇವರೇ ಮಿರ್ಲೆಯ ಶ್ರೀಮಂತ ಗೌಡರೊಬ್ಬರ ಮನೆಯ ಏಳು ದಿನಗಳ ಅದ್ದೂರಿ ಸಮಾರಂಭಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿ ಅದನ್ನು ವರ್ಣಿಸುತ್ತಾರೆ. ಹೀಗೆ ಮಿರ್ಲೆ ಇತಿಹಾಸದ ಬಗ್ಗೆ ಹೆಮ್ಮೆಪಡಬಹುದಾದಂತಹ ಮಾತುಗಳನ್ನು ಹೇಳಿದ್ದಾರೆ.

ಹಾಗೆ ನೋಡಿದರೆ, ಇಡೀ ತಾಲ್ಲೂಕೆ ಬೆಟ್ಟ ಕಾಡುಗಳಿಲ್ಲದ ಸಮತಲವಾದ ಫಲವತ್ತಾದ ಪ್ರದೇಶ. ಮಿರ್ಲೆ ಅತೀಹೆಚ್ಚು ಪಲವತ್ತಾದ ಜಲ ಸಮೃದ್ಧವಾದ ಪ್ರದೇಶ. ಏಳು ಕಾಲುವೆಗಳು

ಸುಮಾರು 5000 ಎಕರೆ ಭೂಮಿಯನ್ನು ಸದಾ ತಣಿಸುತ್ತವೆ! ಊರಿನ ದಕ್ಷಿಣಕ್ಕೆ ಕಾವೇರಿ ನದಿ ಹರಿಯುತ್ತದೆಯಾದರೆ, ನೈರುತ್ಯಕ್ಕೆ ಸದಾ ತುಂಬಿ ತಾವರೆಹೂಗಳಿದ ಕಂಗೊಳಿಸುವ ವಿಶಾಲವಾದ ಕೆರೆ. ಕೆರೆಯ ಮೇಲ್ಭಾಗದಲ್ಲಿ ನೈರುತ್ಯದಿಂದಲೇ ಆರಂಭಿಸಿ ವಾಯುವ್ಯದಲ್ಲಿ ಲಂಬಕ್ಕೆ ತಿರುಗಿ ಪೂರ್ವಭಾಗದ ಉದ್ದಕ್ಕೂ ನೇರವಾಗಿ ರಭಸದಿಂದ ಹರಿದು ಉರನ್ನೇ ಸುತ್ತುವರಿದಿರುವ ಚಾಮರಾಜ ನಾಲೆ. ಪೂರ್ವದಲ್ಲಿ ನಾಲೆಯ ಮೇಲ್ಭಾಗ ಬಿಟ್ಟರೆ ಮಿಕ್ಕೆಲ್ಲಕಡೆ ಸಮೃದ್ಧ ಬೆಳೆಗಳ ಹಸಿರು ವರ್ಣದ ಬಯಲುಗಳು ಊರನ್ನು ಸುತ್ತುವರೆದಿವೆ. ಈ ನಾಲೆಯ ಮೇಲ್ಭಾಗದಲ್ಲೇ (ಅಂದರೆ ಕೊಪ್ಪಲಿನಲ್ಲೇ) ಊರಿನ ವಿಸ್ಥರಣೆ ಸಾದ್ಯವಿದ್ದದ್ದರಿಂದ 1960ರಷ್ಟರಲ್ಲೇ ಹೊಸ ಮನೆಗಳು ನಾಲೆಯ ಮೇಲ್ಭಾಗದಲ್ಲಿ ಅಲ್ಲಲ್ಲಿ ಕಾಣಿಸಿಕೊಂಡಿದ್ದವು.

## *ಮಿರ್ಲೆ ತಂಪು, ಹಸಿರು ವಾತಾವರಣವಿರುವ ನವಿಲು, ಜಿಂಕೆಗಳ ತಾಣ:*

ಬೆಂಗಳೂರು ಬೇಸಿಗೆಯ 39 ಡಿಗ್ರೀ ಶಖೆಯಲ್ಲಿ ಬೇಯುತ್ತಿರುವಾಗ ಮಿರ್ಲೆಯ ಗದ್ದೆ ಬಯಲನ್ನು ನೆನಪಿಸಿಕೊಳ್ಳುವುದೇ ಆಹ್ಲಾದಕರ. ಧೃಷ್ಠಿ ಹಾಯುವಷ್ಟೂ ದೂರ ಎಲ್ಲಿ ನಿಂತರೂ ಸುತ್ತ 360 ಡಿಗ್ರಿ ಹಚ್ಚಹಸಿರು, ಶುಧ್ಧ ಗಾಳಿ ಮತ್ತು ಏಳು ಕಾಲುವೆಗಳಿಂದ ಆವೃತವಾದ ಸುಮಾರು 5000 ಎಕರೆ ನೀರಾವರಿಗೆ ಒಳಪಟ್ಟ ಜಮೀನು ತರುವ ತಂಪು ಮಿರ್ಲೆಯ ವಾತಾವರಣದ ವಿಶೇಷತೆ. ಅದರಲ್ಲೂ ಅಕ್ಟೋಬರ್ ಮತ್ತು ನವೆಂಬರ್ ಮಾಸಗಳಲ್ಲಿ ಪಚ್ಚೆ



ಹಸಿರು ಮತ್ತು ನೀಲಿ ಆಕಾಶಗಳಲ್ಲದೆ ಮತ್ತೇನು ಕಾಣಿಸದಷ್ಟು ಮಿರ್ಲೆಯ ಗದ್ದೆಬಯಲು ಆಹ್ಲಾದಮಯವಾಗಿರುತ್ತದೆ. ಒಂದು ನಾಲೆಯ ಏರಿಮೇಲೆ ನಿಂತಲ್ಲಿಂದಲೇ ಸುತ್ತಲೂ ತೆಗೆದ

ಈ ನಾಲ್ಕು ಫೋಟೋಗಳನ್ನು ಗಮನಿಸಿ.





## ಮಿರ್ಲೆಯಲ್ಲಿ ನವಿಲುಗಳು!

ಇಪ್ಪತ್ತನೇ ಶತಮಾನದ ಪೂರ್ವಾರ್ಧದಲ್ಲಿ ಮಿರ್ಲೆಯ ಪೂರ್ವ ಮತ್ತು ಈಶಾನ್ಯ ದಿಕ್ಕಿನ ಹೊಲಗಳಲ್ಲಿ (ಕುಷ್ಕಿ ಜಮೀನು) ಸಾಕಷ್ಟು ಜಿಂಕೆ ಮತ್ತು ನವಿಲುಗಳಿದ್ದವು ಎಂದು ಕೇಳಿದ್ದೆ. ಆದರೆ ಈಗಲೂ ನವಿಲು ಇರುವುದನ್ನು ಅನಿರೀಕ್ಷಿತವಾಗಿ ಚಾಮರಾಜ ನಾಲೆಯ ದಂಡೆಯಮೇಲೆ ಹತ್ತಿರದಿಂದ ನೋಡಿ ಖುಷಿಯಾಯಿತು. ಪಕ್ಕದಲ್ಲೇ ನೀರಾವರಿ ಗದ್ದೆಯಲ್ಲಿಯೇ ಬೆಳೆದ ಸಮೃದ್ಧ ಅಡಿಕೆ ತೋಟ ಬಿರು ಬೇಸಿಗೆಯಲ್ಲಿಯೂ ತಂಪೆನಿಸಿತು.




## ಹುಲ್ಲೆಬೋರೆ ಕಾವಲು

ಈ ಹೆಸರು ಹಿಂದೆ ಜಿಂಕೆಗಳ ತಾಣವಾಗಿತ್ತೆ ಎಂಬ ಕಾರಣಕ್ಕಾಗಿ ಹುಟ್ಟಿರಬಹುದೆಂಬ ಕುತೂಹಲ ಹುಟ್ಟಿಸುತ್ತದೆ. ಹುಲ್ಲೆಬೋರೆ ಪಟೇಲರು ಮಿರ್ಲೆಯಲ್ಲಿ ಇದ್ದರು. ಅಂದರೆ ಅಲ್ಲಿ ಒಂದು ಊರು ಇದ್ದಿತೆ ಎಂಬ ಅನುಮಾನವೂ ಹುಟ್ಟುತ್ತದೆ.  ನನ್ನ ಬಾಲ್ಯದಲ್ಲಿ ಮಿರ್ಲೆಯ

 

ಪೂರ್ವ/ ಈಶಾನ್ಯ ದಿಕ್ಕಿನ ನಮ್ಮ ಹೊಲಗಳಲ್ಲಿ ಜಿಂಕೆಗಳು ಇದ್ದವು ಎಂದು ಕೇಳಿದ್ದೆ. ನವಿಲುಗಳು ಇದ್ದು ನವಿಲುಗರಿಗಳು ದೊರೆಯುತ್ತಿದ್ದುವು. ನನ್ನ ತಾಯಿ ಹೊಲದಿಂದ ನವಿಲು ಮೊಟ್ಟೆಗಳನ್ನು ತಂದು ಕೋಳಿಮೋಟ್ಟೆಯೊಟ್ಟಿಗೆ ಇಟ್ಟು ಮರಿ ಮಾಡಿಸಿದ್ದ ನೆನಪು. ನಂತರದ ವರ್ಷಗಳಲ್ಲಿ ಬಾತು ಮೊಟ್ಟೆಗಳನ್ನೂ ಕೋಳಿ ಮೋಟ್ಟೆಯೊಡನೆ ಇಟ್ಟು ಮರಿಮಾಡಿಸುತ್ತಿದ್ದರು. ಜಿಂಕೆಗಳಿದ್ದದ್ದು ಮತ್ತು ಸಣ್ಣಮಠದ ಬಳಿ ಕಾವೇರಿಯಲ್ಲಿ ಮೊಸಳೆಗಳಿದ್ದದ್ದನ್ನು ಕೇಳಿದ್ದೇನೆ. 2001ರ ಜನಗಣತಿ ಪ್ರಕಾರ ಮಿರ್ಲೆ ಹೋಬಳಿಗೆ ಸೇರಿದ 26 ಕಂದಾಯ ಗ್ರಾಮ/ ಉಪಗ್ರಾಮಗಳ ಪೈಕಿ ಹುಲ್ಲೆಬೋರೆ ಕೊಪ್ಪಲು ಸೆರಿದೆ.

## ಜಿಲ್ಲೆ, ತಾಲ್ಲೂಕು ಮತ್ತು ಸಮೀಪದ ಗ್ರಾಮಗಳು

### ಕೆ. ಆರ್. ನಗರ:

ತಾಲ್ಲೂಕು ಕೇಂದ್ರ ಕೆ. ಆರ್. ನಗರದ ಹಿಂದಿನ ಹೆಸರು, ಹಳೆಯ ಊರಿನ ಎಡಭಾಗದಲ್ಲಿ ಹರಿಯುವ ತೊರೆ (ಕಾವೇರಿ ನದಿ) ಇದ್ದದ್ದರಿಂದ ***ಎಡತೊರೆ*** ಎಂದಿತ್ತು. ರಾಜೇಂದ್ರ ಚೋಳನು 11ನೇ ಶತಮಾನದಲ್ಲಿ ಗಂಗರನ್ನು ಸೋಲಿಸಿ ಎಡತೊರೆಯನ್ನು ವಶಪಡಿಸಿಕೊಂಡಿದ್ದನೆಂಬ ಮಾಹಿತಿ ಇದೆ. ಹನ್ನೆರಡನೇ ಶತಮಾನದ ಚೋಳ ದಾಖಲೆಯಂತೆ ತುರೈನಾಡಿನ 'ಇಡೈತುರೈನಾಡ್' ಇದಾಗಿತ್ತು. ಈ ದ್ರಾವಿಡ ಪದ 'ಇಡೈತೊರೆ' ಮುಂದೆ 'ಎಡತೊರ" ಯಾಯಿತು. ಕ್ರಿ. ಶ. 1391ರ ವಿಜಯನಗರ ದಾಖಲೆಯಲ್ಲಿ 'ಎಡತೊರೆ' ಎಂದೇ ಇದೆ.

ಮುಮ್ಮಡಿ ಕೃಷ್ಣರಾಜ ಒಡೆಯರ ಆಡಳಿತಾವಧಿಯಲ್ಲಿ (1811-31) ಈಸ್ಟ್ ಇಂಡಿಯಾ ಕಂಪನಿಯ ನಿಬಂಧನೆಯಂತೆ ಮತ್ತು ಪ್ರಜೆಗಳ ಕ್ಷೇಮಾಭಿವೃದ್ಧಿಗಾಗಿ 18 ಕಛೇರಿಗಳು, 6 ಪೌಜುದಾರಿ (ತುಕಡಿ) ಗಳನ್ನು ಮತ್ತು 125 ಗಡಿ (ತಾಲ್ಲೂಕು) ಗಳನ್ನು ಸ್ಥಾಪಿಸಿದರು. ಅಷ್ಟಗ್ರಾಮದ ತುಕಡಿಯಲ್ಲಿನ 28 ತಾಲ್ಲೂಕುಗಳಲ್ಲಿ ಎಡತೊರೆ ಮತ್ತು ಸಾಲಿಗ್ರಾಮಗಳೆರಡೂ ಸೇರಿದ್ದುವು (ರಾಮ ಕೃಷ್ಣರಾವ್, ಬಿ. (ಸಂ)., *೧೯೧೬ ಮತ್ತು ೧೯೨೨, ಭಾಗ 2, ಪು. 39).* ಹನಸೋಗೆ ಹೋಬಳಿಯನ್ನು ಅರಕಲಗೂಡಿನಿಂದ

ಎಡತೊರೆಗೆ ಮತ್ತು ಹಳ್ಳಿಮೈಸೂರು ಹೋಬಳಿಯನ್ನು ಎಡತೊರೆಯಿಂದ ಹೊಳೇನರಸಿಪುರ ತಾಲ್ಲೂಕಿಗೆ 1882ರಲ್ಲಿ ವರ್ಗಾಯಿಸಲಾಯಿತು. ಎಡತೊರೆಯಲ್ಲಿ (ಅಂದರೆ ಡೋರ್ನ ಹಳ್ಳಿಯಲ್ಲಿ) 1780ರಲ್ಲಿಯೇ ಸೆಂಟ್ ಆಂತೋಣಿ ಚರ್ಚ್ ಎಂಬ ರೋಮನ್ ಕ್ಯಾತೊಲಿಕ್ ಚರ್ಚ್ ಆರಂಭವಾಯಿತು.

.

ಬಿ. ಎಲ್. ರೈಸ್ ಅವರ ಪ್ರಕಾರ 1876ರಲ್ಲಿ ಎಡತೊರೆಗೆ 7 ಹೋಬಳಿಗಳು ಸೇರಿದ್ದವು. ತಾಲ್ಲೂಕಿನಲ್ಲಿ ಅತ್ಯಂತ ಹೆಚ್ಚು ಜನಸಂಖ್ಯೆ ಇದ್ದ ಊರು ಸಾಲಿಗ್ರಾಮ (3788), ನಂತರದ ಊರು ಮಿರ್ಲೆ (2511) ಮತ್ತು ಮೂರನೆ ಸ್ಥಾನದಲಿ ಎಡತೊರೆ (2413) ಇತ್ತು. ಮುಂದೆ ಬಹಳಕಾಲ 20ನೇ ಶತಮಾನದ ವರೆವಿಗೆ ಜನಸಂಖ್ಯೆಯಲ್ಲಿ ಹಾಗೂ ವಾಣಿಜ್ಯ ವ್ಯವಹಾರ ಮತ್ತು ವರಮಾನದಲ್ಲಿ ಸಾಲಿಗ್ರಾಮ ಪ್ರಥಮ ಸ್ಥಾನದಲ್ಲೇ ಇತ್ತು. ಅಮುಲ್ದಾರ್ ನವರತ್ನ ರಾಮರಾವ್ ಎಡತೊರೆಯನ್ನು ರೋಗರುಜಿನಗಳ ಊರು ಎಂದು ಬಣ್ಣಿಸಿ ಹಂಪಾಪುರದಲ್ಲಿ ವಾಸವಿರಲು ತೀರ್ಮಾನಿಸುತ್ತಾರೆ. ಹೀಗಿದ್ದೂ ಎಡತೊರೆ ತಾಲ್ಲೂಕು ಕೇಂದ್ರವೆನಿಸಿದ್ದು ಚಾರಿತ್ರಿಕ ವಿಪರ್ಯಾಸ! ಬಹುಷಹ ಆಯಾ ಕಾಲದ ರಾಜಕೀಯ ಮುಖಂಡರ ಪ್ರಭಾವ! ಎಡತೊರೆ ತಾಲ್ಲೂಕು ಕೇಂದ್ರವಾಗಲು ರಾಜ್ಯ ರಾಜಧಾನಿಗೆ ಅತ್ಯಂತ ಹತ್ತಿರವಿರುವ ಉರಾಗಿಯೂ ಮತ್ತು ತಾಲ್ಲೂಕಿನ ಅತ್ಯಂತ ಪುರಾತನ ಊರಾಗಿದ್ದಿದ್ದೇ ಕಾರಣವಾಗಿಯೂ ಇರಬಹುದು. ಮಂಡ್ಯ ಪ್ರತ್ಯೇಕ ಜಿಲ್ಲೆಯದಾಗ (1939-40 ರಲ್ಲಿ) ಕೂಡ ಕೆ. ಆರ್. ನಗರ, ಸಾಲಿಗ್ರಾಮ ಮತ್ತು ಮಿರ್ಲೆ ಮೂರೂ ಊರುಗಳೂ ಕಿರಿಯ ಮುನಿಸಿಪಾಲಿಟಿಗಳೇ ಆಗಿದ್ದುವು. ಸಾಲಿಗ್ರಾಮ ಮತ್ತು ಮಿರ್ಲೆ ಗ್ರಾಮಗಳು 80ರ ದಶಕದಲ್ಲಿ ಟೌನ್ ಪಂಚಾಯಿತಿಗಳಾಗಿದ್ದು, ನಂತರ ಮಂಡಲ್ ಪಂಚಾಯಿತಿಗಳಾಗಿ ಮಾರ್ಪಟ್ಟುವು.

ಸುಮಾರು 50 ವರ್ಷಗಳ ನಂತರ, ಇಪ್ಪತ್ತನೇ ಶತಮಾನದಲ್ಲಿ, ಕನ್ನಂಬಾಡಿ ಕಟ್ಟೆ ಕಟ್ಟುವಾಗ ಮುಳುಗಡೆ ಭೀತಿಯಲ್ಲಿದ್ದ ಎಡತೊರೆಯನ್ನು ಕಾವೇರಿ ಬಲದಂಡೆಯಲ್ಲಿ 3 ಕಿ. ಮೀ. ದೂರಕ್ಕೆ ವರ್ಗಾಯಿಸಿ ಸುಮಾರು ಹತ್ತು ವರ್ಷಗಳ ಕಾಲ ಜರ್ಮನ್ ಇಂಜಿನಿಯರ್ ಕ್ರುಂಬ್ಲಿಗಲ್ ಅವರ ಮಾರ್ಗದರ್ಶನದಲ್ಲಿ ವ್ಯವಸ್ಥಿತವಾಗಿ ರೂಪುಗೊಂಡು, 1934ರಲ್ಲಿ

ಕೃಷ್ಣರಾಜನಗರ ಎಂದು ಮರುನಾಮಕರಣ ಮಾಡಲಾಯಿತು. ಆಗ ಪುರಸಭಾ ಕಂದಾಯ ಅಧಿಕಾರಿಗಳಾಗಿದ್ದ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರೇ 1928-29ರ ಸಾಲಿನ 'ನವನಗರ ನಿರ್ಮಾಣ ಸಮಿತಿ'ಯ ಅಧ್ಯಕ್ಷರಾಗಿಯೂ ಕಾರ್ಯ ನಿರ್ವಹಿಸಿದ್ದರು

## *ಎಡತೊರೆ ಬಗೆಗೆ 117 ವರ್ಷಗಳ ಹಿಂದಿನ ಅಮುಲ್ದಾರ್ ನ. ರಾಮರಾವ್ ಅವರ ಸ್ವಾರಸ್ಯಕರ ಅನಿಸಿಕೆಗಳು*




"ಆಗಿನ ಎಡತೊರೆಯಲ್ಲಿ ಕತ್ತೆಗಳ ಅವಾಂತರ ಬಹಳ", "ಎಡತೊರೆ ಬಹಳ ಪುಂಡ ತಾಲ್ಲೂಕೆಂದು ನನ್ನನ್ನು ಜನರು ಹೆದರಿಸಿದ್ದರು" ಮತ್ತು "ಎಡತೊರೆ ಅನಾರೋಗ್ಯವಾದ ಊರು" ಎನ್ನುವ ಅವರು ಹಿಂದಿನ ಅಮುಲ್ದಾರರು ಎಡತೊರೆಯಲ್ಲಿ ಖಾಯಿಲೆ ಬಿದ್ದು ನಂತರ ಹಂಪಾಪುರದಲ್ಲಿ ವಾಸವಾಗಿದ್ದದ್ದರಿಂದ ತಾವೂ ಹಂಪಾಪುರದಲ್ಲೇ ಬಹುಕಾಲ ವಾಸವಿದ್ದೆ ಎನ್ನುತ್ತಾರೆ. ಅಲ್ಲದೆ ಬ್ರಾಹ್ಮಣರಲ್ಲಿ ಕೆಲವರು ಕೋರ್ಟು ಕಚೇರಿಗಳಲ್ಲಿನ ವ್ಯವಹಾರಗಳಲ್ಲಿ ತಮ್ಮ ಬುದ್ಧಿವಂತಿಕೆಯನ್ನು ದುರ್ವಿನಿಯೋಗ ಮಾಡಿ ದುರ್ವ್ಯಾಜ್ಯಗಳನ್ನು ಹೂಡಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದರು. ಇಷ್ಟೆಲ್ಲಾ ಹೇಳಿದವರು, ಈಗಲೂ ಇಳಿವಯಸ್ಸಿನಲ್ಲಿ ಬಹುಭಾಗದ ಅನುಭವದ ಬೆಳಕಿನಲ್ಲೂ ಯಡತೊರೆಯ ಜನಗಳ ಮೇಲೆ ತಮಗೆ ಸ್ವಜನಗಳ ಮೇಲಿನಂತೆ ಮಮತೆ ಎನ್ನುತ್ತಾರೆ. "ಖಾಸಗಿ ಜನಗಳಲ್ಲಿ ಬಹಳ ಮಾನ್ಯರಾದವರು ಶಿವೋಜಿರಾಯರೆಂಬ ಮರಾಠೆ ಜಮೀನ್ದಾರರು". ಅವರಿಗೆ ಸಾವಿರಾರು ಖಂಡಿಗ ಭತ್ತ ಬೆಳೆವ ನೂರಾರು ಎಕರೆ ನಾಲಾ ಕೆಳಗಿನ ಜಮೀನು ಇತ್ತು. ಇವರ ಮಗ ದೇವೋಜಿರಾಯರು. ಇವರ ಪೂರ್ವಿಕರು Montgomery ಎಂಬ ಬ್ರಿಟೀಷ ಅಧಿಕಾರಿ ಬಳಿ ಮುಂಬಯಿಯಲ್ಲಿ ಸರದಾರನಾಗಿ ಕೆಲಸ ಮಾಡುತ್ತಿದ್ದು, Montgomery ಯವರು ಮೈಸೂರಿಗೆ ದೊಡ್ಡ ಪದವಿಗೆ ಬಂದಾಗ ಆ ಮರಾಠಿ ಸರದಾರನ ದಕ್ಷತೆ ಮತ್ತು ನಿಯತ್ತನ್ನು ನೋಡಿ ಕೇಳಿದ ಕಡೆ ಕೇಳಿದಷ್ಟು ಜಮೀನು ಕೊಟ್ಟರಂತೆ.

## ಸಾಲಿಗ್ರಾಮ

**ಸಾಲಿಗ್ರಾಮ**ವನ್ನು ಗಂಗರಸರ ಮೂಲ ನೆಲೆ ಎಂದು ಗುರುತಿಸಿ, ಇದು ಗಂಗರ ಎರಡನೇ ರಾಜಧಾನಿ (1079 ಮತ್ತು 1104/5ರ ಧಾಖಲೆಗಳಿವೆ) ಎಂದೇ ಪ್ರಸಿದ್ಧಿಯಾಗಿತ್ತು. ನಂತರದ ಚರಿತ್ರೆಯಲ್ಲಿ ಇದು ಕೊಂಗಾಳ್ವರ ಕೇಂದ್ರವೆನಿಸಿತು. ಜೈನ ಬಸ್ತಿಗಳನ್ನು ಸಾಲಿಗ್ರಾಮದಲ್ಲಿ 1878 ರಲ್ಲಿ ಕಟ್ಟಲಾಯಿತು. ಹಿಂದುಗಳಲ್ಲದೆ, ಐತಿಹಾಸಿಕವಾಗಿ ಜೈನ ಮತ್ತು ಮುಸ್ಲಿಮರಿಗೆ ಪ್ರಮುಖ ಸ್ಥಳವಾದ ಸಾಲಿಗ್ರಾಮ ಮೇಲುಕೋಟೆಗೆ ಸರಿಸಮನಾದ ಶ್ರೀವೈಷ್ಣವ ಧಾರ್ಮಿಕ ಕೇಂದ್ರವೂ ಆಗಿತ್ತು.

### *ಹಲವಾರು ವಿಶೇಷ ಅರ್ಹತೆಗಳಿದ್ದೂ ಸಾಲಿಗ್ರಾಮ ತಾಲ್ಲೂಕು ಕೇಂದ್ರವಾಗಲಿಲ್ಲ!*

'ನಾನು ಮಿರ್ಲೆಯವನು" ಎಂದು ಎಲ್ಲಾದರೂ ಹೇಳಿದರೆ, 'ಓ ಮಿರ್ಲೆ-ಸಾಲಿಗ್ರಾಮವೇ' ಎಂದು ಅವೆರಡೂ ಅವಳಿ ಗ್ರಾಮಗಳೇನೊ ಎಂಬಂತೆ ಪ್ರತಿಕ್ರಿಯಿಸುವುದು ಶತಮಾನಗಳಿಂದ ರೂಢಿಯಲ್ಲಿದೆ. ಈ ಗ್ರಾಮಗಳೆರಡೂ ತಾಲ್ಲೂಕಿನ ಬೌಗೋಳಿಕ ಕೇಂದ್ರದಲ್ಲಿವೆ (ಭೂಪಟ ನೋಡಿ). ತಾಲ್ಲೂಕು ಕೇಂದ್ರದ ಹೊರಗೆ ಮೊಟ್ಟಮೊದಲಿಗೆ ಸಬ್ ರಿಜಿಸ್ಟ್ರಾರ್ ಕಛೇರಿ, ಪಶುವೈಧ್ಯಶಾಲೆ ಮತ್ತು ಪೋಲೀಸ್ ಔಟ್ ಪೋಸ್ಟ್ ಗಳನ್ನು ಮಿರ್ಲೆಯಲ್ಲಿ ಆರಂಬಿಸಲಾಯಿತಾದರೂ ವಾಣಿಜ್ಯ ಮತ್ತು ಶೈಕ್ಷಣಿಕ ಕೇಂದ್ರವಾಗಿ ಸಾಲಿಗ್ರಾಮ ಬಹಳ ಖ್ಯಾತಿ ಪಡೆದಿತ್ತು (ಮಿರ್ಲೆಯ ನೂರು ವರ್ಷಗಳ ಹಿಂದಿನ ಪೋಲೀಸ್ ಠಾಣೆ ಕಟ್ಟಡದ ಇಂದಿನ ಚಿತ್ರ ನೋಡಿ) . ಪ್ರೌಡಶಿಕ್ಷಣಕ್ಕೆ ಮಿರ್ಲೆ ವಿಧ್ಯಾರ್ಥಿಗಳು ಸಾಲಿಗ್ರಾಮವನ್ನೇ ಅವಲಂಬಿಸಿದ್ದುದಲ್ಲದೆ, ಸರ್ಕಾರಿ ಪ್ರೌಡಶಾಲೆ ಆರಂಭವಾದ ಮೇಲೂ ಹಲವಾರು ವರ್ಷಗಳು ಸಾಲಿಗ್ರಾಮವೇ ಎಸ್ ಎಸ್ ಎಲ್ ಸಿ ಪರೀಕ್ಷಾ ಕೇಂದ್ರವಾಗಿತ್ತು. ಸುಮಾರು ೧೯೭೦ರ ಧಶಕದವರೆವಿಗೂ ಮಿರ್ಲೆಯವರಿಗೆ ಸಾಲಿಗ್ರಾಮದ ಹೈಸ್ಕೂಲ್ , ಪೋಲೀಸ್ ಠಾಣೆ, ಹೋಟೆಲ್, ಸಂತೆ, ಅಂಗಡಿ ಬೀದಿ, ಪದ್ಮಾಂಬ ಚಿತ್ರಮಂದಿರ, ಇತ್ಯಾದಿಗಳ ಬಳಕೆ ಕೆ. ಆರ್. ನಗರಕ್ಕಿಂತ ಅಧಿಕವಾಗಿತ್ತು.

ಈ ಹಿಂದೆ ತಿಳಿಸಿದಂತೆ ಮುಮ್ಮಡಿ ಕೃಷ್ಣರಾಜ ಒಡೆಯರ ಆಡಳಿತಾವಧಿಯಲ್ಲಿ ಅಷ್ಟಗ್ರಾಮದ ತುಕಡಿಯಲ್ಲಿನ 28 ತಾಲ್ಲೂಕುಗಳಲ್ಲಿ ಎಡತೊರೆ ಮತ್ತು ಸಾಲಿಗ್ರಾಮಗಳೆರಡೂ ಸೇರಿದ್ದುವು (ರಾಮಕೃಷ್ಣರಾವ್, ಬಿ. (ಸಂ), *೧೯೧೬ ಮತ್ತು ೧೯೨೨, ಭಾಗ 2, ಪು. 39).* ಚಾರಿತ್ರಿಕ, ವಾಣಿಜ್ಯ, ಆಡಳಿತ ಇತ್ಯಾದಿ ಧೃಷ್ಟಿಯಿಂದಲೂ ಸಾಲಿಗ್ರಾಮ ಜಿಲ್ಲೆಯ ಒಂದು ಪ್ರಮುಖ ಗ್ರಾಮ. ಸಾಲಿಗ್ರಾಮ ಮತ್ತು ಮಿರ್ಲೆ ತಾಲ್ಲೂಕಿನ ಭರ್ಜರಿ ಗ್ರಾಮಗಳು, ಸಾಲಿಗ್ರಮದಲ್ಲಿ ಒಳ್ಳೆಯ ಹೆಸರುವಾಸಿಯಾದ ರುಸ್ತುಂ ದೇವರಸೇಗೌಡರೆಂಬ ಪಟೇಲರಿದ್ದರು ಮತ್ತು ಇದು ದುಷ್ಟರ ಕೊಂಪೆ ಕೂಡ, ಅಧಿಕಾರಿಗಳಿಗೆ ಎಕ್ಕಡಗಳ ಸರ ಹಾಕಿ ಕತ್ತೆಯ ಮೇಲೆ ಕೂಡಿಸಿ ಮೆರವಣಿಗೆ ಮಾಡಿದ್ದ ಊರು ಎಂದು ಕೇಳಿದ್ದೆ ಎನ್ನುತ್ತಾರೆ ***ಅಮುಲ್ದಾರ್ ನ. ರಾಮರಾವ್.***

ಕಡೆಗೂ ಸಾಲಿಗ್ರಾಮ ಕೆ .ಆರ್ .ನಗರದಿಂದ ಬೇರ್ಪಟ್ಟು ಪ್ರತ್ಯೇಕ ತಾಲ್ಲೂಕಾಗಲಿದೆ ಮತ್ತು ಮಿರ್ಲೆ ಮತ್ತು ಚುಂಚನಕಟ್ಟೆ ಹೋಬಳಿಗಳು ಸಾಲಿಗ್ರಾಮ ತಾಲ್ಲೂಕಿಗೆ ಸೇರಲಿವೆ ಎಂಬ ನಿರೀಕ್ಷೆಯೊಂದಿಗೆ ಶತಮಾನಗಳ ಒಂದು ತಪ್ಪು ಅಥವ ಪಕ್ಷಪಾತಿ ನಿರ್ಧಾರಕ್ಕೆ ಸ್ವಲ್ಪ ಸಮಜಾಯಿಷಿ ದೊರೆಯಲಿದೆ !

---

**ಪ್ರತಿಕ್ರಿಯೆ:**

**ಕಿಶೋರ್ ಕುಮಾರ್**: ಮಿರ್ಲೆಯ ಇತಿಹಾಸವನ್ನು ಪರೀಕ್ಷಿಸಿ ನೋಡಿದರೆ ಯಾವತ್ತೋ ತಾಲ್ಲೂಕು ಕೇಂದ್ರವಾಗಬೇಕಿತ್ತು ಏಕೆಂದರೆ ಸ್ವಾತಂತ್ರ್ಯ ಪೂರ್ವದಲ್ಲೇ ಎಲ್ಲಾ ಮೂಲಭೂತ ಸೌಕರ್ಯ, ಉತ್ತಮ ನೀರಾವರಿ, ಯೋಜನಭರಿತ ರಸ್ತೆ, ಗ್ರಾಮನಿರ್ಮಾಣದಿಂದ ರಾಷ್ಟ್ರದಲ್ಲಿರುವ ಕೆಲವು ಮಾದರಿ ಗ್ರಾಮಗಳಲ್ಲೊಂದು ಆಗಿತ್ತು. ಆದರೆ ಒಳಜಗಳ, ಸ್ವಪ್ರತಿಷ್ಟೆಗೆ ಒಳಪಟ್ಟು ಆಕಸ್ಮಾತ್ ಗ್ರಾಮದ ಜನತೆ ಮುಂದುವರಿದರೆ ತಮ್ಮ ಜಮೀನುದಾರಿಕೆ ಹಾಗೂ ಯಜಮಾನಿಕೆಗೆ ಎಲ್ಲಿ ಭಂಗ ಬರುವುದೋ ಎಂಬ ಭಯದಿಂದ ಕೆಲವು ಊರ ಮುಖಂಡರು ಎನಿಸಿಕೊಂಡ ಘಟಭದ್ರ ಹಿತಾಸಕ್ತಿಗಳು ಊರಿನ ಬೆಳವಣಿಗೆಯ ವೇಗಕ್ಕೆ ಕಡಿವಾಣ ಹಾಕುವಲ್ಲಿ ಯಶಸ್ವಿಯಾದರು ಮಿರ್ಲೆಗಿಂತ ಹಿಂದಿದ್ದ ಸಾಲಿಗ್ರಾಮ ಹಾಗೂ ಭೇರ್ಯಗಳ ಈಗಿನ ಪರಿಸ್ಥಿತಿ ಉತ್ತಮವಾಗಿದೆ. ಈ ಎಲ್ಲಾ ವಿಷಯಗಳು ನಮ್ಮ ಪಾಲಿಗೆ ವಿಷಾದನಿಯವಾದರೂ ಇನ್ನೂ ಕಾಲ ಮಿಂಚಿಲ್ಲ. ನಮ್ಮ ಪ್ರತಿಷ್ಟೆ ಹಾಗೂ ಪರಸ್ಪರ ಕಾಲೆಳೆಯುವುದನ್ನು ನಿಲ್ಲಿಸಿ ಗ್ರಾಮನಿರ್ಮಾಣ ಮಾಡೋಣ, ಸ್ನೇಹಿತರೇ ಗ್ರಾಮನಿರ್ಮಾಣವೆಂದರೆ

ಸಂಘಸಂಸ್ಥೆ, ದೇಣಿಗೆ ನೀಡುವುದಲ್ಲ ನಿಮ್ಮ ಸ್ವಂತ ಬೆಳವಣಿಗೆಯಿಂದಲೂ ಗ್ರಾಮನಿರ್ಮಾಣ ಸಾಧ್ಯ,ಸಮಯ ಪರಿಪಾಲನೆ, ತಲಾ ಆದಾಯ ಬೆಳವಣಿಗೆಯತ್ತ ಗಮನ ಅತಿ ಮುಖ್ಯ.

---

## ಚುಂಚನಕಟ್ಟೆ



ಮೈಸುರು ಜಿಲ್ಲೆಯ ಕೆ. ಆರ್. ನಗರ ತಾಲ್ಲೂಕಿನಲ್ಲಿರುವ ಚುಂಚನಕಟ್ಟೆ ಒಂದು ಪ್ರೇಕ್ಷಣೀಯ ತಾಣ. ಸ್ಥಳೀಯ ಮುಖಂಡ/ ಪಾಳೇಗಾರ ಚುಂಚ ಎಂಬುವನು ಕಟ್ಟಿಸಿದ್ದು ಎಂಬ ಪ್ರತೀತಿ. ಆದರೆ ಚಾರಿತ್ರಿಕವಾಗಿ, ಸ್ವಾತಂತ್ರ್ಯ ಪೂರ್ವದಲ್ಲಿ, 20ನೇ ಶತಮಾನಕ್ಕೂ ಮುಂಚೆ, ಕಾವೇರಿ ನದಿಗೆ ಅಡ್ಡವಾಗಿ ನಿರ್ಮಿಸಿದ 4 ಅಣೆಕಟ್ಟೆಗಳಲ್ಲಿ ಚುಂಚನಕಟ್ಟೆ ಬಳಿಯ **ಹನುಮನ ಕಟ್ಟೆ** (ಮಿರ್ಲೆ ಕಟ್ಟೆ/ಹಳೇ ಕಟ್ಟೆ) ಮತ್ತು ಸುಮಾರು 200 ಗಜ ಕೆಳಗೆ ಹೊಸ ಕಟ್ಟೆ (**ಚುಂಚನ ಕಟ್ಟೆ/** ರಾಮಸಮುದ್ರ ಕಟ್ಟೆ) ಸೇರಿವೆ. ಈ ಕಟ್ಟೆಯನ್ನು 1672ರಲ್ಲಿ ಪಟ್ಟಕ್ಕೆ ಬಂದ ಚಿಕ್ಕದೇವರಾಜ ಒಡೆಯರು ನಿರ್ಮಿಸಿದರು ಮತ್ತು ಮುಂದೆ ಪೂರ್ಣಯ್ಯನವರು ಅದನ್ನು ಸಧೃಢಪಡಿಸಿದರು. ಈ ಹೊಸ ಕಟ್ಟೆಯಿಂದ ಸ್ವಲ್ಪ ಮುಂದೆ 60ರಿಂದ 80 ಅಡಿಯ 'ಧನುಷ್ಕೋಟಿ' ಜಲಧಾರೆಯಿದೆ. ಪಕ್ಕದಲ್ಲೇ ಒಂದು ಬಂಡೆಯನ್ನು ಸೀಳಿದಂತೆ ಹೊರಳಿ ಹರಿಯುವ ಧಾರೆಗೆ ಅದರದೇ ಸ್ಥಳಪುರಾಣವಿರುವ 'ಸೀತೆಮಡ" ಎಂದು ಕರೆಯುತ್ತಾರೆ. ಯುವರಾಜ **ಕಂಠೀರವ ನರಸಿಂಹರಾಜ ಒಡಯರು 8**ನೇ ಅಖಿಲ ಭಾರತ ಓರಿಯಂಟಲ್ ಸಮ್ಮೇಳನದಲ್ಲಿ ಚುಂಚನಕಟ್ಟೆ ಸೀತೆಮಡುವಿನ ಬಗ್ಗೆ 'The water fall at Chunchanakatte enshrines the bath of Sita' ಎಂದು ಹೇಳಿದ್ದರು. ಇಲ್ಲಿಂದ ಕೆಲವೇ ನೂರು ಗಜಗಳ ಮೇಲ್ಭಾಗದಲ್ಲಿ, ಅಂದರೆ ಎತ್ತರದ ದಂಡೆಯಮೇಲೆ ವಿಜಯನಗರ ಶೈಲಿಯ ಕೋದಂಡರಾಮ ದೇವಸ್ಥಾನ ಇದೆ. ಚುಂಚನಕಟ್ಟೆ ಪ್ರವಾಸಿ ಮಂದಿರದಲ್ಲಿ ಸಹಪಾಟಿ **ರಾಜಾಜಿಯವರೊಂದಿಗೆ** ತಂಗಿದ್ದ ಎಡತೊರೆ (ಇಂದಿನ ಕೆ.ಆರ್.ನಗರ) ಅಮುಲ್ದಾರ್ (1903) **ನ. ರಾಮರಾವ್** ಅವರು "ನನ್ನ ಚುಂಚನಕಟ್ಟೆಯ ಮೊಕ್ಕಾಂ ನನ್ನ ನೆನಪಿನಲ್ಲಿ ಒಂದು ವಾರದ ಸ್ವರ್ಗವಾಸದಂತಿದೆ. ಅಲ್ಲಿ

ದೂರ ದೇಶಗಳಿಂದ ಬಂದ ಸಂಗೀತಗಾರರು ಗಾನ ಸಮರ್ಪಣೆ ಮಾಡುತ್ತಿದ್ದರು, ಆಗತಾನೆ ಪ್ರಖ್ಯಾತಿಗೆ ಬರುತ್ತಿದ್ದ ಶ್ರೀಮಾನ್ **ವಾಸುದೇವಾಚಾರ್ಯ**ರಿಗೆ ಯೆಡತೊರೆ ಜನಗಳೇ ಮೊದಲು ಪ್ರೋತ್ಸಾಹ ಕೊಟ್ಟಿದ್ದು - ಮೆಚ್ಚಿಗೆಯ ಕಾಣಿಕೆ ಒಪ್ಪಿಸಿದ್ದು. ಅವರು ಚುಂಚನಕಟ್ಟೆ ಶ್ರೀರಾಮನ ದೇವಸ್ಥಾನದಲ್ಲಿ ಖರಹರಪ್ರಿಯರಾಗವನ್ನು ಆಲಾಪನೆಮಾಡಿ 'ರಾಮ ನೀಸಮಾನಮೆವರ" ಎಂಬ ಕೃತಿ ಹಾಡಿದ್ದು ಶ್ರೀ ರಾಮನಿಗೇ ಪ್ರೀತಿ" ಎನ್ನುತ್ತಾರೆ. ಚುಂಚನಕಟ್ಟೆಯಲ್ಲಿ 1973 ರಲ್ಲಿ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ಆರಂಬಿಸಿ ಸುತ್ತಲಿನ ಸುಮಾರು 1705 ಗ್ರಾಮಗಳಿಂದ ಕಬ್ಬು ಸರಬರಾಜುಗೊಳ್ಳುವಂತಾಯಿತು.




ಪ್ರತಿದಿನ ಸುಮಾರು 1250 ಟನ್ ಕಬ್ಬು ಅರೆಯುವ ಸಾಮರ್ಥ್ಯವಿದ್ದರೂ ಕಬ್ಬಿನ ಮತ್ತು ಆದಳಿತದ ಕೊರತೆಗಳಿಂದಾಗಿ ಸುಮಾರು 30 ವರ್ಷಗಳ ನಂತರ ಸತತ ನಷ್ಟ ಅನುಭವಿಸಿದ ಕಾರ್ಖಾನೆಯನ್ನು ಖಾಸಗಿಯವರಿಗೆ ವಹಿಸಲಾಯಿತು. ಎಲ್ಲೆಡೆ ದುರ್ಭಲಗೋಳ್ಳುತ್ತಿದ್ದ ಸಹಕಾರ ಚಳುವಳಿ ಮತ್ತು ರೈತ ಚಳವಳಿಯೊಂದಿಗೆ ಈ ಬೆಳವಣಿಳಿಗೆಗಳು ಬೆಸೆದುಕೊಂಡಿರುವುದು ಕಾಕತಾಳೀಯವೇನಲ್ಲ. ಇತ್ತೀಚೆಗೆ ಕಾರ್ಖಾನೆಯನ್ನು ಪುನಃ ಆರಂಬಿಸಲಾಗುವುದೆಂದು ಪತ್ರಿಕೆಯಲ್ಲಿ ಓದಿದ ನೆನಪು. L&T ಖಾಸಗಿ ಕಂಪೆನಿಯು 1990ರ ಸುಮಾರಿಗೆ ಚುಂಚನಕಟ್ಟೆಯಲ್ಲಿ ಒಂದು ಕಿರು ಜಲವಿದ್ಯುತ್ ಯೋಜನೆಯನ್ನು ಆರಂಬಿಸಿತು. ಕೋದಂಡರಾಮ ದೇವಸ್ಥಾನ ಮತ್ತು ಸೀತೆ ಮಡು ಫೋಟೊ ನೋಡಲು ಇಲ್ಲಿ ಕ್ಲಿಕ್ಕಿಸಿ: http://travel2karnataka.com/chunchanakatte.htm https://www.flickr.com/photos/hirughosh/29375745775

***ಚುಂಚನಕಟ್ಟೆ ಜಾತ್ರೆಯ ನೆನಪುಗಳು***

ಕ್ರಿಸ್ಮಸ್ ರಜೆ ಕಳೆದು ಹೊಸವರ್ಷ ಮತ್ತು ಸಂಕ್ರಾಂತಿ ಬರುತ್ತಿದ್ದಂತೆ ಜನವರಿ 15ರಂದು ನಡೆಯುವ ಚುಂಚನಕಟ್ಟೆಯ ಜಾತ್ರೆ-ರಥೋತ್ಸವದ ನೆನಪುಗಳು ಮರುಕಳಿಸುತ್ತವೆ. ಈ

ಪ್ರವಾಸಿ ಸ್ಥಳದಲ್ಲಿ ಮಕರ ಸಂಕ್ರಾಂತಿಯಂದು ರಥೋತ್ಸವ ಮತ್ತು ರಾಜ್ಯದೆಲ್ಲೆಡೆಯಿಂದ ರಾಸುಗಳು ಮತ್ತು ಲಕ್ಷಾಂತರ ಜನ ಸೇರಿ 15 ದಿನಗಳ ಜಾತ್ರೆ ನಡೆಯುತ್ತದೆ. ರಾಸುಗಳ ಪ್ರದರ್ಶನ ಮತ್ತು ಮಾರಾಟ ಜಾತ್ರೆಯ ವಿಶೇಷ. ಹಳ್ಳಿಕಾರ್ ತಳಿಯ ಹೋರಿಗಳಿಗೆ ಪ್ರಸಿದ್ಧವಾದ ಈ ದನಗಳ ಜಾತ್ರೆಗೆ ದೂರದ ಉತ್ತರ ಕರ್ನಾಟಕದಿಂದಲೂ ರಾಸುಗಳನ್ನು ಕೊಳ್ಳಲು ಬರುತ್ತಾರೆ. ಕಾವೇರಿ ನದಿಗೆ 1957ರಲ್ಲಿ ಚುಂಚನಕಟ್ಟೆ ಬಳಿ ಒಂದು ಸೇತುವೆ ನಿರ್ಮಿಸಲಾಗಿ ಅಲ್ಲಿಯವರೆವಿಗೆ ಉತ್ತರಭಾಗದ ಊರುಗಳಿಂದ ಚುಂಚನಕಟ್ಟೆಗೆ ಬೇಸಿಗೆಯಲ್ಲಿ/ ಪ್ರವಾಹವಿಲ್ಲದಾಗ ತೆಪ್ಪ ಅಥವ ಹರಿಗಲದ ಮೇಲೆ ಅಥವ ಹೊಸ ಕಟ್ಟೆಯ ಮೇಲೆ ನಡೆದು ಹೋಗಬೇಕಿದ್ದವರಿಗೆಲ್ಲಾ ಚುಂಚನಕಟ್ಟೆಗೆ ನೇರ ಸಂಪರ್ಕ ದೊರೆತಂತಾಯಿತು.

ಈ ತಾಣದಲ್ಲಿ ಮೊದಲಬಾರಿಗೆ 1964ರಲ್ಲಿ ಎಮ್.ಜಿ.ರಾಮಚಂದ್ರನ್ ಅವರ ಎಂಗವೀಟ್ಟು ಪಿಳ್ಳೈ **ಚಲನಚಿತ್ರ ಚಿತ್ರೀಕರಿಸಿದ್ದರು**. ನಂತರದ ವರ್ಷಗಳಲ್ಲಿ ಬಂಗಾರದ ಮನುಷ್ಯ, ಶರಪಂಜರ, ನಾ ನಿನ್ನ ಬಿಡಲಾರೆ, ಇತ್ಯಾದಿ ಹಲವಾರು ಕನ್ನಡ ಚಿತ್ರಗಳ ಚಿತ್ರೀಕರಣವೂ ನಡೆಯಿತು.



ವರ್ಷವಿಡೀ ಕಾತರದಿಂದ ಎದುರುನೋಡುತ್ತಿದ್ದು, ಬೆಳಿಗ್ಗೆಯೇ ಕಾಡಿನ ಕಾಲ್ದಾರಿಯಲ್ಲಿ ನಾಲ್ಕು ಮೈಲಿ ನಡೆದು ನಾಲೆ, ಕೊಲ್ಲಿ ಹಳ್ಳ ಮತ್ತು ಹೊಳೆಯನ್ನು ದಾಟಿ, ದಿನವಿಡೀ ಸಾವಿರಾರು ಜೋಡಿ ಹೋರಿಗಳ ಪ್ರದರ್ಶನ, ರಥೋತ್ಸವ, ವಸ್ತು ಪ್ರದರ್ಶನ, ಇತ್ಯಾದಿ ಸುತ್ತಿ, ಕತ್ತಲಾಗುತ್ತಿದ್ದಂತೆಯೇ ನೂಕುನುಗ್ಗಿನಲ್ಲಿಯೇ ಟೆಂಟ್ ಸಿನಿಮಾಗಳಲ್ಲಿ ಬೆಳಗಾಗುವವರೆವಿಗೆ ಒಂದಾದಮೇಲೊಂದರಂತೆ ಮೂರು ಸಿನಿಮಾಗಳನ್ನು ನೋಡಿ ಮರುದಿನ ಬೆಳಿಗ್ಗೆ ಮತ್ತೆ ನಾಲ್ಕು ಮೈಲಿ ನಡೆದು ಊರು ಸೇರುತ್ತಿದ್ದ 60 ವರ್ಷಗಳ ಹಿಂದಿನ ನೆನಪುಗಳು ಹಸಿರಾಗಿವೆ. ಜಾತ್ರೆಯಲ್ಲಿ ಎರಡಾಣೆಗೆ ಒಂದು ಸಿನೀಮ ಮತ್ತು  ಒಂದು ಫೋಟೊ ತೆಗೆಸಲು ಕೇವಲ

ಎಂಟಾಣೆ! ಇದು ನಾನು 1960ರಲ್ಲಿ ತೆಗೆಸಿದ ನಾಲ್ಕಾಣೆಯ One-by-two photo!

ಜಾತ್ರಾ ಸಮಯವನ್ನು ಹೊರತು ಪಡಿಸಿದರೆ, ಶ್ರಾವಣದಲ್ಲಿ ಕಾವೇರಿ ಮೈದುಂಬಿ ಹರಿಯುವುದನ್ನು ನೋಡಲು ಮತ್ತು ಪೂಜೆಗಾಗಿ ಚುಂಚನ ಕಟ್ಟೆಯಲ್ಲಿ ಹೆಚ್ಚು ಜನ ಸೇರುತ್ತಿದ್ದರು. ನದಿಯ ಪ್ರವಾಹದಲ್ಲಿ ಕಟ್ಟೆಗಳು ಮತ್ತು ಬಂಡೆಗಳು ಮುಳುಗಿ ನೀರು ಧನುಷ್ಕೋಟಿ ಮತ್ತು ಸೀತೆಮಡುವಿನಲ್ಲಿ ರಭಸದಿಂದ ಧುಮ್ಮಿಕ್ಕಿ, ನೀರಿಗಿಳಿಯಲು ನಿರ್ಮಿಸಿರುವ ಮೆಟ್ಟಿಲುಗಳನ್ನು ಪೂರ್ಣ ಆವರಿಸಿ ಮುಂದೆ ವಿಶಾಲವಾಗಿ ಹರಿಯುತ್ತದೆ .





## ಹನಸೋಗೆ

**ಹನಸೋಗೆ**ಯನ್ನು ಚಂಗಾಳ್ವರ ರಾಜಧಾನಿಯಾಗಿಯೂ/ ಮುಖ್ಯ ಪಟ್ಟಣವಾಗಿಯೂ ಮತ್ತು **ಸಾಲಿಗ್ರಾಮ**ವನ್ನು ಗಂಗರಸರ ಮೂಲ ನೆಲೆ ಎಂದು ಗುರುತಿಸಲಾಗಿದೆ. ಆದರೆ ತಾಲ್ಲೂಕು ಗ್ಯಾಸಟಿಯರ್ ನಲ್ಲಿ ಪಿರಿಯಾಪಟ್ಟಣ ಚಂಗಾಳ್ವರ ರಾಜಧಾನಿಯಾಗಿತ್ತು ಎಂದು ನಮೂದಿಸಲಾಗಿದೆ.

## ಗಂಧನಹಳ್ಳಿ

ಮಿರ್ಲೆ ಹೋಬಳಿಯ ಅತೀ ದೊಡ್ಡ ಗಾಮ. ಚಾರಿತ್ರಿಕವಾಗಿ ಮರಾಠರು ಇಲ್ಲಿ ನೆಲಸಿದ್ದರು. ಮಿರ್ಲೆ ಇತಿಹಾಸ ಅಧ್ಯಾಯದಲ್ಲಿ ಹೆಚ್ಚಿನ ವಿವರವಿದೆ. ಗಂಧನೆಂಬ ಧೈರ್ಯಶಾಲಿ ವಿದವೆಯ ಮಗನಿಂದ ಗಂಧನಹಳ್ಳಿಯ ಹೆಸರು ಬಂದಿತು ಎಂಬುದೊಂದು ಸ್ಥಳಪುರಾಣ.

## ಹೊಸಅಗ್ರಹಾರ

ಹೆಸರೇ ಸೂಚಿಸುವಂತೆ ಸಂಸ್ಥಾನದ  ಒಡೆಯರು ಮೈಸೂರು ಪಟ್ಟಣದ ಹೊರಗೆ ಅನುವು ಮಾಡಿದ ಬ್ರಾಹ್ಮಣ ಅಗ್ರಹಾರ. ಮಿರ್ಲೆಗೆ ಅತ್ಯಂತ ಸಮೀಪದ ರೈಲ್ವೆ ನಿಲ್ದಾಣವಿದ್ದರೂ ಬಹಳ ಕಾಲ ನೇರ ರಸ್ತೆ ಮತ್ತು ಬಸ್ಸುಗಳಿಲ್ಲದೆ ಹಂಪಾಪುರವೇ ಹತ್ತಿರದ ರೈಲ್ವೆ ನಿಲ್ದಾಣವಾಗಿತ್ತು.

## ಹಂಪಾಪುರ

ಶತಮಾನದ ಹಿಂದೆ ಎಡತೊರೆಯಲ್ಲಿನ ಅನಾನುಕೂಲಗಳಿಂದಾಗಿ ಅಮುಲ್ದಾರರು ಹಂಪಪುರದಲ್ಲಿ ವಸತಿ ಮಾಡಿದ್ದರು. ಹಂಪಾಪುರ ಮತ್ತು ಬೇರ್ಯಗಳಲ್ಲಿ ಹೈದರ್ ಮತ್ತು ಟಿಪ್ಪೂ ಕಾಲದಿಂದ ಹೆಚ್ಚಿನ ಮುಸಲ್ಮಾನರು ನೆಲಸಿದ್ದರು.

## ಬೇರ್ಯ

ಮೈಸೂರು ಅರಸ ದೇವರಾಜ ಒಡೆಯರ ಮಗ ದೇವರಾಜ ಮಹಿಪಾಲನು 1666ರಲ್ಲಿ ನರಸಿಂಹಪುರಕ್ಕೆ ಸೇರಿದ್ದ ಬೇರ್ಯ ಗ್ರಾಮವನ್ನು ದೇವರಾಜಪುರ ಎಂದು ನಾಮಕರಣ ಮಾಡಿದ್ದ. ಸುಮಾರು 135 ವರ್ಷಗಳ ಹಿಂದೆಯೆ ಇಲ್ಲಿ ಒಂದು ‘ಗ್ರಾಮಾಂತರ ಬುದ್ಧಿಜೀವಿಗಳ ಬಳಗ’ ಇದ್ದದ್ದು ವಿಶೇಷ. ಅಲ್ಲದೆ ಈ ಬಳಗವು ಮೈಸೂರು ಜಿಲ್ಲೆಯ ಅತ್ಯಂತ ಜನಪ್ರಿಯ ಪತ್ರಿಕೆ ಯಾವುದೆಂದು ನಿರ್ಧರಿಸಲು ಎಪ್ರಿಲ್ 1986 ರಲ್ಲಿ ಒಂದು ಸರ್ವೇಕ್ಷಣ ನಡೆಸಿ ‘ಮೈಸೂರು ಮಿತ್ರ’ ಮತ್ತು ‘ಆಂದೋಳನ’ ಮೊದಲ ಸ್ಥಾನವನ್ನು ಜಂಟಿಯಾಗಿ ಪಡೆದಿದ್ದವು.

## *ಮಿರ್ಲೆಯ ಹಿಂದಿನ ಹೆಸರು ’ಮಿಥಿಲೆ” ಎಂದಿತ್ತೆ? ಈ ಹೆಸರು ಬರಲು ಕಾರಣವೇನು?*

ನನ್ನೂರು ಮಿರ್ಲೆ ಎಂದೊಡನೆ ಈ ಮುನ್ನ ಹೆಸರನ್ನೇ ಕೇಳದವರು ಇದೆಂತಹ ಹೆಸರು ತರ್ಲೆ, ಜಿರಳೆ ಎಂದು ಪ್ರತಿಕ್ರಿಯಿಸಿದ್ದೂ ಉಂಟು. ಅಂತೆಯೇ ಮಿರ್ಲೆ ಹೆಸರನ್ನು ಬಹಳ

ಅಭಿಮಾನದಿಂದ ತಮ್ಮ ಪೂರ್ವಿಕರ ಊರು ಎಂಬ ಕಾರಣಕ್ಕಾಗಿ ತಾವು ಹುಟ್ಟಿ-ಬೆಳೆಯದಿದ್ದರೂ ತಮ್ಮ ಹೆಸರಿನಲ್ಲಿ ಹೆಮ್ಮೆಯಿಂದ ಸೇರಿಸಿಕೊಂಡ ಮಹನೀಯರೂ ಅನೇಕರಿದ್ದಾರೆ (ಮಿರ್ಲೆ ಸುಬ್ಬರಾವ್, ವಿಶ್ವನಾಥ ಮಿರ್ಲೆ, ಇತ್ಯಾದಿ). ಇಷ್ಟಾದರೂ ನನ್ನ ಊರಿನ ಹಿರಿಯರನೇಕರು ಮಿರ್ಲೆ ಎಂಬ ಹೆಸರು 'ಮಿಥಿಲೆ' ಯಿಂದ ಅಪಭ್ರಂಶಗೊಂಡು ಹುಟ್ಟಿಕೊಂಡಿದೆ ಎನ್ನುತ್ತಾರೆ. ಮಿಥಿಲೆಗೂ ರಾಮನಿಗೂ ಇರುವ ನಂಟು ಗೊತ್ತೇ ಇದೆ. ಮಿಗಿಲಾಗಿ ಸ್ವಲ್ಪ ಹೆಚ್ಚೆನಿಸುವಷ್ಟೇ ದೇವಸ್ಥಾನಗಳುಳ್ಳ ಮಿರ್ಲೆಯಲ್ಲಿ ಕೋದಂಡರಾಮ ದೇವಸ್ಥಾನ ಪ್ರಮುಖವಾದುದು. ಹೀಗಾಗಿ ಮಿರ್ಲೆಗೆ **'ಮಿಥಿಲಾನಗರ'** ಮತ್ತು '**ರಾಮಬಯಲು**' ಎಂಬ ಹೆಸರುಗಳಿದ್ದುವು ಎನ್ನುತ್ತಾರಾದರೂ ಇದಕ್ಕೆ ಕಲ್ಪಿತ ಪುರಾಣವಲ್ಲದೆ ಬೇರೆ ಧಾಖಲೆಗಳಿದ್ದಂತಿಲ್ಲ. ಹಿರಿಯರು ಹೇಳುವ ಒಂದು ಸ್ಥಳಪುರಾಣ ಹೀಗಿದೆ:

*ತೇತ್ರಾಯುಗದಲ್ಲಿ ಶ್ರೀರಾಮ, ಸೀತಾಲಕ್ಷ್ಮಣರ ಸಮೇತನಾಗಿ ವನವಾಸಕ್ಕೆಂದು ದಕ್ಷಿಣ ಭರತ ಖಂಡದ ದಂಡಾಕಾರಣ್ಯಕ್ಕೆ ಬಂದಾಗ ಕಾವೇರಿ ನದಿಯಿಂದ ಸ್ವಲ್ಪ ದೂರದಲ್ಲಿರುವ ಈ ಸ್ಥಳಕ್ಕೆ ಬರಲು ಸೀತಾಮಾತೆಗೆ ತನ್ನ ತವರು ಮಿಥಿಲಾನಗರದಲ್ಲೇ ಇದ್ದಂತೆ ಭಾಸವಾಗಿ ಸಂತೋಷವಾಯಿತು. ಇದನ್ನು ರಾಮನಲ್ಲಿ ಹೇಳಲು ಅವನು ಈ ವನವಾಸದಲ್ಲಿ ಇದೇ ನಿನ್ನ ತವರಾಗಲಿ, ಇನ್ನು ಮುಂದೆ ಈ ಸ್ಥಳಕ್ಕೆ/ ಊರಿಗೆ ಮಿಥಿಲಾ ಎಂದು ಹೆಸರಾಗಲೆಂದು ಹೇಳಿದ ಎಂಬ ನಂಬಿಕೆ ಮತ್ತು ಕಲ್ಪನೆಯಿಂದ ಈ ಹೆಸರು ಬಂದಿತು ಮತ್ತು ಕಾಲಕ್ರಮೇಣ ಮಿಥಿಲಾ ಎಂಬ ಹೆಸರು ಮಿರ್ಲೆಯಾಯಿತು.* ಆದರೆ ದೊರೆತಿರುವ ಶಾಸನಗಳಾವುದರಲ್ಲೂ 'ಮಿಥಿಲೆ' ಎಂದು ಹೆಸರಿಸಿಲ್ಲ. ಬದಲಾಗಿ 'ಮಿರಿಲೆ' ಅಥವ 'ಮಿರಲೆ' ಎಂದು ನಮೂದಿಸಲಾಗಿದೆ. ಅಂದರೆ ಈ ಕಲ್ಪಿತ ಸ್ಥಳಪುರಾಣದಂತೆ ಮಿಥಿಲೆ ಮಿರಿಲೆ ಆಗಿ, ನಂತರ ಮಿರಲೆ ಆಗಿ ಇಂದಿನ ಮಿರ್ಲೆ ಆಗಿದೆ ಎಂಬುದಾಗಿ ಊಹಿಸಬಹುದಾದರೂ ಅದು ಚಾರಿತ್ರಿಕವಲ್ಲ. ಒಂದು ಕುತೂಹಲಕಾರಿ ಸಂಗತಿಯೆಂದರೆ, ಕೋದಂಡರಾಮ ಗುಡಿಯ ಭಾವಣಿಯಲ್ಲಿನ ಶಾಸನದಲ್ಲಿ ಮಿರ್ಲೆಯನ್ನು '**ದಕ್ಷಿಣ ಐಯಾವಳ**' ಎಂದು ಸಂಭೋದಿಸಲಾಗಿದೆ.

ಬಹಳ ಮುಖ್ಯವಾಗಿ, ರಾಮಾನುಜಾಚಾರ್ಯರು ಶ್ರೀವೈಷ್ಣವ ಮತ ಪ್ರಚಾರದಲ್ಲಿ ತೊಡಗಿ 11ನೇ ಶತಮಾನದ ಅಂತ್ಯದಲ್ಲಿ ಹೊಯ್ಸಳ ನಾಡಿನಲ್ಲಿ ಸಂಚರಿಸುವಾಗ ಮಿರ್ಲೆಗೆ ಬಂದಿದ್ದರು ಮತ್ತು ಆಗ ಈ ಗ್ರಾಮವನ್ನು '**ಮಿಥಿಲಾಪುರಾ**' ಎಂದು ಕರೆಯುತ್ತಿದ್ದರು ಎನ್ನುತ್ತಾರೆ ರಾಮಾನುಜಾಚಾರ್ಯರ ಜೀವನ ಚರಿತ್ರೆಯ ಕರ್ತೃ, ಸಂಶೋಧಕ ಹಾಗೂ ಮೇಲುಕೋಟೆಯ ಸ್ಥಾನಿಕ ವಂಶಸ್ಥರಾದ ಡಾ. ಶಲ್ವಪಿಳ್ಳೈ ಅಯ್ಯಂಗಾರ್ ಅವರು. ಅವರೊಟ್ಟಿಗೆ ಚರ್ಚಿಸಲಾಗಿ ಅವರು ಈ ಬಗ್ಗೆ ಸಂಸ್ಕೃತದಲ್ಲಿ ಧಾಖಲೆಗಳಿರುವುದಾಗಿ ತಿಳಿಸಿದರು. ಆದ್ದರಿಂದ **ಮಿಥಿಲಾಪುರಾ** ಏಂಬ ಹೆಸರು ಮಿರ್ಲೆಗೆ ೯೦೦ ವರ್ಷಗಳ ಹಿಂದೆ ಇದ್ದಿತು ಎಂದು ತಿಳಿಯಬುಹುದಾಗಿದೆ. ಆದರೆ ಮಿಥಿಲೆ ಹೆಸರಿನ ಹಿನ್ನೆಲೆ ಮಾತ್ರ ಕಲ್ಪಿತ ಸ್ಥಳಪುರಾಣಾವಲಂಬಿತವಾಗಿಯೇ ಉಳಿದಿದೆ. ಯಾವುದೇ ಹೆಸರು ಏಕೆ ಬಂದಿತು ಎಂದು ಎಲ್ಲ ಸಂದರ್ಭಗಳಲ್ಲೂ ಹೇಳಲಾಗುವುದೂ ಇಲ್ಲ (ನೋಡಿ ***ಅನುಬಂಧ ೧:*** ಮಿರ್ಲೆಯಲ್ಲಿ ಆಚಾರ್ಯ ಶ್ರೀರಾಮಾನುಜರು***).***




## ಮಿರ್ಲೆ ಟೌನ್ ಸ್ಥಾಪನೆ 1958?

ಊರ ಹೊರಗೆ ಕೊಪ್ಪಲ ರಸ್ತೆ ಬದಿಯಲ್ಲಿ 1958 ರಲ್ಲಿ ಪ್ರತಿಷ್ಠಾಪಿಸಿದ ಕಲ್ಲಿನ ಫಲಕದಲ್ಲಿ ಪಂಚಾಯಿತಿಯ ಹಿರಿಯರು ಅಭಿಮಾನದಿಂದ ಅಂದು 'ಮಿರ್ಲೆ ಟೌನ್' ಎಂದು ಕರೆದಿದ್ದರು (ಚಿತ್ರ ನೋಡಿ). ಆಗತಾನೆ ಸರ್ಕಾರಿ ಪ್ರೌಢಶಾಲೆ ಆರಂಭವಾಗಿದ್ದ ಆ ಕಾಲದಲ್ಲಿ ಮಕ್ಕಳೆಲ್ಲ ನಮ್ಮೂರು ಟೌನ್ ಆಯಿತು ಎಂದು ಇದನ್ನು ಸಂಭ್ರಮಿಸಿದ್ದೆವು. ಟೌನ್ ಒಂದು ಸ್ವಯಂ ಘೋಷಿತ ಪ್ರಕಟಣೆಯೆ? ಎಲ್ಲ ಕಡತಗಳಲ್ಲಿ 'ಮಿರ್ಲೆ ಗ್ರಾಮ' ವಾಗಿಯೇ ಇದೆ. ಈ ಫಲಕದಿಂದ 1958 ಮಿರ್ಲೆ ಸ್ಥಾಪನೆಗೊಂಡ ವರ್ಷವೆಂಬ ಗೊಂದಲ ಸೃಷ್ಟಿಸುವ ಸಾದ್ಯತೆಯಿದೆ. ಈ ಫಲಕದ ಸ್ಥಾಪನೆ 1958 ಹೊರತು ಮಿರ್ಲೆಯ ಸ್ಥಾಪನೆ ಎಂದು ಭಾವಿಸಬಾರದು. "ಮಿರ್ಲೆ ಟೌನ್" ಎಂಬ ನಾಮಕರಣ ಅಥವ ಸಂಭೋಧನೆ ಎಲ್ಲಿಯೂ ಬಳಕೆಯಲ್ಲಿಲ್ಲ. ಅಲ್ಲದೆ ನನಗೆ ತಿಳಿದಂತೆ ಇದನ್ನು ಮಿರ್ಲೆ ಪಂಚಾಯಿತಿಯ ವತಿಯಿಂದಲೇ

ಪ್ರತಿಷ್ಟಾಪಿಸಲಾಯಿತು.

ಕರ್ನಾಟಕ ವಿಲೇಜ್ ಪಂಚಾಯತಿ ಲೋಕಲ್ ಬೋರ್ಡ್ ಆಕ್ಟ್ 1959 ಅನ್ವಯ 5000ಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ರೂ. 10000 ಕ್ಕಿಂತ ಹೆಚ್ಚು ಆದಾಯವಿರುವ ಪಂಚಾಯಿತಿಗಳನ್ನು ಟೌನ್ ಪಂಚಾಯಿತಿ ಎಂದು ಕರೆಯಲಾಗಿದೆ ಮತ್ತು ಅದರ ಅನ್ವಯ ಈ ಫಲಕವನ್ನು ಹಾಕಲಾಗಿದೆ ಎನ್ನಲಗಿದೆ. ನಂತರ ಜಿಲ್ಲಾ ಪರಿಷತ್ 1983ರ ಆಕ್ಟ್ ಅನ್ವಯ ಟೌನ್ ಪಂಚಾಯಿತಿಗಳನ್ನ  ಮಂಡಲ ಪಂಚಾಯಿತಿಗಳೆಂದು 1987ರಿಂದ ಕರೆಯಲಾಗಿದೆ.

ಮಿರ್ಲೆ ಇತಿಹಾಸದ ಬಗ್ಗೆ ಖನಿಷ್ಟ ಧಾಖಲಾತಿಯೂ ಇದ್ದಂತಿಲ್ಲ. ಗೊತ್ತಿರುವುದೆಲ್ಲಾ ಅಲ್ಪ-ಸ್ವಲ್ಪ ವೈಭವೀಕರಿಸಿದ ಮೌಖಿಕ ಸ್ಥಳಪುರಾಣ. ಲಭ್ಯವಿರುವ ಅತ್ಯಲ್ಪ (ದೇವಸ್ಥಾನಗಳ) ಶಾಸನಗಳ ಪ್ರಕಾರ ಮಿರ್ಲೆಗೆ ಸಾವಿರ ವರ್ಷಗಳ ಇತಿಹಾಸವಿದ್ದರಬೇಕು

ಮಿರ್ಲೆ ಹೆಸರಿನ ಊರೊಂದು ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯಲ್ಲಿಯೂ ಇದೆ. ಅಲ್ಲದೆ 1920ರಲ್ಲೇ ಅಮೆರಿಕಾದಲ್ಲೂ ಮಿರ್ಲೆ ವಂಶಾವಳಿಯೊಂದನ್ನು ಗುರುತಿಸಲಾಗಿದೆ.  ಅವರಲ್ಲಿ ಸ್ವಾಭಾವಿಕವಾಗಿ ಮಿರ್ಲೆ ಹೆಸರನ್ನು ಬಳಸಿದ ಕಂಪನಿಗಳಿವೆ. ಚೈನಾದ ಶಾಂಗೈನಲ್ಲಿ 1989ರಲ್ಲಿ Mirle Automation Technology (Shanghai) Co., Ltd. ನ್ನು ಆರಂಬಿಸಲಾಗಿದೆ. ಇವರೆಲ್ಲರೂ ನಮ್ಮ ಮಿರ್ಲೆಯ ಮೂಲದವರೆ ಅಥವಾ ಹೆಸುರು ಆಕಸ್ಮಿಕವೆ? ನಿಖರ ಉತ್ತರ ತಿಳಿಯದು  (ನೋಡಿ **ಅನುಬಂಧ ೧**: ಮಿರ್ಲೆ ಹೆಸರುನ್ನು ಹೊಂದಿರುವ ದೇಶವಿದೇಶಗಳ ವಂಶಾವಳಿ ಮತ್ತು ಕಂಪನಿಗಳು).

---

*ಪ್ರತಿಕ್ರಿಯೆಗಳು:*

**ಮಂಜುನಾಥ್:** ಲೋಕೋಪಯೋಗಿ ಇಲಾಖೆ ಯ ಪ್ರಕಾರ **ಮಿರ್ಲೆಯ ಸ್ತಾಪನೆ 1958**. ನಿಖರವಾಗಿ ಮಾಹಿತಿಯನ್ನು ಬಲ್ಲವರು ಯಾವಾಗ ಸ್ತಾಪನೆ ಯಾಯಿತು ತಿಳಿಸಿ.

**ಪ್ರಶಾಂತ್:** Town Panchayat is converted in 1958 from Town Municipal (source Mysore Gazetteer) Even Saligrama also

**ಕಿಶೋರ್ ಕುಮಾರ್:** ಸಾಮಾನ್ಯವಾಗಿ ನಮ್ಮೂರಿನ ಹೆಸರಾದ ಮಿರ್ಲೆಯ ಜೊತೆ ಮಿಥಿಲೆ ಪದ ತಳಕು ಹಾಕಿಕೊಂಡಿರುತ್ತದೆ ಇದಕ್ಕೆ ಎನ್ನಾದರು ಇತಿಹಾಸವಿದೆಯೇ? ಮಾಹಿತಿ ಉಳ್ಳವರು ತಿಳಿಸಿ..

**ಪ್ರಶಾಂತ್:** ಮಿಥಿಲಾ ಎನ್ನುವ ಪದಕ್ಕೆ ಮಿರ್ಲೆ ತದ್ಬವ..... ಇದು ನನ್ನ ಅಭಿಪ್ರಾಯ ಇದನ್ನು ಸಾಂಕೇತಿಕವಾಗಿ ಬಳಕೆಗೆ ಬಂದು ಮಿರ್ಲೆ ನಗರವನ್ನು ಮಿಥಿಲಾ ನಗರ ಎನ್ನುವ ವಾಡಿಕೆ ಹಿಂದಿನಿಂದಲೂ ಬಂದಿರುವುದು ಎನ್ನಬಹುದು. ತಪ್ಪಿದ್ದರೆ ಕ್ಷಮಿಸಿ.

**ಮಂಜು ಗೌಡ:** ಮಿರ್ಲೆಯೂರಿನ ಇತಿಹಾಸ=ತೇತ್ರಯುಗದಲ್ಲಿ ಶ್ರೀರಾಮ, ಸೀತಾಲಕ್ಷ್ಮಣರ ಸಮೇತನಾಗಿ ವನವಾಸಕೆಂದು ದಕ್ಷಿಣಭರತಖಂಡದ ದಂಡಾಕಾರ್ಯಣ್ಯಕ್ಕೆ ಬರಲು,ಕಾವೇರಿನದಿಯಿಂದ ಸೂಮಾರು ೬ಮೈಲಿ ದೂರದಲ್ಲಿ ಇರುವ ಈಸ್ಥಳಕ್ಕೆ ಬರಲು ಸೀತಾಮಾತೇಗೆ ತನ್ನ ತವರು ಮಿಥಿಲಾನಗರದಲ್ಲಿ ಇರುವಂತೆ ಸಂತೋಷವಾಗಲು ಇದನ್ನು ರಾಮನಲ್ಲಿ ಹೇಳಲು ಅವನು ಈವನವಾಸದಲ್ಲಿ ಇದೇ ನಿನ್ನ ತವರಾಗಲಿ ಇನ್ನುಮುಂದೆ ಇದು ಮಿಥಿಲಾ ಎಂದೂ ಹೆಸರಾಗಲೆಂದು ಶ್ರೀರಾಮನಿಂದ ನಾಮಕರಣವಾಯಿತು.ಮುಂದೆ ಕಾಲಕ್ರಮೇಣ ಮಿಥಿಲಾ ಎಂಬ ಹೆಸರು ಮಿರ್ಲೆಯಾಯಿತು.

**ಉ:** ಮಂಜು ಗೌಡರೆ, ಇದು ಯಾವ ರಾಮಾಯಣದಲ್ಲೂ ಇರದ ಕಾಲ್ಪನಿಕ ಸನ್ನಿವೇಶವನ್ನಾದರಿಸಿದ ಪೌರಾಣಿಕ ಸಮರ್ಥನೆ. ಅಂದರೆ ಮಿರ್ಲೆ ದ್ವಿತೀಯ ಮಿಥಿಲೆ ಮತ್ತು ದಕ್ಷಿಣ ಭಾರತದಲ್ಲಿ ತ್ರೇತಾಯುಗದಲ್ಲಿ ದಂಡಕಾರಣ್ಯವಾಗಿತ್ತು ಎಂದಾಯಿತು. ಹಿರಿಯರನೇಕರು ಮಿರ್ಲೆ ಎಂಬ ಹೆಸರು 'ಮಿಥಿಲೆ' ಯಿಂದ ಅಪಭ್ರಂಶಗೊಂಡು ಹುಟ್ಟಿಕೊಂಡಿದೆ ಎನ್ನುತ್ತಾರೆ ನಿಜ. ಮಿಥಿಲೆ ಎಂಬುದು ಕಲಿಯುಗದಲ್ಲೇ ಮಿರ್ಲೆಯ ಪೂರ್ವದ ಹೆಸರಿದ್ದರೂ ಇರಬಹುದು - ಸೀತೆ ಅಥವ ರಾಮ ಎಂದು ಕಲಿಯುಗದಲ್ಲಿಯೂ ಹೆಸರನ್ನಿಟ್ಟುಕೊಳ್ಳುವಂತೆ ಊರಿಗೂ ಮಿಥಿಲೆ ಎಂದು ಹೆಸರಿಟ್ಟಿರಲೂಬಹುದು. ಆದರೆ ಮಿಥಿಲೆ ಹೆಸರಿಗೆ ಐತಿಹಾಸಿಕ ಪುರಾವೆಗಳಿದ್ದಂತಿಲ್ಲವಾಗಿ ಪುರಾಣದ ಮೊರೆ ಹೋಗಬೇಕಾಗಿದೆ. ಇನ್ನು ಕೆಲವರು ಮಿರ್ಲೆಗೆ 'ಮಿಥಿಲಾನಗರ'ವಲ್ಲದೆ 'ರಾಮಬಯಲು' ಎಂಬ ಮತ್ತೊಂದು ಹೆಸರೂ ಇತ್ತು ಎನ್ನುತ್ತಾರೆ. ಅದಕ್ಕೂ ಪುರಾವೆ ಇಲ್ಲ. ದೊರೆತಿರುವ ಶಾಸನಗಳಲ್ಲಿ 'ಮಿರಿಲೆ' ಅಥವ 'ಮಿರಲೆ' ಎಂದೇ ನಮೂದಿಸಲಾಗಿದೆ. ಮಿಥಿಲೆಗೂ ರಾಮನಿಗೂ ಎಲ್ಲಿಲ್ಲದ ನಂಟು. ಮಿಗಿಲಾಗಿ ಸ್ವಲ್ಪ ಹೆಚ್ಚೆನಿಸುವಷ್ಟೇ ದೇವಸ್ಥಾನಗಳುಳ್ಳ ಮಿರ್ಲೆಯಲ್ಲಿ ಕೋದಂಡರಾಮ ದೇವಸ್ಥಾನ ಪ್ರಮುಖವಾದುದು. ಕೋದಂಡರಾಮ ಗುಡಿಯ ಭಾವಣಿಯಲ್ಲಿನ ಶಾಸನದಲ್ಲಿ ಮಿರ್ಲೆಯನ್ನು 'ದಕ್ಷಿಣ

ಐಯಾವಳೆ' (ಐಹೊಳೆ?) ಎಂದು ವರ್ಣಿಸಲಾಗಿದೆ. ಹೀಗೆ ಆಸಕ್ತರ ಸಂಶೋಧನೆಗೆ ಇದು ತೆರದಿಟ್ಟ ಕೈಬೀಸಿ ಕರೆವ ದಾರಿ.

**ಪ್ರಶಾಂತ್:** ಮಂಜು ಗೌಡರ ಮಾತನ್ನು ನಾವು ಅನೇಕರಿಂದ ಕೇಳಿದ್ದು ಇದೆ. ಅದೇನೇ ಇರಲಿ ಪದವಿ ಪೂರ್ವ ಕಾಲೇಜಿನಲ್ಲಿ ನಮ್ಮ ಕಾನ್ನಡ ಪ್ರಾಧ್ಯಾಪಕರು ಮಿರ್ಲೆ ಮತ್ತು ಮಿಥಿಲಾ ಪದಗಳ ಬಗ್ಗೆ ಚರ್ಚೆ ಬಂದಾಗ ಅವರು ಒಂದು ಹಂತಕ್ಕೆ ಮುಂದು ಹೋಗಿ ಮಿರ್ಲೆಯನ್ನು ಹಿಂದೆ ಮಿಥಿಲಾ ಎಂತಲೂ ಕರೆಯುವ ವಾಡಿಕೆ ಇತ್ತು ಎಂದು ಹೇಳಿ ಸಿತಾ ಮಾತೆ ತವರು ಹಾಗೂ ಈಗಲೂ ಮಿರ್ಲೆಯಲ್ಲಿ ಜನಿಸುವ ಹೆಣ್ಣು ಮಕ್ಕಳು ಸುಂದರಿಯರಾಗಿರುತ್ತಾರೆ ಎಂಬ ಸಮರ್ಥನೆ ನಿಡುತಿದ್ದುದದನ್ನು ನೆನದರೆ ಮನದಲ್ಲಿ ನಗು ಹೊರಹೊಮ್ಮುತ್ತದೆ.

**ಉ:** ಏನಾದರೂ ಪುರಾವೆ ಇದೆಯೆ? ಕಲ್ಪಿತ ಪುರಾಣಕ್ಕೆ ಪುಷ್ಟಿಕೊಡುವ ವ್ಯಾಖ್ಯಾನಗಳು! ಪುರಾಣ ಮತ್ತು ಇತಿಹಾಸ ಬೇರೆ ಬೇರೆಯಲ್ಲವೆ?

**ಕಿಶೋರ್ ಕುಮಾರ್**: ಇದು ಕನ್ನಡದಲ್ಲಿ ಬರೆದಂತೆ ಉಚ್ಚರಿಸುವ ನಾಮಪದವನ್ನು ಇಂಗ್ಲೀಷ್‌ಗೆ Transliterate ಮಾಡುವ ಸಮಸ್ಯೆ. ಮೂರ್ತಿ ಎಂಬ ಹೆಸರನ್ನು ಇಂಗ್ಲೀಷನಲ್ಲಿ ೫-೬ ರೀತಿ ಬರೆಯಲು ಸಾಧ್ಯ. ಮೊದಲಿಗೆ ಕನ್ನಡದಲ್ಲಿ ಬರೆದು ಉಚ್ಚರಿಸುವ ಪದವನ್ನು ನಿಶ್ಚಯಿಸಬೇಕು.
[ಮಿರ್ಲೆ ಅಲ್ಲದೆ ಮಿಥಿಲೆ, ಮಿಥಿಲಾನಗರ, ರಾಮಬಯಲು ಇತ್ಯಾದಿ ಪರ್ಯಾಯ ಹೆಸರುಗಳಿವೆ. ಮಿರ್ಲೆಯ ಮೂಲ ಹೆಸರು ಶಾಸನಗಳಲ್ಲಿ ಮಿರಿಲೆ, ಮಿರಲೆ ಮತ್ತು ದಕ್ಷಿಣ ಐಯಾವಳೆ (ಐಹೊಳೆ?) ಎಂದೂ ನಮೂದಿಸಲಾಗಿದೆ]. ಅದೇನೇ ಇರಲಿ ಸದ್ಯಕ್ಕೆ ಚಾಲ್ತಿಯಲ್ಲಿರುವ ಮಿರ್ಲೆ ಎನ್ನುವುದನ್ನು ಕೆಲವರು ರ ಿಗೆ ಲ ಒತ್ತುಕೋಟ್ಟು ಬರೆಯುತ್ತಾರೆ. ಆದರೂ ಎರಡನ್ನೂ ಒಂದೇ ರೀತಿ ಉಚ್ಚರಿಸುತ್ತೇವೆ. ಇದನ್ನು ಇಂಗ್ಲೀಷಲ್ಲಿ ಮೂರು ರೀತಿ Transliterate ಮಾಡಲು ಸಾಧ್ಯ: Mirle, Mirlay ಮತ್ತು Mirley. ಈಗ ಬಳಸುತ್ತಿರುವ Mirleಯನ್ನು ಕೈಬಿಡುವುದರಿಂದ ಮಹಾರಾಷ್ಟ್ರದ ಮತ್ತು ಅಮೇರಿಕಾದಲ್ಲಿರುವ Mirle ಪ್ರದೇಶಗಳಿಗೆ ಭಿನ್ನವಾಗಿ ಬರೆದಂತಾಗುವ ಪ್ರಯೋಜನವಿದೆಯಾದರೂ ಹಲವಾರು ಧಾಖಲೆಗಳನ್ನು ಡಿಜಿಟಲ್ ರೂಪದಲ್ಲಿ ಶೋಧಿಸುವಾಗ Mirleಯನ್ನು ಬಳಸದೆ Mirlay ಅಥವ Mirley ಎಂದು ಬಳಸಿದರೆ ನಾವು ಮಾಹಿತಿಯನ್ನು ಮಿಸ್ ಮಾಡಿಕೋಳ್ಳುವ ಸಾಧ್ಯತೆ ಇದೆ. ಹೆಸರುವಾಸಿಯಾದ ರಾಜ್ಯ, ನಗರ, ದೇಶಗಳ ಹೆಸರುಗಳಾದರೆ ಶೋಧಯಂತ್ರಗಳು ಆಟೋಮ್ಯಾಟಿಕ್ ಆಗಿ ಪರ್ಯಾಯ ಪದಗಳನ್ನು ಬಳಸಿ ಶೋಧಿಸುತ್ತವೆ. ಹೀಗಾಗಿ ಪ್ರಬಲ ಕಾರಣಗಳಿಲ್ಲದೆ ಬರೆವ ರೀತಿಯನ್ನು ಬದಲಿಸಿದರೆ ಅನಾನುಕೂಲವಾಗುವ ಸಾಧ್ಯತೆಗಳಿವೆ. ಪೂರ್ಣವಾಗಿ ಹೊಸ ಹೆಸರನ್ನೇ (ಉದಾ: ಮಿಥಿಲಾನಗರ) ಇಡುವುದಾದರೂ ಈ ತೊಂದರೆ

ಅನಿವಾರ್ಯ.

---

## *ವಿದ್ಯೆ ಮತ್ತು ಅಭಿವೃದ್ಧಿಯೊಂದಿಗೆ ಹೆಚ್ಚಾಗಿದೆಯೆ ಮೌಢ್ಯ?*

ಹಿಂದು ಸ್ವರಾಜ್ಯವನ್ನು ಗಂಭೀರವಾಗಿ ಪರಿಗಣಿಸುವಂತೆ ಮಹಾತ್ಮ ಗಾಂಧಿ ಭವಿಷ್ಯದ ನಾಯಕರಾದ ಜವಾಹರ್ ಲಾಲ್ ನೆಹರು ಅವರಿಗೆ ಹೇಳಿದಾಗ "ನಮ್ಮ ಹಳ್ಳಿಗಳಲ್ಲಿ ನಮ್ಮ ಭವಿಷ್ಯ ಇರುವುದಿಲ್ಲ. ನಮ್ಮ ಹಳ್ಳಿಗಳು ಮೂಢನಂಬಿಕೆಯ ಕೊಂಪೆಗಳು. ಭವಿಷ್ಯ ಇರುವುದು ಈ ಪಶ್ಚಿಮ ಪ್ರಣೀತ ಆಧುನಿಕತೆಯ ಜೊತೆಗೆ" ಎಂದು ಉತ್ತರಿಸಿದರಂತೆ (ಅನಂತ ಮೂರ್ತಿ, ಯು. ಆರ್. 2007, ಪು. 77). ವಿಪರ್ಯಾಸವೆಂದರೆ ಈಗ ಸುಮಾರು ಏಳು ದಶಕಗಳ ನಂತರ ಸಾಕಷ್ಟು ಶಿಕ್ಷಣ ಮತ್ತು ಆರ್ಥಿಕ  ಸುಧಾರಣೆಗಳಾದ ಮೇಲೂ ನಾವು ಕಾಣುವುದು ಗ್ರಾಮೀಣರಲ್ಲಿ ಹೆಚ್ಚಿದ ಮೌಢ್ಯವಷ್ಟೇ ಅಲ್ಲದೆ ಸುಶಿಕ್ಷಿತ ಶ್ರೀಮಂತ ನಗರವಾಸಿಗಳಲ್ಲೂ ಹೆಚ್ಚಿದ ಮೌಢ್ಯ. ಈ ಮೌಢ್ಯದ ಬಗ್ಗೆ ಕುವೆಂಪು ಅವರು 1963ರಲ್ಲಿ ಬರೆದದ್ದನ್ನು ಗೆಳೆಯರೊಬ್ಬರು ಚಿತ್ರರೂಪದಲ್ಲಿ ಕಳಿಸಿದ್ದನ್ನು ಇಲ್ಲಿ ಕೊಡುತ್ತಿದ್ದೇನೆ.

*ನಮ್ಮಲ್ಲಿ ಸಂಸ್ಕೃತಿಯ ಹೆಸರಿನಲ್ಲಿ, ಮತದ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಪೂರ್ವಿಕರ ಪ್ರಾಚೀನ ವೈಭವಗಳ ಕರ್ಮಕಾಂಡವನ್ನು ಮತ್ತೆ ಜೀರ್ಣೋದ್ಧಾರ ಮಾಡಿ ಪ್ರತಿಷ್ಠಾಪಿಸುವ ಸ್ವಾರ್ಥತಾ ಮೂಲವಾದ ಕುರುಡು ನೆವದಲ್ಲಿ, ಅವಿವೇಕ ಮೌಢ್ಯಗಳಿಗೆ ವೈಜ್ಞಾನಿಕತೆಯ ಮತ್ತು ವಿಚಾರದ ಚಿನ್ನದ ಮುಲಾಮು ಹಚ್ಚಿ ಜನರನ್ನು ದಿಕ್ಕು ತಪ್ಪಿಸಿ, ವಂಚಿಸುವ ಮಹೋದ್ಯೋಗ ನಿರ್ಲಜ್ಜೆಯಿಂದ ಸಾಗುತ್ತಿರುವುದನ್ನು ದಿನದಿನವೂ ನೋಡುತ್ತಿದ್ದೇವೆ. ಅಂತಹ ಆತ್ಮವಂಚನ ಮತ್ತು ಪರವಂಚನಕರವಾದ ಉದ್ಯೋಗಪ್ರಸಿದ್ಧರೂ ಪ್ರತಿಷ್ಠಿತರೂ ಆದ ಸ್ವಾರ್ಥಸಾಧಕ ವ್ಯಕ್ತಿಗಳಿಂದಲೆ ಪರಿಪೋಷಿತವಾಗುತ್ತಿರುವುದನ್ನು ನೋಡಿದರೆ ಈ ದೇಶದಲ್ಲಿ ವಿಜ್ಞಾನದ ಯಂತ್ರವಿದ್ಯೆಯಿಂದ ಪಂಚವಾರ್ಷಿಕ ಯೋಜನೆಗಳು ಮುಂದುವರಿದರೂ ವೈಜ್ಞಾನಿಕ ದೃಷ್ಟಿಯಾಗಲಿ ವಿಚಾರವಾದವಾಗಲಿ ವಿಜಯ ಪಡೆಯುವ ಕಾಲ ಹತ್ತಿರದಲ್ಲಿ ಎಲ್ಲಿಯೂ ಗೋಚರವಾಗುತ್ತಿಲ್ಲ.*

# 3

# ಮಿರ್ಲೆ ಇತಿಹಾಸ

ಎಡತೊರೆ (ತಾಲ್ಲೂಕಿನ) ಭಾಗವಾಗಿ ಮಿರ್ಲೆಯು ಕ್ರಮವಾಗಿ ಗಂಗ, ಚೋಳ, ಚಂಗಾಳ್ವ, ಕೊಂಗಾಳ್ವ, ಹೊಯ್ಸಳ, ವಿಜಯನಗರ, ಮತ್ತು ಮೈಸೂರು ಅರಸರ ಆಡಳಿತಕ್ಕೆ ಒಳಪಟ್ಟಿತ್ತು.  ಐತಿಹಾಸಿಕವಾಗಿ ಮತ್ತು ಆಡಳಿತಾತ್ಮಕವಾಗಿ ಈ ಎಂಟು ಆಳ್ವಿಕೆಯ ಭಾಗವಾಗಿ  ಗುರುತಿಸಬಹುದಾಗಿದೆ.

1. **ಮೌರ್ಯರ 'ಮಹಿಷಮಂಡಲ**' (?)
2. ತಲಕಾಡು **ಗಂಗರ ಗಂಗವಾಡಿ** ಪ್ರದೇಶ  (5-10 ನೇ ಶತಮಾನ)
3. ಗಂಗರನ್ನು ಸೋಲಿಸಿ ಅಧಿಪತ್ಯ ಸ್ಥಾಪಿಸಿದ **ಚೋಳರ ಇಡೈತೊರೆನಾಡು** (11-12ನೇ ಶತಮಾನ)
4. ಮೂಲತಃ ಜೈನರಾಗಿ  ಹನಸೋಗೆಯನ್ನು ರಾಜಧಾನಿಯನ್ನಾಗಿಸಿಕೊಂಡ ಸಾಮಂತರಾದ  **ಚಂಗಾಳ್ವರ**  ಆಡಳಿತ (11-15ನೇ ಶತಮಾನ)  (ಇತರ ಧರ್ಮ ಸಹಿಷ್ಣುಗಳಾದ ಚಂಗಾಳ್ವರು 15ನೇ ಶತಮಾನದ ಹೊತ್ತಿಗೆ ವೀರಶೈವರಾದರು)
5. ಸಾಮಂತ **ಕೊಂಗಾಳ್ವರು**  ಸಾಲಿಗ್ರಾಮದ ಪ್ರದೇಶದಲ್ಲಿ ಇದ್ದ ಶಾಸನಗಳಿವೆ **(**11-12ನೇ ಶತಮಾನ)
6. ಗಂಗರ ಜೊತೆಗೂಡಿ ಚೋಳರನ್ನು ವಿರೋಧಿಸಿ ಆಧಿಪತ್ಯ ಸ್ಥಾಪಿಸಿದ **ಹೊಯ್ಸಳರ** ಆಡಳಿತ (11-14 ನೇ ಶತಮಾನ)
7. ದಕ್ಷಿಣಕ್ಕೆ ವಿಸ್ತರಿಸಿ ಚಂಗಾಳ್ವರನ್ನೂ ಸೇರಿದಂತೆ ಹಲವಾರು ಸಾಮಂತರನ್ನು ನೇಮಿಸಿದ **ವಿಜಯನಗರ** ಸಾಮ್ರಾಜ್ಯ (ಸ್ಥಾಪನೆ: 1336, 14-17ನೇ ಶತಮಾನ),
8. ವಿಜಯನಗರದ ಅವನತಿಯೊಂದಿಗೆ ಪ್ರಭಲವಾದ **ಮೈಸೂರು ಅರಸರ** ಆಳ್ವಿಕೆ (1499-1947) (ಅನುಬಂಧ ೩ ನೋಡಿ). ಈ ಅವಧಿಯಲ್ಲಿ ಆಡಳಿತ ಸುಮಾರು 36 ವರ್ಷ

(1763-1799) **ಹೈದರ್ ಮತ್ತು ಟಿಪ್ಪು** ಹಾಗೂ 50 ವರ್ಷ (1831-1867) **ಬ್ರಿಟೀಷ್ ಕಮೀಷನರದ್ದಾ**ಗಿತ್ತು. ಸುಮಾರು 1862 ರಲ್ಲಿ ಅಸ್ಥಿತ್ವಕ್ಕೆ ಬಂದ ಮೈಸೂರು ಜಿಲ್ಲೆಯಲ್ಲಿ 1869ರ ವೇಳೆಗೆ ಇದ್ದ 14 ತಾಲ್ಲೂಕುಗಳಲ್ಲಿ ಎಡತೊರೆಯೂ ಒಂದು.

**ಮೈಸೂರು ಅರಸರ** ಕಾಲದಲ್ಲಿ ತಾಲ್ಲೂಕಿನ ಹಲವಾರು ಧೇವಸ್ಥಾನಗಳ ಜೀರ್ಣೋದ್ಧಾರ ವಾಯಿತು. ರಾಜಋಷಿ ಎಂದು ಕರೆಯಲಾಗುತ್ತಿದ್ದ **ನಾಲ್ವಡಿ ಕೃಷ್ಣರಾಜ ಒಡೆಯರ** ಅವರ ರಾಜ್ಯಾಡಳಿತ ಪ್ರಪಂಚದಲ್ಲೇ ಅತ್ಯುನ್ನತ ಎಂದು ಬಿಟೀಷರಿಂದಲೇ ಹೊಗಳಿಸಿಕೊಂಡಿತ್ತು. He was a philosopher-king, who was seen by Paul Brunton as living the ideal expressed in Plato's Republic. He has been compared to Emperor Ashoka by the English statesman Lord Samuel. Acknowledging Krishnaraja Wadiyar IV's noble and efficient kingship, Lord John Sankey declared in 1930 at the Round Table Conference in London, "Mysore is the best administered state in the world"

ಹೊಯ್ಸಳರು (11 ರಿಂದ 14ನೇ ಶತಮಾನ) ನೂರಾರು ದೇವಸ್ಥಾನಗಳನ್ನು ಕಟ್ಟಿಸಿ ಕಲೆ, ವಾಸ್ತು ಶಿಲ್ಪ ಮತ್ತು ಸಾಹಿತ್ಯಕ್ಕೆ ಹೆಚ್ಚಿನ ಮಹತ್ವ ನೀಡಿದ್ದರು. ಮಿರ್ಲೆಯಲ್ಲಿ ಹೊಯ್ಸಳರ ಆಳ್ವಿಕೆಯಲ್ಲಿ ನಿರ್ಮಿಸಿದ ದೇವಸ್ಥಾನಗಳಿರುವುದರಿಂದ, ಹಾಗೂ ದೊರೆತಿರುವ ಶಾಸನಗಳ ಪುರಾವೆಯಂತೆ ಸುಮಾರು 12ನೇ ಶತಮಾನಕ್ಕೂ ಹಿಂದೆ ಮಿರ್ಲೆ ಅಸ್ಥಿತ್ವಕ್ಕೆ ಬಂದಿರಬಹುದು. ಇಮ್ಮಡಿ ನರಸಿಂಹನ 1220ರ ಮಿರ್ಲೆ ಶಾಸನ ಬಹಳ ಸವೆದಿದ್ದು ವಿವರ ಹಾಳಾಗಿದೆ ಎನ್ನಲಾಗಿದೆ. ಗೆಜೆಟಿಯರ್ ಗಳನ್ನು ಹೊರತುಪಡಿಸಿದರೆ, ಮಿರ್ಲೆ ಬಗೆಗಿನ ವಿವರಣೆ 1902/3ರ ಸುಮಾರಿಗೆ ಎಡತೊರೆ ಅಮುಲ್ದಾರರಾಗಿದ್ದ ಶ್ರೀಮನ್ ನವರತ್ನ ರಾಮರಾವ್ ಅವರ 'ಕೆಲವು ನೆನಪುಗಳು' (1954) ಪುಸ್ತಕದಲ್ಲಿ ಹೇರಳವಾಗಿ ದೊರೆಯುತ್ತದೆ. ಈ ಹಿಂದೆ ತಿಳಿಸಿದಂತೆ, ಅವರು "ಎಡತೊರೆ ಬಹಳ ಪುಂಡ ತಾಲ್ಲೂಕೆಂದು ನನ್ನನ್ನು ಜನರು

ಹೆದರಿಸಿದ್ದರು" ಎಂದೂ "ನದಿಯ ಉತ್ತರ ಭಾಗದಲ್ಲಿ ಮಿರ್ಲೆ, ಸಾಲಿಗ್ರಾಮ, ಭೇರ್ಯ ಮೊದಲಾದ ರಸವತ್ತಾದ ಗ್ರಾಮಗಳಿವೆ. ಈ ಗ್ರಾಮಗಳಲ್ಲಿ ಹೆಸರುವಾಸಿಯಾದ ರೈತರುಗಳಿದ್ದರು. ಸಾಮಾನ್ಯವಾಗಿ ಇಲ್ಲಿನ ಮುಖಂಡರೆಲ್ಲ ಒಕ್ಕಲಿಗರೇ", ಹಾಗೂ 'ಮಿರ್ಲೆ ಯಡತೊರೆ ತಾಲ್ಲೂಕಿನ ಭಾರೀ ಗ್ರಾ" ಎಂದೂ ಹೇಳುತ್ತಾರೆ.

ಮಿರ್ಲೆಯನ್ನು ತಾಲ್ಲೂಕಿನ ಚಾರಿತ್ರಿಕ ಮತ್ತು ಪ್ರವಾಸಿ ಸ್ಥಳವೆಂದು ಗುರುತಿಸಲಾಗಿದೆ. ಅದಕ್ಕೂ ಹಿಂದೆ ಮೈಸೂರು ಅರಸರ ಆಳ್ವಿಕೆಯಲ್ಲಿ ಕೃಷಿ, ಆರೋಗ್ಯ, ಶಿಕ್ಷಣಗಳಿಗೆ ದೊರೆತ ಪ್ರಾಮುಖ್ಯತೆಯ ಫಲಗಳನ್ನು ಮಿರ್ಲೆಯಲ್ಲಿ ಕಾಣಬುಹುದಾಗಿದೆ. ಹಳೇ ಮೈಸೂರು ಪ್ರಾಂತ್ಯದ ಬಹುತೇಕ ಗ್ರಾಮಗಳು ಅರಸರು, ಮಂತ್ರಿಗಳು ಅಥವ ಸೈನಿಕರ ಬೀಡು ಬಿಟ್ಟದ್ದರಿಂದಾಗಲಿ  ಅಥವ ಯೋಧ, ಅಧಿಕಾರಿ, ಕಲಾವಿದ, ಬ್ರಾಹ್ಮಣರಿಗೆ ಬಳುವಳಿ/ ಜಾಗಿರ್ದಾರಾಗಿ ಕೊಟ್ಟವುಗಳು. ಗಂಗರ ಕಾಲದಿಂದ ಮೈಸೂರು ಅರಸರ ಕಾಲದ ವರೆವಿಗೂ ಅಗ್ರಹಾರಗಳನ್ನು ಬ್ರಾಹ್ಮಣರಿಗೆ ದತ್ತಿನೀಡುವ ಪದ್ಧತಿ ಸತತ ನಡೆಯುತ್ತಿದ್ದದ್ದರಿಂದ ಮಿರ್ಲೆಯೂ ಇಂತಹುದೇ ಒಂದು ಅಗ್ರಹಾರವಾಗಿ ಆರಂಭವಾಗಿರಬೇಕು. ಅದೇ ಕಾರಣಕ್ಕೆ ಮಿರ್ಲೆ ದೇವಸ್ಥಾನಗಳ ಊರು ಮತ್ತು ಮೂಲದಲ್ಲಿ ಇಲ್ಲಿನ ಹೆಚ್ಚಿನ ಆಸ್ತಿ (ಜಮೀನು) ಬ್ರಾಹ್ಮಣರಿಗೆ ಸೇರಿದ್ದಾಗಿತ್ತು. ನೂರಾರು ವರ್ಷಗಳ ಕಾಲ ಆಳುವವರು ಕೆರೆ ಕಟ್ಟೆ, ದೇವಸ್ಥಾನ, ಛತ್ರ, ರಸ್ತೆ, ಸಾಲು ಮರಗಳು, ಇತ್ಯಾದಿಗಳನ್ನು ಸಾರ್ವಜನಿಕರಿಗಾಗಿ ನಿರ್ಮಿಸುತ್ತಿದ್ದರು. ನಂತರದ ವರ್ಷಗಳಲ್ಲಿ ಕೃಷಿಗೆ ಒತ್ತು ನೀಡಿ ನೀರಾವರಿ ವ್ಯವಸ್ಥೆ ಕಲ್ಪಿಸತೊಡಗಿದರು. ಮುಂದೆ 19ನೇ ಶತಮಾನದ ಅಂತ್ಯ ಮತ್ತು 20ನೇ ಶತಮಾನದ ಆದಿಯಲ್ಲಿ ಶಿಕ್ಷಣ, ಆರೋಗ್ಯ, ಗ್ರಾಮನೈರ್ಮಲ್ಯಗಳಿಗಾಗಿ ಶ್ರಮಿಸಿ, ದಾನಮಾಡಿದ ನಾಯಕರುಗಳು ಕಾಣುತ್ತಾರೆ. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯಪೂರ್ವದಲ್ಲಿ ಶ್ರೀ ಬಲರಾಮೇಗೌಡರು ಕಟ್ಟಿಸಿದ ಬಾಲಕಿಯರ ಪಾಠಶಾಲೆಯಲ್ಲದೆ, ಶ್ರೀ ಕೋಟೇಗೌಡರು ಕಟ್ಟಿಸಿದ ಸಾರ್ವಜನಿಕ ಆಸ್ಪತ್ರೆ ಮತ್ತು ಶ್ರೀಮತಿ ತುಳಸಮ್ಮನವರು ಕಟ್ಟಿಸಿದ ಹೆರಿಗೆ ಆಸ್ಪತ್ರೆ ಕಟ್ಟಡಗಳು ಮೂಲಭೂತ ಶಿಕ್ಷಣ ಮತ್ತು ಆರೋಗ್ಯಕ್ಕಾಗಿ ನೀಡಿದ ಆ ಕಾಲದ ವಿಶಿಷ್ಠ ಕೊಡಿಗೆಗಳು. ಅಂದಿನ ಇಂತಹ  ಕೊಡಿಗೆಗಳು ಮಿರ್ಲೆಯಲ್ಲಿ ಮುಂದಿನ 60-70 ವರ್ಷಗಳಲ್ಲಿ

ನಡೆದೇ ಇಲ್ಲವೇನೋ ಎನ್ನಬಹುದು. ಸರ್ಕಾರ ಮತ್ತು ಪಂಚಾಯಿತಿ ಸಂಪನ್ಮೂಲಗಳಿಂದಲೇ ಮಾಡಬಹುದಾಗಿದ್ದ ದೇವಸ್ಥಾನ ಮತ್ತದರ ಕಳಸ, ಗೋಪುರಗಳ ರಿಪೇರಿ ಮಾಡಿಸಿ ದಾನಿಗಳೆಂದು ತಮ್ಮನ್ನು ಗುರುತಿಸಿಕೊಳ್ಳುವ ಹಂಬಲದ ಸಂಸ್ಕೃತಿ ಬೆಳೆದಿದೆ.

ವಾಣಿಜ್ಯ ವ್ಯವಹಾರಗಳು ಎಲ್ಲ ಕಾಲದಲ್ಲಿಯೂ ಇದ್ದವುಗಳೇ ಆದರೂ ಮಿರ್ಲೆಯಲ್ಲಿ ವಾಣಿಜ್ಯ ಚಟುವಟಿಕೆ ತೀರ ಕಡಿಮೆ (ಅಧ್ಯಾಯ 8ರಲ್ಲಿ ಹೆಚ್ಚಿನ ವಿವರಗಳಿವೆ).

## ಮಿರ್ಲೆಯ ಇತಿಹಾಸದ ಬಗ್ಗೆ ಯೋಚಿಸತೊಡಗಿದರೆ ಹಲವಾರು ಪ್ರಶ್ನೆಗಳೇಳುತ್ತವೆ

1. ಮಿರ್ಲೆ ಪಕ್ಕದಲ್ಲೇ ಹಳೇಮಿರ್ಲೆ ಇರುವುದು ಮಿರ್ಲೆಗಿಂತ ಮುಂಚೆಯೇ ಹಳೇಮಿರ್ಲೆ ಇದ್ದಿತೆಂಬುದನ್ನು ಸೂಚಿಸುತ್ತದೆಯೆ? ಹಾಗಿದ್ದರೆ ಹಳೇ ಮಿರ್ಲೆ ಯಾವಾಗ ಸ್ಥಾಪನೆಯಾಯಿತು? ಊರಿನ ಹೆಸರುಗಳು 'ಚಿಕ್ಕ ಮಿರ್ಲೆ' ಮತ್ತು "ದೊಡ್ಡ ಮಿರ್ಲೆ' ಎಂದು ಇದ್ದಿದ್ದರೆ ಈ ಅನುಮಾನ ಹುಟ್ಟುತ್ತಲೇ ಇರಲಿಲ್ಲ.

2. ಚಾಮರಾಜ ನಾಲೆ ಮಿರ್ಲೆಗೆ ಬಂದಿದ್ದು ಯಾವಾಗ? ಈ ನಾಲೆ ಮಿರ್ಲೆಯ ಭೌಗೋಳಿಕ ನಕ್ಷೆಯನ್ನೇ ಬದಲಿಸಿತು ಎಂದು ನನ್ನ ಅನಸಿಕೆ. ನಾಲ್ಕೈದು ವರ್ಷ ಹಿಂದೆಯೇ ಕೆಲಸ ಆರಂಭವಾಗಿದ್ದರೂ ಸರಿಸುಮಾರು 1903 ರಷ್ಟರಲ್ಲಿ ನಾಲೆಯಲ್ಲಿ ನೀರು ಹರಿಯಿತು ಎಂದು ಮೌಖಿಕವಾಗಿ ತಿಳಿಯಿತು. ಚಾಮರಾಜ ನಾಲೆ ನಿರ್ಮಾಣವಾದಾಗ ಅಮೃತೇಶ್ವರ ಗುಡಿಯನ್ನು ಅಲ್ಲೇ ಬಿಟ್ಟು ಊರು ಒಮ್ಮೆ ಉತ್ತರಕ್ಕೆ ಸರಿಯಿತು ಎಂಬುದು ಸ್ಪಷ್ಟ. 1950ರ ದಶಕದಲ್ಲಿ ಅಮೃತೇಶ್ವರ ಗುಡಿ ಇದ್ದ ಭಾಗದಲ್ಲಿ ಶಿಥಿಲವಾದ ಕಟ್ಟಡಗಳು ಮತ್ತು ಮನೆಗಳ ಅವಶೇಷಗಳನ್ನು ನಾನು ಗಮನಿಸಿದ್ದೇನೆ. ತದನಂತರ 1950ರ ಸುಮಾರಿಗೆ ಊರು ಪೂರ್ವಕ್ಕೆ, ಅಂದರೆ ಕೊಪ್ಪಲಿಗೆ ಬೆಳೆಯಲು ಆರಂಭಿಸಿತು.

3. ಹನ್ನೆರಡನೇ ಶತಮಾನದ ಶರಣ ಚಳವಳಿ ಪ್ರಭಾವ ಮಿರ್ಲೆ ಬಳಿಯ ಕೊಡಿಯಾಲ, ನರಸನಹಳ್ಳಿ, ಹಳೇಮಿರ್ಲೆ, ಇತ್ಯಾದಿ ಊರುಗಳ ಮೇಲೆ ಆಗಿತ್ತೆ? ಹಾಗಿದ್ದರೆ ಮಿರ್ಲೆ ಹೇಗೆ/

ಏಕೆ ಈ ಚಳುವಳಿಯ ಪ್ರಭಾವದಿಂದ ಹೊರತಾಯಿತು? ಮಿರ್ಲೆಯಲ್ಲಿ ಯಾರೊಬ್ಬರೂ ಶರಣ ಚಳವಳಿಗೆ ಸ್ಪಂದಿಸಲಿಲ್ಲ ಎಂಬುದು ಸೋಜಿಗವೇ ಸರಿ. ಚಾರಿತ್ರಿಕವಾಗಿ ಧರ್ಮಸಂಘರ್ಷಗಳು ಬಹಳ ಸಂಕೀರ್ಣ ಹಾಗೂ ಸೂಕ್ಷ್ಮದ್ದಾಗಿವೆ. ರಾಮಾನುಜಾಚಾರ್ಯರು ಮೈಸೂರು ಸಂಸ್ಥಾನಕ್ಕೆ ಬಂದ ೪೦ ವರ್ಷಗಳ ನಂತರ, ಅಂದರೆ 1160ರ ಸುಮಾರಿಗೆ ಜನಿಸಿದ ವೀರಶೈವ ಧರ್ಮ ಬಸವಣ್ಣನವರು ಕಾಲವಾದ 60 ವರ್ಷಗಳ ನಂತರ, 1168-1228 ಅವಧಿಯಲ್ಲಿ ಮೈಸೂರು ಸಂಸ್ಥಾನಕ್ಕೆ ಪ್ರವಾಹದಂತೆ ವಾಯುವ್ಯ ದಿಕ್ಕಿನಿಂದ ಆರಂಭಿಸಿ ಆಗ್ನೇಯದ ಕೊಳ್ಳೇಗಾಲದ ವರೆವಿಗೆ ಪ್ರಸಾರಗೊಂಡಿತು. ಒಡೆಯರು ಇದನ್ನು 1399-1610 ಕಾಲಘಟ್ಟದಲ್ಲಿ ಒಂದು 'ರಾಜ್ಯ ಧರ್ಮ' ಎಂದು ಪರಿಗಣಿಸಿದರು. ಕೆಳದಿ, ಇಕ್ಕೇರಿ, ಬಿದನೂರು ನಾಯಕರುಗಳು 1550-1763 ರ ಅವಧಿಯಲ್ಲಿ ಈ ಧರ್ಮವನ್ನು ಸಂರಕ್ಷಿಸಿ ಬೆಳೆಸಿದರು. ವೀರಶೈವ ಧರ್ಮ ಪ್ರಸಾರದ ಅಲೆ ಎಡತೊರೆ ತಾಲ್ಲೂಕಿನಲ್ಲೂ ಸಾಕಷ್ಟು ಪರಿಣಾಮ ಮಾಡಿರುವುದು ನಿರ್ವಿವಾದ. ಆದರೂ ಮಿರ್ಲೆ ಇದರಿಂದ ಸಂಪೂರ್ಣ ಹೊರಉಳಿಯಿತು! ಈ ಸಂಧರ್ಬದಲ್ಲಿ "ಎದೆಗೆ ಬಿದ್ದ ಅಕ್ಷರ" ದಲ್ಲಿ ದೇವನೂರು ಮಹದೇವ ಅವರು 'ಈ ವಚನ ಧರ್ಮವನ್ನು ಜಾತಿಯ ಬಚ್ಚಲಿನಿಂದ ಮೇಲೆತ್ತಿ ರಕ್ಷಿಸಿದರೆ ಜಗತ್ತಿಗೇ ಇದು ಬೆಳಕಾಗಬಹುದು, ಇದು ಜಾತಿಯಾದರೆ ಕೆಟ್ಟ ಜಾತಿ; ಧರ್ಮವೆಂದರೆ ಮಹೋನ್ನತ ಧರ್ಮ" ಎಂದು ಹೇಳಿರುವುದನ್ನು ಸ್ಮರಿಸಬಹುದಾಗಿದೆ.

ಅಂದಹಾಗೆ, ವಿಷ್ಣು ದೇವಾಲಯಗಳಲ್ಲಿ ಪೂಜೆಗೆ ತುಳಸಿಯನ್ನು ಬಳಸಿದರೆ, ಈಶ್ವರ ದೇವಸ್ಥಾನಗಳಲ್ಲಿ ಬಿಲ್ವಪತ್ರೆಯನ್ನು ಬಳಸುತ್ತಾರೆ ಮತ್ತು ವಿಷ್ಣು ದೇವಸ್ಥಾನಗಳಲ್ಲಿ ಬ್ರಾಹ್ಮಣ ಅರ್ಚಕರಾದರೆ, ಶಿವ ದೇವಾಲಯಗಳಲ್ಲಿ 'ಶಿವದ್ವಿಜರು' ಅರ್ಚಕರಾಗಿರುತ್ತಿದ್ದರು. ಅಂತೆಯೇ ಗ್ರಾಮದೇವತೆಗಳ ಅರ್ಚಕರು ಶೂದ್ರರು! ಕಾವೇರಿ ತೀರದ ಸಣ್ಣ ಮಠದ ಬಳಿ ಒಂದು ಶಿವಲಿಂಗವಿದ್ದ ಪುಟ್ಟ ಶಿವದೇವಾಲಯ ಮತ್ತು ಬಿಲ್ವಪತ್ರೆ ಮರವಿದ್ದಿದ್ದನ್ನು ನನ್ನ ಬಾಲ್ಯದಲ್ಲಿ ನೋಡಿದ್ದೆ.

ಇಪ್ಪತ್ತನೇ ಶತಮಾನದ ಮಿರ್ಲೆ ಇತಿಹಾಸವನ್ನಾದರೂ ನಾವು ಆದಷ್ಟು ನಿಖರವಾಗಿ

 

ಧಾಖಲಿಸಲು ಸಾಧ್ಯವೆ? ಇಪ್ಪತ್ತನೇ ಶತಮಾನದ ಉತ್ತರಾರ್ಧದ ಬೆಳವಣಿಗೆಗೆ ನಮ್ಮಲ್ಲಿ ಬಹಳಷ್ಟು ಮಂದಿ ಸಾಕ್ಷಿಯಾಗಿದ್ದೇವೆ. ಹೀಗಿದ್ದೂ, ಶತಮಾನದ ಆದಿಯಲ್ಲಿ ಪ್ಲೇಗ್ (1998) ನಿಂದ ತತ್ತರಿಸಿದಾಗಿನಿಂದ ಮೊದಲ್ಗೊಂಡು, ಮಹಾಯುದ್ಧಗಳು, ಸ್ವಾತಂತ್ರ್ಯ ಚಳುವಳಿ, ಕರ್ನಾಟಕ ಏಕೀಕರಣ, ಭೂಹಿಡವಳಿ/ ಗೇಣಿದಾರ ಚಳವಳಿ, ರೈತ ಚಳವಳಿ, ಇತ್ಯಾದಿಗಳಿಗೆ ಮಿರ್ಲೆಯ ಪ್ರತಿಕ್ರಿಯೆ ಹಾಗೂ ಇತರ ಘಟನಾವಳಿಗಳೊಂದಿಗೆ ಸಮಗ್ರವನ್ನೂ ದಾಖಲಿಸುವಂತಾದರೆ ಮುಂದಿನ ಪೀಳಿಗೆಗೆ ಕನಿಷ್ಟ ಇಪ್ಪತ್ತನೇ ಶತಮಾನದ ನಂಬಲರ್ಹವಾದ ವಸ್ತುನಿಷ್ಟ ಮಿರ್ಲೆ ಇತಿಹಾಸ ದಕ್ಕೀತು.

---

**ಪ್ರತಿಕ್ರಿಯೆಗಳು:**

**ಸುಮ**: ಸರ್ ನಮಸ್ಕಾರ. ನಿಮ್ಮ ೩ ನೆ ಪ್ರಶ್ನೆ ಹೀಗಿರಬಹುದೆಂದು ಊಹಿಸಿರುವುದಷ್ಟೆ. ೧೨ ನೆ ಶತಮಾನದಲ್ಲಿ ಶರಣರು ನೀವು ಹೇಳಿರುವ ಯಾವುದಾದರು ಒಂದು ಊರಿನಲ್ಲಿ ತಂಗಿರಬಹುದು. ಅಲ್ಲಿ ಕೆಲವು ಧರ್ಮದವರು ಮತಾತಂರ ವಾಗಿರಬಹುದು. ಯಾವ ಊರಿನಿಂದ ಶರಣರನ್ನು ಕಂಡು ಮತಾಂತರ ವಾಗಿದ್ದರೊ ಅವರೆಲ್ಲ ಅವರವರ ಊರಿನಲ್ಲೆ ನೆಲೆಸಿದ್ದಾರೆ. ಮಿರ್ಲೆಯಿಂದ ಮತಾಂತರಕ್ಕೆ ಯಾರು ಹೋಗದೆ ಇರದ ಕಾರಣ ಶರಣರು ಮಿರ್ಲೆಗೆ ಬರದಿರುವುದಕ್ಕೆ ಕಾರಣವಿರಬಹುದು. ಸುಮ್ಮನೆ ನನ್ನದೊಂದು ಕಲ್ಪನೆ.ತಪ್ಪಿದ್ದರೆ ಕ್ಷಮೆಯಿರಲಿ

**ರವಿಶಂಕರ್:** ಮಿರ್ಲೆ ಸುತ್ತ ಮುತ್ತ ಇರುವ ವೀರಶೈವರು ಪಂಚಪೀಠಕ್ಕೆ ನಡೆದುಕೊಳ್ಳುವವರು, ಶರಣರ ಕಾಲಕ್ಕೂ ಹಿಂದಿನವರು.  ಮಿರ್ಲೆ ಇತಿಹಾಸದಲ್ಲಿ ಎರಡಕ್ಕಿಂತ ಹೆಚ್ಚು ಬಾರಿ ಊರು ಸ್ಥಳಾಂತರ ಗೊಂಡಿದೆ. ನರಸಿಂಹ ದೇವರ ಗುಡಿ ಊರ ಮಧ್ಯಕ್ಕೆ ಬಂದರೆ, ಹಳೆಯ ಅಮೃತೇಶ್ವರ ಗುಡಿ ಊರಿನ ಹೊರಭಾಗ ಆಗಿದ್ದಿತು. ಅಲ್ಲಿಂದ ಊರು ಈಗಿರುವಲ್ಲಿಗೆ ಬದಲಾಗಿದೆ. ಇಲ್ಲಿರುವ ರಾಮನ ದೇವಾಲಯ ಹೊಸದು. ಶಿವ ನ ದೇವಾಲಯ ಕಟ್ಟಿದ ಬಗ್ಗೆ ದಾಖಲೆಗಳಿವೆ.

**ಪ್ರಶಾಂತ್:** ಮಿರ್ಲೆಯ ಇತಿಹಾಸ ಪಕ್ಕದ ಹನಸೋಗೆಯೊಂದಿಗೆ ತುಲನೆ ಮಾಡಿದರೆ ನಮಗೆ ಹೆಚ್ಚು ಅನುಕೂಲ ಎಂಬುದು ನನ್ನ ಭಾವನೆ. ಕಾರಣ ಇಂತಿವೆ:

೧. ಕಾವೇರಿ ನದಿಯ ದಡದಲ್ಲಿ ಸೃಷ್ಟಿಯಾದ ನಾಗರಿಕತೆ ಹೆಚ್ಚಾಗಿ ಕೇಂದ್ರಿತವಾಗಿರುವುದನ್ನು ನಾವು ಪನಸೋಗೆ (ಹನಸೋಗೆ) ಮತ್ತು ಮಿರ್ಲೆ ಗ್ರಾಮಕ್ಕೆ ಇರುವ ಹಲವು ಐತಿಹಾಸಿಕ ಸಂಗತಿಗಳೊಂದಿಗೆ ಗುರುತಿಸಬಹುದು

೨) ಹನಸೋಗೆ ಜೈನರ ಕೇಂದ್ರವಾಗಿ ಸಾಲಿಗ್ರಾಮ ಹೆಚ್ಚು ಸಂಪರ್ಕವನ್ನು ಹೊಂದಿತ್ತು. ಅದಕ್ಕೆ

ಪೂರಕವಾಗಿ ಕಾವೇರಿ ನದಿಯಲ್ಲಿ ನಿರ್ಮಾಣವಾದ ಕಚ್ಚಾ ಸೇತುವೆ ಅವಶೇಷಗಳು ಕಾಣಸಿಗುತ್ತವೆ.
೩) ಅಂತೆಯೇ ಮಿರ್ಲೆ ಗ್ರಾಮದ ಪರಿಸರದಲ್ಲಿ ಶಿವ ಮತ್ತು ವಿಷ್ಣುವಿನ ಆರಾಧಕರು ಅಧಿಕ ಸಂಖ್ಯೆಯಲ್ಲಿದ್ದು ಇದಕ್ಕೆ ಪೂರಕವಾಗಿ ಹಲವು ಶಿವ ಮತ್ತು ವಿಷ್ಣು ದೇವಸ್ಥಾನಗಳು ನಿರ್ಮಾಣಗೊಂಡಿವೆ.
೪) ಧರ್ಮದ ಆಚರಣೆಯಲ್ಲಿ ಕ್ರಾಂತಿ ನಡೆದ ಸಾಕ್ಷಿಯಾಗಿ ನಮಗೆ ರಾಮಾನುಜಾಚಾರ್ಯರ ಇತಿಹಾಸ ಎದುರಿಗೆ ಬರುತ್ತದೆ. ಆದರೆ ಜೈನರಲ್ಲಿ ದಾಖಲಾಗಿ ಉಳಿದಿರುವ ಮಾಹಿತಿಯು ಅಗೋಚರವಾಗಿ ಉಳಿದಿದೆ ಕಾರಣ ಹುಡುಕುವುದಕ್ಕೆ ಒಂದು ಅವಕಾಶವಿದೆ. ಇದರ ಬಗ್ಗೆ ಬಗೆದಷ್ಟು ಆಳವೆನಿಸುತ್ತಿದೆ.

**ಪ್ರತಿಕ್ರಿಯೆಗಳಿಗೆ ಉತ್ತರ ರೂಪದಲ್ಲಿ**:

ಮಿತ್ರರೆ,

ನನ್ನ ಈ ಹಿಂದಿನ ಪ್ರಶ್ನೆಗಳಿಗೆ ಪ್ರತಿಕ್ರಿಯಿಸಿದ ಹಾಗೂ ಅವಲೋಕಿಸಿ like ಮಾಡಿದ ಎಲ್ಲರಿಗೂ ಧನ್ಯವಾದಗಳು. ಇಲ್ಲಿ ಯಾವುದಕ್ಕೂ ಪುರಾವೆಸಹಿತ ನಿಖರ ಉತ್ತರ ಕಷ್ಟಸಾಧ್ಯ. ಇಂದಿನ ಪೀಳಿಗೆಯ ಅಭಿಮಾನಿ ಯುವಕರು ಹೆಚ್ಚು ಮಿರ್ಲೆ ಬಗೆಗಿನ ಸಂಶೋಧನೆಯಲ್ಲಿ ತೊಡಗಿಸಿಕೊಳ್ಳಲಿ ಎಂದು ಆಶಿಸುತ್ತೇನೆ.

**ಶ್ರೀಮಾನ್ ರವಿಶಂಕರ** ಅವರು ಹೇಳುವಂತೆ ಊರು ಎರಡಕ್ಕಿಂತ ಹೆಚ್ಚು ಭಾರಿ ಸ್ಥಳಾಂತರಗೊಂಡ್ಡಿದ್ದರೆ ಅದು ಯಾವ ಕಾಲದಲ್ಲಿ ಮತ್ತು ಯಾವ ಕಾರಣಕ್ಕೆ ಎಂಬುದು ಕುತೂಹಕರ ವಿಷಯ. ಚಾಮರಾಜ ನಾಲೆ ನಿರ್ಮಾಣವಾದಾಗ ಅಮೃತೇಶ್ವರ ಗುಡಿಯನ್ನು ಅಲ್ಲೇ ಬಿಟ್ಟು ಊರು ಒಮ್ಮೆ ಉತ್ತರಕ್ಕೆ ಸರಿಯಿತು ಎಂಬುದು ಸ್ಪಷ್ಟ. ೧೯೫೦ರ ದಶಕದಲ್ಲಿ ಅಮೃತೇಶ್ವರ ಗುಡಿಯ ಇದ್ದ ಭಾಗದಲ್ಲಿ ಶಿಥಿಲವಾದ ಕಟ್ಟಡಗಳು ಮತ್ತು ಮನೆಗಳ ಅವಶೇಷಗಳನ್ನು ನಾನು ಗಮನಿಸಿದ್ದೇನೆ. ತದನಂತರ ೧೯೫೦ರ ಸುಮಾರಿಗೆ ಊರು ಪೂರ್ವಕ್ಕೆ, ಅಂದರೆ ಕೊಪ್ಪಲಿಗೆ ಬೆಳೆಯಲು ಆರಂಭಿಸಿತು. ಅದಕ್ಕೂ ಹಿಂದೆ ನಡೆದಿರಬಹುದಾದ ಮಿರ್ಲೆಯ ಸ್ಥಳಾಂತರಗಳ ಬಗ್ಗೆ ರವಿಶಂಕರ ಅವರು ಬೆಳಕು ಚಲ್ಲಿದರೆ ತಿಳಿಯಲು ಬಹಳ ಕುತೂಹಲವಿದೆ.

**ಶ್ರೀಮತಿ ಸುಮ** ಅವರ ತರ್ಕ ಒಪ್ಪುವಂತೆಯೇ ಇದೆ. ಆದರೂ ಮಿರ್ಲೆಯಲ್ಲಿ ಯಾರೊಬ್ಬರೂ ಶರಣ ಚಳವಳಿಗೆ ಸ್ಪಂದಿಸಲಿಲ್ಲ ಎಂಬುದು ಸೋಜಿಗವೇ ಸರಿ.

ನನ್ನ ಮೂರನೆ ಪ್ರಶ್ನೆಗೆ ಪ್ರತಿಯಾಗಿ **ಶ್ರೀಮಾನ್ ಪ್ರಶಾಂತ್** ಅವರ ಸಲಹೆಗಳು ಸ್ವಾರಸ್ಯಕರವಾಗಿದ್ದು, ಮತ್ತಷ್ಟು ಬೆರೆಯೇ ಆದ ಪ್ರಶ್ನೆಗಳನ್ನು ನಮ್ಮ ಮುಂದೆ ತಂದಿವೆ.

 

೧. ನಾನು ಈ ಹಿಂದೆ ಹೇಳಿದ ಹಾಗೆ ಚಾರಿತ್ರಿಕವಾಗಿ **ಹನಸೋಗೆ**ಯನ್ನು ಚಂಗಾಳ್ವರ ರಾಜಧಾನಿಯಾಗಿ (ಅಥವ ಚಂಗಾಳ್ವರ ಮುಖ್ಯ ಪಟ್ಟಣವಾಗಿ) ಮತ್ತು **ಸಾಲಿಗ್ರಾಮ**ವನ್ನು ಗಂಗರಸರ ಮೂಲ ನೆಲೆ ಎಂದು ಗುರುತಿಸಲಾಗಿದೆ. ಮಿರ್ಲೆಯ ಚರಿತ್ರೆ ತಿಳಿಯಲು ಹನಸೋಗೆಯ ಚರಿತ್ರೆಯೊಟ್ಟಿಗೆ ಹೋಲಿಸುವ ಅವಶ್ಯಕತೆಯಿದೆಯೆ? ಅಷ್ಟಕ್ಕೂ ಒಂದು ಸ್ಪಷ್ಟ ಚಾರಿತ್ರಿಕ ಚಿತ್ರ ದೊರೆತರೆ ಮಾತ್ರ ಹೋಲಿಕೆ ಸಾಧ್ಯ. ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿಯೂ ಹನಸೋಗೆ ಹೆಚ್ಚು ಪ್ರಖರ ಇತಿಹಾಸ ಹೊಂದಿರುವಂತಿದೆ. ಹನಸೋಗೆಗೆ ಹೋಲಿಕೆ ಮಾಡಿಕೊಳ್ಳಬಹುದಾದಷ್ಟು ಮಿರ್ಲೆಯ ಇತಿಹಾಸವೇ ಸ್ಪಷ್ಟವಾಗಿಲ್ಲ ಎನಿಸುತ್ತದೆ.

೨. ಮಿರ್ಲೆ-ಸಾಲಿಗ್ರಾಮಗಳ ಸಂಪರ್ಕ, ಹನಸೋಗೆ-ಸಾಲಿಗ್ರಾಮಗಳ ಸಂಪರ್ಕದಷ್ಟೇ ಬೇರೆ ಬೇರೆ ಕಾಲಮಾನದಲ್ಲಿ ಇದ್ದಂತಿದೆ. ಶ್ರೀರಾಮಾನುಜಾಚಾರ್ಯರು ಮಿರ್ಲೆಯಲ್ಲಿ ನೆಲಸಿ ನಂತರ ಸಾಲಿಗ್ರಾಮಕ್ಕೆ ತೆರಳಿದರು ಎನ್ನುವುದನ್ನು ಇಲ್ಲಿ ನೆನೆಯಬಹುದು. ಕಾವೇರಿ ನದಿಗೆ ಬಹಳ ಹಿಂದೆ ನಿರ್ಮಿಸಲಾಗಿದ್ದ ಕಟ್ಟಾ ಸೇತುವೆ ಎನ್ನುವುದು ಬೇಸಿಗೆಯಲ್ಲಿ  ಹೊಳೆ ದಾಟಲು ಬಳಸುತ್ತಿದ್ದ ಕೆಲವು ಹಳೇ ಕಟ್ಟೆಗಳು.

೩. ವಿಷ್ಣು ದೇವಾಲಯಗಳಿಗೆ ಹೋಲಿಸಿದರೆ, ಶಿವದೇವಾಲಯಗಳು ಮಿರ್ಲೆಯಲ್ಲಿ ಕಡಿಮೆ. ಇರುವ ಒಂದೆರಡು, ೮ನೇ ಶತಮಾನದ ಶಂಕರಾಚಾರ್ಯರ 'ಶೈವ" ಮಾರ್ಗದ ಪರಿಣಾಮವೋ ಅಥವ 12ನೇ ಶತಮಾನದ ವೀರಶೈವ ಚಳುವಳಿಯ ಪರಿಣಾಮವೊ ತಿಳಿಯಬೇಕಾಗಿದೆ.

೪. ಜೈನ ಧರ್ಮ ಮಿರ್ಲೆಯಲ್ಲಿದ್ದುದರ ಬಗ್ಗೆ ಹೆಚ್ಚಿನ ಮಾಹಿತಿ ಇಲ್ಲ. ನಾವೆಲ್ಲರೂ ಇದುವರೆವಿಗೆ ಕಂಡಿರುವ/ ಕ್ರೂಢೀಕರಿಸಿರುವ ಮಾಹಿತಿ ಅತ್ಯಂತ ಕಡಿಮೆ ಎಂಬುದು ಸುಸ್ಪಷ್ಟ.

---

## ಮಿರ್ಲೆಯಲ್ಲಿ ಗುರುತಿಸಿರುವ ಶಾಸನಗಳು

ಪುರಾತತ್ವ (ಶಾಸನ/ ಗಜೆಟಿಯರ್) ಪಿತಾಮಹ ಬಿ. ಎಲ್. ರೈಸ್ ಅವರು 1879ರ ಸುಮಾರಿಗೆ ಮೈಸೂರು ಸಂಸ್ಥಾನದ ವಿವಿಧ ತಾಲ್ಲೂಕುಗಳಲ್ಲಿ ಕನಿಷ್ಟ 3722 ಶಾಸನಗಳಿರುವುದಾಗಿಯೂ ಮತ್ತು ಬಹುಪಲು ಶಾಸನಗಳು ದಾನಶಾಸನಗಳಾಗಿರುವುದಾಗಿಯೂ ಅಂದಾಜಿಸಿದ್ದರು (ಶ್ರೀನಿವಾಸ ಮೂರ್ತಿ, ಎಸ್. ಎಲ್. , 2011, ಪು. 150-152).  ಅವರು ಸಂಗ್ರಹಿಸಿದ 'ಮೈಸೂರಿನ ಪೂರ್ವ ತಾಲ್ಲುಕುಗಳ ಶಾಸನಗಳ" ಸಂಪುಟ 3 ರಲ್ಲಿಯೂ, 'ಇತರ ತಾಲ್ಲುಕುಗಳ ಶಾಸನಗಳು' ಸಂಪುಟ 4

1898ರಲ್ಲಿಯೂ ಪ್ರಕಟಿಸಿದರು (ಮೈಸೂರು, ಭಾಗ 2). **ಸುಮಾರು** ಸಾವಿರ ವರ್ಷ ಇತಿಹಾಸವಿರುವ ಮಿರ್ಲೆಯಲ್ಲಿ ಎಂಟು ಶಾಸನಗಳನ್ನು ಗುರುತಿಸಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ 1976ರಲ್ಲಿ ಪ್ರಕಟಿಸಿದ Epigrphia Karnatakaದ 5ನೆ ಸಂಪುಟದಲ್ಲಿ ವಿವರಿಸಲಾಗಿದೆ. ಪುರಾತತ್ವ ಉತ್ಖನನ (Archaelogical excavation) ಮಾಡಿದಾಗ ಗದ್ದೆಬಯಲಿನಲ್ಲಿ ಸುಂದರೇಶ್ವರ ವಿಗ್ರಹ ಸಿಕ್ಕಿತು ಎಂಬುದಾಗಿ ಪ್ರೊ. ನಾ. ದಯಾನಂದರ "ಬಂಗಾರದ ತೆನೆ" ಪುಸ್ತಕದಲ್ಲಿ ತಿಳಿಸಲಾಗಿದೆ.




## *ಮಿರ್ಲೆಯಲ್ಲಿ ಆಚಾರ್ಯ ಶ್ರೀರಾಮಾನುಜರು !*

ಹೌದು 900 ವರ್ಷಗಳ ಹಿಂದೆ ಕೆಲಕಾಲ ವಿಶಿಷ್ಟಾದ್ವೈತ ಸಿದ್ಧಾಂತಿ ರಾಮಾನುಜಾಚಾರ್ಯರು **ಮಿರ್ಲೆ**ಯಲ್ಲಿ ನೆಲಸಿ ನಂತರ ಸಾಲಿಗ್ರಾಮಕ್ಕೆ ತೆರಳಿದರು ಎಂಬುದು ಇತಿಹಾಸದಲ್ಲಿ ಧಾಖಲಾಗಿದೆ. ಹುಟ್ಟೂರು ತಮಿಳುನಾಡಿನ ಕಾಂಚೀಪುರದಿಂದ ಮಠಾಧಿಪತಿಯಾಗಿ ತಮ್ಮ 24ನೇ ವಯಸ್ಸಿನಲ್ಲಿ ಶ್ರೀರಂಗಕ್ಕೆ ಬಂದ ರಾಮಾನುಜರು ಶೈವ-ವೈಷ್ಣವ ಸಂಘರ್ಷದ ಉತ್ತುಂಗ ಕಾಲದಲ್ಲಿ ಶೈವಧರ್ಮದಲ್ಲಿ ನಂಬಿಕೆಯಿಟ್ಟಿದ್ದ ಚೋಳ ದೊರೆ ಕುಲೊತ್ತುಂಗ (ಕ್ರಿಮಿಕಂಠ)ನ ಕಿರುಕುಳ ಮತ್ತು ಬೆದರಿಕೆಯಿಂದ ಬೇಸತ್ತು ಮಾರು ವೇಷದಲ್ಲಿ ಮಠ ಮತ್ತು ರಾಜ್ಯವನ್ನು ತ್ಯಜಿಸಿ 1078ರಲ್ಲಿ ನೀಲಗಿರಿ ಮಾರ್ಗವಾಗಿ ಹೊಯ್ಸಳ ನಾಡಿಗೆ (ಅಂದರೆ ಕರ್ನಾಟಕಕ್ಕೆ) ಶಿಷ್ಯರೊಂದಿಗೆ ವಲಸೆ ಬಂದು, ಕಾವೇರಿ



ನದಿ ಮಾರ್ಗದಲ್ಲಿ ಸಂಚರಿಸಿ **ವಹ್ನಿಪುಷ್ಕರಿಣಿ** (ಇಂದಿನ **ರಾಮನಾಥಪುರ**) ಎಂಬಲ್ಲಿ ಕೆಲಕಾಲ ನೆಲೆಸಿ ನಂತರ ಅವರು **ಮಿರ್ಲೆ**ಗೆ ಬಂದರು. ಅಲ್ಲಿಂದ **ಸಾಲಿಗ್ರಾಮ**ವನ್ನು ಅವರ ಮುಂದಿನ ವಾಸಕ್ಕೆ ಆಯ್ಕೆ ಮಾಡಿಕೊಂಡು ಅಲ್ಲಿ ಉಗ್ರನರಸಿಂಹ ದೇವಸ್ಥಾನ ಮತ್ತು ಶ್ರೀಪಾದ ಕೊಳ ಸ್ಥಾಪಿಸಿದರು. ಇಲ್ಲಿ ಸಾಲಿಗ್ರಾಮ ಶ್ರೀವೈಷ್ಣವರಿಗೆ ಮೇಲುಕೋಟೆಯಷ್ಟೇ ಮುಖ್ಯವಾದುದು ಎನ್ನುವುದನ್ನು ಗಮನಿಸಬೇಕು. ಮಿರ್ಲೆಯಲ್ಲಿಯೂ ಸರಿಸುಮಾರು ಅದೇ ಕಾಲದಲ್ಲಿ

ಹೊಯ್ಸಳ ಶೈಲಿಯ ದೇವಸ್ಥಾನಗಳನ್ನು ಕಟ್ಟಲಾಗಿದೆಯಲ್ಲದೆ ಯೋಗಾನರಸಿಂಹ ದೇವಸ್ಥಾನವೂ ಇದೆ (ಚಿತ್ರ ನೋಡಿ). ರಾಮಾನುಜಾಚಾರ್ಯರು ಸಂಚರಿಸಿದ ಹಾದಿಯಲ್ಲಿ ಪುಷ್ಕರಣಿಗಳು ಮತ್ತು ಯೋಗಾನರಸಿಂಹ ದೇವಸ್ಥಾನಗಳು ಅಪಾರ!

ಆಚಾರ್ಯರು ಹೊಯ್ಸಳ ನಾಡಿನಲ್ಲಿ ಸಂಚಾರಮಾಡಿ ನಾಗಮಂಗಲ, ಶ್ರೀರಂಗಪಟ್ಟಣ, ದೊಡ್ಡಮಳ್ಳೂರು, ರಾಮನಾಥಪುರ, ಶಾಂತೀ ಗ್ರಾಮ, ಮಿರ್ಲೆ, ಸಾಲಿಗ್ರಾಮ, ತೊಂಡನೂರು, ಶ್ರೀರಂಗಪಟ್ಟಣ, ಚನ್ನಪಟ್ಟನ, ಬಿಂಡಿಗನವಿಲೆ, ಹೊನ್ನಾವರ, ಬೇಲೂರು, ನುಗ್ಗೇಹಳ್ಳಿ, ಮಳೂರು, ಗೊರೂರು, ಗದಗ ಇತ್ಯಾದಿ ಊರುಗಳಲ್ಲಿ ಶ್ರೀ ವೈಷ್ಣವ ಕೇಂದ್ರಗಳನ್ನು/ ಮಠಗಳನ್ನು ಸ್ಥಾಪಿಸಿ, ದೇವಸ್ಥಾನಗಳನ್ನು ನಿರ್ಮಿಸಲು ಆದೇಶಿಸಿ ಶ್ರೀವೈಷ್ಣವ ಮತ ಪ್ರಸಾರದಲ್ಲಿ ತೊಡಗಿದ್ದರು (ಅನುಬಂಧ ೧ ನೋಡಿ).

## ಹತ್ತೊಂಬತ್ತನೇ ಶತಮಾನದ ಮೈಸೂರು ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆಯಲ್ಲಿ ಮಿರ್ಲೆ ಪ್ರತಿನಿಧಿಗಳು

ಸುಮಾರು 50 ವರ್ಷಗಳ (1831-18881) ಬ್ರಿಟೀಷರ ನೇರ ಆಡಳಿತದ ನಂತರ ಮೈಸೂರು ಸಂಸ್ಥಾನದ ಅಧಿಕಾರವನ್ನು 18 ವರ್ಷ ತುಂಬಿದ ಚಾಮರಾಜ (ಚಾಮರಾಜೇಂದ್ರ) ಒಡೆಯರಿಗೆ ಮೈಸೂರಿನ ಮುಖ್ಯ ಕಮಿಷನರ್ ಆಗಿದ್ದ ಸರ್ ಜೇಮ್ಸ್ ಡಿ ಗೋರ್ಡ್ ನ್ ಅವರಿಂದ 25ನೇ ಮಾರ್ಚ್ 18881 ರಂದು ವಹಿಸಿಕೊಡಲಾಯಿತು. ಆ ಕೂಡಲೇ ಬಾಲ್ಯ ವಿವಾಹ ನಿಷೇದ, ಬಾಲೀಕಾ ಪಾಠಶಾಲೆ ಸ್ಥಾಪನೆ ಇತ್ಯಾದಿ ಹಲವಾರು ಜನಪ್ರಿಯ ಮತ್ತು ಪ್ರಗತಿಪರ ನಿರ್ಧಾರಗಳಲ್ಲದೆ ದಿವಾನ್ ರಂಗಾಚಾರ್ಲು ಅವರ ದೂರದೃಷ್ಟಿಯ ಪ್ರತೀಕವಾದ ಮತ್ತು ಮಹತ್ತರವಾದ ಸೀಮಿತ ಪ್ರಜಾಪ್ರಭುತ್ವದ "ಪ್ರಜಾಪ್ರತಿನಿಧಿ ಸಭೆ" ಆರಂಭಿಸುವ ನಿರ್ಣಯವನ್ನೂ (25 ಆಗಸ್ಟ್ 1881) ಮಾಡಿದ್ದರು. ಅಧಿಕಾರ ಹಸ್ತಾಂತರ ಷರತ್ತಿನಲ್ಲೇ ಇಂತಹ ಸಭೆ ಆರಂಭಿಸಬೇಕೆಂಬ ಶಿಪಾರಸ್ ಮಾಡಿದ್ದರೂ ಅಂದಿನ ಭಾರತ ಸರ್ಕಾರ ಅನುಮೋದಿಸದೆ ವೈಸರಾಯ್ ಅವರು ಅದನ್ನು ಪ್ರಿಮೆಚ್ಯೂರ್ ಎಂದ್ದಿದ್ದರು. ಕಮಿಶನರ್ ಗಾರ್ಡನರ್ ಅವರಿಗೆ ಕಾರ್ಯದರ್ಶಿಯಗಿದ್ದ ರಂಗಾಚಾರ್ಲು ಅವರು ಸಲಹೆ ನೀಡಿ

ಸೇರಿಸಿದ್ದರೂ ಇದು ಭಾರತೀಯರಿಗೆ ಅಸಾಧ್ಯವೆಂದು ಬ್ರಿಟೀಷರು ಶಿಪಾರಸನ್ನು ತಿರಸ್ಕರಿಸಿದ್ದರು. ಆದರೂ ಸದ್ದುಗದ್ದಲವಿಲ್ಲದೆ ಅದನ್ನೇ ದಿವಾನರು ಅರಸರ ಆಳ್ವಿಕೆಯಲ್ಲಿ ಸ್ವಯಂಪ್ರೇರಿತಾರಾಗಿ ಎಂಬಂತೆ ಆರಂಬಿಸಿದರು. ಒಡೆಯರಿಗೆ ಅಧಿಕಾರ ಹಸ್ತಾಂತರ ಗೊಂಡಾಗ ನಡೆಸಿದ ನವರಾತ್ರಿ ಉತ್ಸವಕ್ಕೆ ಸಂಸ್ಥಾನದ ಎಲ್ಲ ಭಾಗಗಳಿಂದ ಆಗಮಿಸಿದ್ದ ರಾಜಪ್ರಮುಖರುಗಳನ್ನು ಅನೌಪಚಾರಿಕವಾಗಿ ಮಿತ್ರಕೂಟಕ್ಕೆ ದಿವಾನ್ ಸಿ. ರಂಗಾಚಾರ್ಲು ಅವರು ಆಹ್ವಾನಿಸಿದ್ದ ಸಭೆ ಮೈಸೂರು ಪ್ರಜಾಪತಿನಿಧಿ ಸಭೆಗೆ ಬೀಜಾಂಕುರವಾಯಿತೆನ್ನಬಹುದು.


Illustrated London News ಪತ್ರಿಕೆಯ 1881ರ ಅರಮನೆ ಮುಂದಿನ ಸಭೆಯ ಚಿತ್ರ


Rangacharlu (1831-1883)


Chamarajendra Wadiyar (1863-1894)

ಪ್ರತೀ ವರ್ಷ ದಸರಾ ನಂತರ ನಡೆಯುವ ಈ ಸಭೆಯಲ್ಲಿ ಪ್ರತೀ ತಾಲ್ಲೂಕಿನಿಂದ ಒಬ್ಬರು ಅಥವ ಇಬ್ಬರು ಸಾಮಾನ್ಯ ಜ್ಞಾನ/ ತಿಳಿವಳಿಕೆಯುಳ್ಳ ಹಾಗೂ ತಾಲ್ಲೂಕಿನಲ್ಲಿ ಪ್ರಭಾವಶಾಲಿಗಳಾದ ಮತ್ತು ನಿರ್ಧಿಷ್ಟ ಆದಾಯ ಹಾಗೂ ಆಸ್ತಿ ಹೋಂದಿದ್ದ ಜಮಿನ್ದಾರರನ್ನು ಮತ್ತು ಪ್ರತೀ ಜಿಲ್ಲೆಯಿಂದ ಮುಂಚೂಣಿಯಲ್ಲಿದ್ದ ಮೂರ್ನಾಲ್ಕು ಮಂದಿ ವರ್ತಕರನ್ನೂ ಆಹ್ವಾನಿಸಿ ನಡೆಸುತ್ತಿದ್ದ ಈ ಸಭೆಯಲ್ಲಿ ಭಾಗವಹಿಸುವುದು ಸಂಪೂರ್ಣ ಸ್ವಯಂ ಪ್ರೇರಿತವಾಗಿತ್ತು. ಸದಸ್ಯರನ್ನು 1885ರ ವರೆವಿಗೆ ದಿವಾನರು ಹಾಗೂ ಜಿಲ್ಲಾಧಿಕಾರಿಗಳು ನಾಮನಿರ್ಧೇಶಿಸುತ್ತಿದ್ದು, ನಂತರ ಸ್ಥಳೀಯ ಮುನಿಪಲ್ ಬೋರ್ಡಗಳು ಆಯ್ಕೆಮಾಡುವಂತಾಯಿತು. ಮುಂದಿನ ವರ್ಷಗಳಲ್ಲಿ ಜನಸಂಖ್ಯೆ, ಉತ್ಪತ್ತಿ, ವಯಸ್ಸು ಮತ್ತಿತರ ಆಧಾರಗಳ ಮೇಲೆ ಸದಸ್ಯತ್ವವನ್ನು 3 ವರ್ಷಗಳವರೆವಿಗೂ ನೀಡಲಾಗಿತ್ತಲ್ಲದೆ 1940ರಲ್ಲಿ ಇಬ್ಬರು ಸದಸ್ಯರನ್ನು ಮಹಾರಾಜರ ಕೌನ್ಸಿಲ್ಲಿಗೂ ನಾಮ ನಿರ್ದೇಶನ ಮಾಡಲಾಯಿತು. ಹೀಗೆ 1881ರಲ್ಲಿ ಆರಂಭವಾದ ಪ್ರಜಾಪ್ರತಿನಿಧಿ ಸಭೆ 1949ರ ವರೆವಿಗೂ

ನಡೆಯಿತು ಮತ್ತು ಒಟ್ಟು ಸದಸ್ಯತ್ವ 351ರ ವರೆವಿಗೂ ಇರಬಹುದಾಗಿತ್ತು.

ಇಂತಹ ಪ್ರಜಾಪ್ರತಿನಿಧಿ ಸಭೆಗೆ 1881 ರಿಂದ 1949ರ ವರೆಗೆ ಆಯ್ಕೆಗೊಂಡವರಲ್ಲಿ **'ಮಿರ್ಲೆ ರಾಮೇಗೌಡ'** (1881) ಮತ್ತು **'ಮಿರ್ಲೆ ಸುಬ್ಬರಾವ್'** (1897) ಎಂಬ ಇಬ್ಬರು ಹೆಸರಿನಿಂದಲೇ ಮಿರ್ಲೆಯವರೆಂದು ಗುರುತಿಸಬಹುದಾದವರು ಇದ್ದರು .ರಾಷ್ಟ್ರದ ಮೊಟ್ಟಮೊದಲ ಪ್ರತಿನಿಧಿಸಭೆ 7ನೇ ಅಕ್ಟೋಬರ್ 1881ರಂದು ಸೇರಿತ್ತು. ಈ ಸಭೆಯಲ್ಲಿದ್ದ 144 ಸದಸ್ಯರಲ್ಲಿ **'ಮಿರ್ಲೆ ರಾಮೇಗೌಡ'**ರೂ ಒಬ್ಬರು (Illustrated London News ಪತ್ರಿಕೆಯ 1881ರ ಅರಮನೆ ಮುಂದಿನ ಸಭೆಯ ಚಿತ್ರ). **ಮಿರ್ಲೆ ರಾಮೇಗೌಡರು** ಯಾರು? ನಮ್ಮ ದೌರ್ಭಾಗ್ಯವೆಂದರೆ ಮೈಸೂರು ಪ್ರಾಂತ್ಯದ ಮೊದಲ *ಪ್ರಜಾಪ್ರತಿನಿಧಿ ಸಭೆಯಲ್ಲಿ ಭಾಗಿಯಾದ* ಪ್ರತಿಷ್ಟಿತ ವ್ಯಕ್ತಿ **'ಮಿರ್ಲೆ ರಾಮೇಗೌಡ'** ಎಂಬುವರ ಬಗೆಗೆ ಯಾವ ಮಾಹಿತಿಯಾಗಲೀ ಅಥವ ಮಿರ್ಲೆಯಲ್ಲಿ ಅವರ ಸಂತತಿ ಯಾರು ಎಂದಾಗಲೀ ತಿಳಿಯದಷ್ಟರ ಮಟ್ಟಿಗೆ ನಮ್ಮ ದಾಖಲಾತಿ ವ್ಯವಸ್ಥೆ ದುರ್ಭಲವಾಗಿದೆ.
ಮುಂದೆ 1897ರಲ್ಲಿ **'ಮಿರ್ಲೆ ಸುಬ್ಬರಾವ್'** ಎಂಬುವರು ಚುನಾಯಿತರಾಗಿ ಈ ಸಭೆಯನ್ನು ಪ್ರತಿನಿಧಿಸಿದರು. **ಮಿರ್ಲೆ ಸುಬ್ಬರಾವ್** ಬೆಂಗಳೂರಿನಲ್ಲಿ ಅಡ್ವೋಕೇಟ್ ಆಗಿದ್ದರು ಎಂದು ಕೇಳಿದ್ದೆ. ಎಪ್ಪತ್ತರ ದಶಕದಲ್ಲಿ ಜಯನಗರದ ಮನೆಯೊಂದರ ಮುಂದೆ **'ಮಿರ್ಲೆ ಸುಬ್ಬರಾವ್'** ಎಂಬ ನಾಮಫಲಕ ನೋಡಿದ ನೆನಪು. ಆದರೆ ಇಪ್ಪತ್ತನೇ ಶತಮಾನದಲ್ಲಿ ಇನ್ನೂ ಇಬ್ಬರು ಮಿರ್ಲೆ ಸುಬ್ಬರಾವ್ ಎಂಬ ಅಡ್ವೋಕೇಟ್ ರಗಳು ಇದ್ದಂತೆ ತೋರುತ್ತದೆಯಾಗಿ ಅವರ ಬಗೆಗೂ ನಿಖರವಾದ ಮಾಹಿತಿ ದೊರೆಯದಂತಾಗಿದೆ.

ಒಂದು ನ್ಯಾಲಯದ ಧಾಖಲೆಯಲ್ಲಿ Mirle Subba Rao. S/o. Late Mirle Srikantaiah ಎಂದು ಇರುವುದು ಕಂಡಿತು. ಅಲ್ಲದೆ Prof. A. V. Narasimha Murthy (Former Head, Department of Ancient History & Archaeology, University of Mysore) ಅವರು ಜುಲೈ 2009 ರಲ್ಲಿ Star of Mysore ಪತ್ರಿಕೆಯಲ್ಲಿ ಬರೆದ ಲೇಖನದಲ್ಲಿ "When I met Mirle Subba Rao on

October 18, 2009 in Bangalore (he was my father's classmate and a year younger to him at 86) he mentioned that [ಕೊಣನೂರು] Mylar Rao [ನರಸಿಂಹಮೂರ್ತಿ ಅವರ ತಂದೆ] had a slow speech. He had seen him during his boyhood". ಹಾಗೆಯೇ ಮಿರ್ಲೆಸುಬ್ಬರಾವ್ ಮೊಮ್ಮಗಳು ಡಾ.ಶುಭಶ್ರೀಪ್ರಸಾದ್ (ನಿರೂಪಕಿ ಮತ್ತು ಲೇಖಕಿ) ಮಂಡ್ಯದಲ್ಲಿದ್ದಾರೆ ಮತ್ತು ಸಿರಿ ಕನ್ನಡ ವೇದಿಕೆಯ ರಾಜ್ಯಾಧ್ಯಕ್ಷ ಬೆಂಗಳೂರಿನ ಶ್ರಿ ವೆಂಕಟರಮಣಶ್ರೀ ಅವರು ಇವರ ಮಗ ಇರಬಹುದು ಎಂದು ಮಿರ್ಲೆ ಪೀಪಲ್ ಗ್ರೂಪಿನ ಸದಸ್ಯರೊಬ್ಬರು ತಿಳಿಸಿದ್ದಾರೆ.

-----------------------------------------------------------------

**ಪ್ರತಿಕ್ರಿಯೆ:**

**ಚಂದ್ರಶೇಕರ್ (?):** ಆಶ್ಚರ್ಯಕರವಾದ ಮಾಹಿತಿಗಳು ಸಾರ್, ಮಿರ್ಲೆಸುಬ್ಬರಾವ್ ಮೊಮ್ಮಗಳು ಡಾ.ಶುಭಶ್ರೀಪ್ರಸಾದ್, ನಿರೂಪಕಿ ಮತ್ತು ಲೇಖಕಿ ಮಂಡ್ಯದಲ್ಲಿದ್ದಾರೆ ಹಾಗೂ ಅವರ ಮಕ್ಕಳಿರಬಹುದು ಮಿರ್ಲೆ ವೆಂಕಟರಮಣಶ್ರೀ ಬೆಂಗಳೂರು ನಲ್ಲಿದ್ದಾರೆ, ಇವರು ಸಿರಿ ಕನ್ನಡ ವೇದಿಕೆಯ ರಾಜ್ಯಾಧ್ಯಕ್ಷರು. ಅವರನ್ನು ಬೇಟಿ ಮಾಡಿದರೆ ನಿಮಗೆ ಮತ್ತಷ್ಟು ಮಾಹಿತಿ ದೊರಕಬಹುದು.

-----------------------------------------------------------------

## *ಎಡತೊರೆ ತಾಲ್ಲೂಕಿಗೆ ಮರಾಠಿಗರು ಬಂದದ್ದು ಹೇಗೆ ? ಗಂಧನಹಳ್ಳಿಗೂ ಮರಾಠರಿಗೂ ಏನು ಸಂಬಂಧ?*

ಬಹಳ ಹಿಂದೆ, ಇಪ್ಪತ್ತನೇ ಶತಮಾನದ ಮೊದಲ ಭಾಗದಲ್ಲಿ, ಮಿರ್ಲೆಯಲ್ಲಿ ನಿಂಗೋಜಿರಾವ್ ಎಂಬ ಮೂಲ ಮರಾಠಿಗರೊಬ್ಬರಿದ್ದರು ಎಂದು ಕೇಳಿದ್ದೆ. ಅವರ ಮುಂದಿನ ಪೀಳಿಗೆಯವರು ಈಗಲೂ ಇದ್ದಿರಬೇಕು. ಸರ್ಕಾರಿ ಪ್ರೌಢಶಾಲೆಯಲ್ಲಿ 1960-63ರಲ್ಲಿ **ಬೈರೋಜಿರಾವ್** ಎಂಬ ಗಂಧನಹಳ್ಳಿಯ ಮರಾಠಿ ಸಹಪಾಟಿಯಿದ್ದ. ತಾತ ಮುತ್ತಾತನ ಕಾಲದಿಂದಲೂ ಅವರು ಅಲ್ಲಿಯೇ ಇದ್ದರೆಂಬುದೊಂದು ಕೌತುಕದ ವಿಷಯ. ಮರಾಠಿಗರು ಮೂಲತಃ ಮಹಾರಾಷ್ಟ ಕಡೆಯಿಂದ (ತಂದೆ-ಮಗ) ಷಹಾಜಿ-ಶಿವಾಜಿ ಕಾಲದಲ್ಲಿ ಈ ಭಾಗಕ್ಕೆ ವಲಸೆ ಬಂದವರು ಎಂದು ಗೆಜೆಟಿಯರ್ ನಲ್ಲಿ ಹೇಳಲಾಗಿದೆ. ಮೈಸುರು ಸಂಸ್ಥಾನ ಮತ್ತು ಮರಾಠರು ಬೆಕ್ಕು-

ಇಲಿಗಳಂತೆ  ಸದಾ ಪರಸ್ಪರ ಯುದ್ದದಲ್ಲಿ ತೊಡಗಿದ್ದರು ಎಂದು ಚರಿತ್ರೆಯಲ್ಲಿದೆ. ಬಿಜಾಪುರದ ಆದಿಲ್ ಷಾ 1639 ರಲ್ಲಿ ಬೆಂಗಳೂರು ಪ್ರದೇಶವನ್ನು ವಿಜಯನಗರ ಅರಸರಿಂದ ಪಡೆದ ಮೇಲೆ ಅದರ ಉಸ್ತುವಾರಿಯನ್ನು ಸೈನ್ಯಧಿಕಾರಿ ಷಹಾಜಿಗೆ ವಹಿಸಿದ. ಅಲ್ಲದೆ 1677 ರಲ್ಲಿ ತಂಜಾವೂರು ಯುದ್ಧದಲ್ಲಿ ಗೆದ್ದ ಶಿವಾಜಿಯು ಹಲವಾರು ಮೈಸೂರು ಸಂಸ್ಥಾನದ ಪ್ರದೇಶಗಳನ್ನು ಪಡೆದ. ಮೈಸೂರು ಸಂಸ್ಥಾನದ ಸೈನ್ಯದಲ್ಲಿದ್ದವರಲ್ಲಿ ಮರಾಠರು ಮತ್ತು ಮುಸ್ಲಿಮರು ಅತ್ಯಧಿಕ ಸಂಖ್ಯೆಯಲ್ಲಿದ್ದರು. ಇದು ಸಂಕ್ಷಿಪ್ತ ಹಿನ್ನೆಲೆ.

ಹದಿನೆಂಟನೇ ಶತಮಾನದ ಹೈದರ್-ಟಿಪ್ಪೂ ಕಾಲದಲ್ಲಿ ಅಥವ 19ನೇ ಶತಮಾನದ ಆದಿಯಲ್ಲಿ ಮರಾಠಿ ಸೈನಿಕ/ ಪೌಜುದಾರನೊಬ್ಬನಿಗೆ ಗಂಧನಹಳ್ಳಿ ಜಾಗೀರ್ ಆಗಿ ದೊರೆಯಿತೆಂದು ಕೇಳಿದ/ ಓದಿದ ನೆನಪು. ದಾಖಲೆ ಸಿಗುತ್ತಿಲ್ಲ. ಅದೇನೆ ಇರಲಿ, 19ನೇ ಶತಮಾನದ ಅಂತ್ಯ ಮತ್ತು ೨೦ನೇ ಶತಮಾನದ ಆದಿಯಲ್ಲಿ ತಾಲ್ಲೂಕಿಗೇ ಬಹಳ ಮಾನ್ಯರಾದ ನಂಬರ್ ಒನ್ ಕುಳ ಸಾವಿರಾರು ಖಂಡಿಗ ಭತ್ತ ಬೆಳೆವ ನೂರಾರು ಎಕರೆ ನಾಲಾ ಕೆಳಗಿನ ಜಮೀನು ಹೊಂದಿದ್ದ ಶಿವೋಜಿರಾಯ (ಮತ್ತು ಅವರ ಮಗ ದೇವೋಜಿರಾಯ) ಎಂಬ ಮರಾಠಿ ಜಮೀನ್ದಾರರಿದ್ದರು ಎಂದು ತಿಳಿಯುತ್ತದೆ. ಇವರ ಪೂರ್ವಿಕರು British Field Marshall Bernard Law Montgomery  (ವಿಶ್ವ ಮಹಾಯುದ್ಧಗಳಲ್ಲಿ ಭಾಗಿಯಾದ ವರ್ಣರಂಜಿತ ಮಹಾ ಧಂಡನಾಯಕ)  ಎಂಬ ಬ್ರಿಟೀಷ ಅಧಿಕಾರಿಯ ಬಳಿ ಮುಂಬಯಿಯಲ್ಲಿ ಸರದಾರನಾಗಿ ಕೆಲಸ ಮಾಡುತ್ತಿದ್ದು, Montgomery ಮೈಸೂರಿಗೆ ದೊಡ್ಡ ಪದವಿಗೆ ಬಂದಾಗ ಆ ಮರಾಠಿ ಸರದಾರನ ದಕ್ಷತೆ ಮತ್ತು ನಿಯತ್ತನ್ನು ಗಮನಿಸಿ ಅವನಿಗೆ ಕೇಳಿದ ಕಡೆ ಕೇಳಿದಷ್ಟು ಜಮೀನು ಕೊಟ್ಟು ಕರೆತಂದ ಎಂಬುದಾಗಿ ನ. ರಾಮರವ್ ಅವರು ಹೇಳುತ್ತಾರೆ.

ಮತ್ತೊಂದು ಮೂಲದ ಪ್ರಕಾರ ಗಂಧನಹಳ್ಳಿ ಮೈಸುರು ಸೈನ್ಯದಲ್ಲಿ ಕುದುರೆ ಫೌಜಿನ ನಾಯಕರಾಗಿದ್ದು ಮಹಿದ್ ಪುರ ಲಡಾಯಿನಲ್ಲಿ ಶೌರ್ಯದಿಂದ ಕಾದಾಡಿದ ಒಬ್ಬ ದೇಶಸ್ಥ ಬ್ರಾಹ್ಮಣ ಸರದಾರನಿಗೆ ರಕ್ತಕೊಡಿಗೆಗಾಗಿ ಕೊಟ್ಟದ್ದು. ಆ ಜಹಗೀರಿನವರು

ಕಾರಣಾಂತರದಿಂದ ಬಡತನಕ್ಕೆ ಬಂದು, ಜಹಗೀರಿನ ಆಧಾರದ ಮೇಲೆ ಭಾರಿ ಸಾಲಗಳನ್ನು ಮಾಡಿ, ಆ ಸಾಲಗಳಿಗಾಗಿ ಜಹಗೀರನ್ನೇ ಕಳೆದುಕೊಳ್ಳುವ ಅವಸ್ಥೆಗೆ ಬಂದಿದ್ದರು ಎಂದು ತಿಳಿಸಲಾಗಿದೆ. ರೆವಿನ್ಯೂ ಕೌನ್ಸಿಲರ್ ಮಾಧವರಾಯರು ಜಹಗೀರುದಾರರ ಮಗ ಕೃಷ್ಣದೇವರಾಯ ಎಂಬುವರ ಬೇಡಿಕೆಯ ಮೇರೆಗೆ (ಜಹಗೀರು ರಕ್ತ ಹೀರುವ ಚುಂಗಡಿ ಸಾಹುಕಾರರ ಪಾಲಾಗದಂತೆ) ಸರ್ಕಾರದಿಂದ ಸಾಲಗಳನ್ನೆಲ್ಲಾ ತೀರಿಸಿ, ಕೆಲವು ಭಾಗಗಳನ್ನು ಅವರಿಗೇ ಬಿಟ್ಟು, ಮಿಕ್ಕವುಗಳನ್ನು ಸಾಲ ತೀರುವವರೆವಿಗೆ ಸರ್ಕಾರದ ವಶಕ್ಕೆತೆಗೆದು ಕೊಳ್ಳುವ ಏರ್ಪಾಟು ಮಾಡಿದರು. ನಂತರ ಕೃಷ್ಣರಾಯರು ಜಹಗೀರು ಗ್ರಾಮಗಳಲ್ಲೊಂದಾದ **ದಗ್ಗಹಾಳು** ಎಂಬಲ್ಲಿ ವಾಸವಾಗಿದ್ದರು ಎನ್ನಲಾಗಿದೆ.
ಎಲ್ಲವೂ ಅಷ್ಟೇನು ಖಚಿತ/ಸ್ಪಷ್ಟವಾದಂತಿಲ್ಲ ಅಲ್ಲವೆ? ನಾನು ಸಂಗ್ರಹಿಸಿದ್ದು ಮತ್ತು ನನ್ನ ನೆನಪಿನಲ್ಲಿದ್ದುದ್ದನ್ನು ಹಂಚಿಕೊಳ್ಳುವ ಪ್ರಯತ್ನ ಮಾಡಿದ್ದೇನೆ. ಹೆಚ್ಚಿನ ಶೋಧನೆಯ ಅವಶ್ಯಕತೆ ಇದೆ.

## ಸ್ವಾತಂತ್ರ್ಯ ಹೋರಾಟ ಮತ್ತು ಕರ್ನಾಟಕ ಏಕೀಕರಣ ಚಳವಳಿಗಳಲ್ಲಿ ಮಿರ್ಲೆಯವರು ಭಾಗಿಯಾಗಿದ್ದರೆ?

ಸ್ವಾತಂತ್ರ್ಯ ಬಂದನಂತರ ಮಿರ್ಲೆಯ ರಸ್ತೆಗಳಿಗೆ ರಾಷ್ಟ್ರನಾಯಕರುಗಳ ಹೆಸರಿಸಿ ನಾಮಫಲಕಗಳನ್ನು ಹಾಕಿಸಿ ದೇಶಾಭಿಮಾನವನ್ನು ಅಂದಿನ ಮಿರ್ಲೆಯ ನಾಯಕರುಗಳು ಮೆರೆದರಾದರೂ ಸ್ವಾತಂತ್ರ್ಯ ಹೋರಾಟ ಮತ್ತು ಕರ್ನಾಟಕ ಏಕೀಕರಣ ಚಳುವಳಿಗಳಲ್ಲಿ ಸಕ್ರಿಯ ಭಾಗಿಗಳಾದ ಮಿರ್ಲೆಯವರಿದ್ದಂತೆ ತೋರುವುದಿಲ್ಲ. ಉತ್ತರ ಕರ್ನಾಟಕದಲ್ಲಿನಷ್ಟು ಹೋರಾಟ ಮತ್ತು ಚಳುವಳಿ ಹಳೇ ಮೈಸೂರು ಪ್ರಾಂತ್ಯದಲ್ಲಿ ನಡೆಯಲಿಲ್ಲವಾದರೂ, ಮಹಾತ್ಮ ಗಾಂಧಿಯವರು ಮೊದಲಬಾರಿಗೆ ಮೈಸೂರು ಪ್ರವಾಸವನ್ನು 1920-21ರಲ್ಲಿ ಕೈಗೊಂಡರು. ಇದೇ ಸಮಯದಲ್ಲಿ ತುಮಕೂರು, ಮಧುಗಿರಿ,



ಹಾಸನ, ದಾವನಗೆರೆ, ಶಿವಮೊಗ್ಗ, ಹರಿಹರ, ಸಾಗರ, ತೀರ್ಥಹಳ್ಳಿ, ಬಧ್ರಾವತಿ, ಚಿಕ್ಕಮಗಳೂರು, ಬೇಲೂರು, ಅರಸೀಕೆರೆ, ತಿಪಟುರುಗಳಿಗೂ ಭೇಠಿ ನೀಡಿದ್ದರು. ಮತ್ತೆ ಖಾದಿ ಪ್ರಚಾರಕ್ಕಾಗಿ 1927ರಲ್ಲಿ ಬೆಂಗಳೂರು ಮತ್ತು ಮೈಸೂರಿಗೆ ಬಂದಿದ್ದರು. ಮುಖ್ಯವಾಗಿ, ಮಹಾತ್ಮ ಗಾಂಧಿಯವರು 1927ರ ಜುಲೈ 23ರಂದು ಕೆ. ಆರ್. ನಗರಕ್ಕೆ ಭೇಠಿ ನೀಡಿದ್ದರು (ಅನುಬಂಧ ೫: ಮೈಸೂರು ಸಂಸ್ಥಾನಕ್ಕೆ (1927 ರಲ್ಲಿ) ಮಹಾತ್ಮ ಗಾಂಧಿಯವರ ಭೇಟಿ ಮತ್ತು ಸಭೆ ನಡೆಸಿದ ಪಟ್ಟಿ). ಈ ಸಂದರ್ಭಗಳಲ್ಲಿ ಪ್ರತ್ಯಕ್ಷದರ್ಶಿಗಳಾದ ಯಾರಾದರೂ ಮಿರ್ಲೆಯವರಿದ್ದರೆ ಎಂಬುದು ತಿಳಿಯದು. ಆದರೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡವರಲ್ಲಿ ತಾಲ್ಲೋಕಿನ ಶ್ರೀ ಕೆ. ಆರ್. ನೀಲಕಂಠಯ್ಯ (1919- ) ಒಬ್ಬರನ್ನು ಮಾತ್ರ ಗುರುತಿಸಲಾಗಿದೆ (ಸೂರ್ಯನಾಥ ಕಾಮತ್ , ಸಂ., 1980, ಪು. 806). ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿ ೨ ಬಾರಿ ಸೆರೆವಾಸ ಅನುಭವಿಸಿದ ಇವರು ಹೇಳಿದಂತೆ ಅವರ ಹೋರಾಟದಲ್ಲಿ ಸ್ಥಳೀಯ ನಾಯಕರಾರೂ ಇರಲಿಲ್ಲವಾಗಿ ಇವರು ಗೆಳೆಯರೊಂದಿಗೆ ಹೋರಾಟ ನಡೆಸಿದ್ದರು ಎಂದು ತಿಳಿಯುತ್ತದೆ. ಇವರು ಸೂಚಿಸಿದ ಇತರ ಹೆಸರುಗಳು: ವೈ. ಎಸ್. ರಾಮಚಂದ್ರರಾವ್, ವೈ. ಎಸ್. ಮೋಟಪ್ಪ, ಬಿ. ವೈ. ಸಿದ್ದೋಜಿರಾವ್ ಮತ್ತು ಯೆಸ್. ಕೆ. ವೆಂಕಟಸುಬ್ಬಯ್ಯ (ಸಾಲಿಗ್ರಾಮ). ಈ ಮಹನೀಯರುಗಳ ಹಿನ್ನೆಲೆ ತಿಳಿಯದು. ಸ್ವಾತಂತ್ರ್ಯ ಹೋರಾಟಗಾರರಿಗೆ ಸಾಮಾನ್ಯವಾಗಿ ತಾಮ್ರ ಪತ್ರ ಮತ್ತು ಪಿಂಚಣಿ ನೀಡುತ್ತಿದ್ದುದ್ದರಿಂದ ಗುರುತಿಸಲು ಸುಲಭವಾಗಬಹುದೇನೊ. ಶ್ರೀ ಲಕ್ಕಯ್ಯ ಎಂಬುವರು 2005 ರಲ್ಲಿ ಸ್ವಾತಂತ್ರ್ಯ ಹೋರಾಟಗಾರ ಪ್ರಶಸ್ತಿ ಪಡೆದರು. ಇವರು ಕೆ. ಆರ್. ನಗರ ತಾಲ್ಲೂಕಿನವರು ಎಂದು ಗುರುತಿಸಿದ್ದಾರೆಯಾದರೂ ಮಿರ್ಲೆಯವರು ಎಂದು ಧೃಡೀಕರಿಸುವ ಹೆಚ್ಚಿನ ಮಾಹಿತಿ ಇಲ್ಲ!

ಅಂತೆಯೇ ಸ್ವಾತಂತ್ರ್ಯ ಹೋರಾಟಗಾರ ಹೊಳೆನರಸೀಪುರದ ಶ್ರೀ ಹೆಚ್. ವಿ. ವೆಂಕಟರಮಣಯ್ಯ ಅವರ ತಂದೆ ವೆಂಕಣ್ಣಯ್ಯನವರು ಮಿರ್ಲೆಯವರು. ಅವರ ಮಿರ್ಲೆಯ ಸಂಭಂದದ ಬಗೆಗಿನ ಹೆಚ್ಚಿನ ಮಾಹಿತಿ ಅಪೇಕ್ಷಣೀಯ. ಸ್ವಾತಂತ್ರ್ಯ ಚಳುವಳಿಯಲ್ಲಿ ತೊಡಗಿಸಿಕೊಂಡ ವಿಧ್ಯಾರ್ಥಿಗಳ ಪೈಕಿ ತಾಲ್ಲೂಕಿನ ಕೋಳೂರು, ಹಳೆಯೂರು,

ದೊಡ್ಡಕೊಪ್ಪಲು, ಸಾಲಿಗ್ರಾಮ, ಮೂಡಲ ಬೀಡು, ಇತ್ಯಾದಿ ಗ್ರಾಮದವರ ಹೆಸರುಗಳಿವೆ. ಈ ಕೆಳಗಿನ 'ಮೈಸೂರು ಸ್ವಾತಂತ್ರ್ಯ ಹೋರಾಟಗರರ ಸಂಘ'ದ ತಾಣದಲ್ಲಿ ಮೈಸೂರು ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರ ಫೋಟೊಗಳಿವೆ. ಅಲ್ಲಿ ಮಿರ್ಲೆ ಯವರನ್ನು ಗುರುತಿಸಲು ಸಾದ್ಯವೆ ಪ್ರಯತ್ನಿಸಬೇಕು.

https://www.google.com/search?q=freedom+fighters+in+Mysore+district&tbm=isch&source=univ&sa=X&ved=2ahUKEwis2czppKDiAhWM73MBHSnwAlkQsAR6BAgJEAE&biw=1280&bih=579

ಸ್ವಾತಂತ್ರ್ಯ ಬಂದ 15 ದಿನಗಳಲ್ಲಿ, ಅಂದರೆ 1ನೇ ಸೆಪ್ಟೆಂಬರ್ 1947 ರಂದು ನಡೆದ 'ಮೈಸೂರು ಚಲೋ' ಚಳವಳಿಯ ನೆನಪಿನ ವಾರ್ಷಿಕೋತ್ಸವವನ್ನು ಈ ಸಂಘ ಏರ್ಪಡಿಸುತ್ತಿದೆ. ರಾಜರ ಆಡಳಿತ ಕೊನೆಗಾಣಿಸಿ ಪ್ರಜಾಪ್ರಭುತ್ವ ನೆಲೆಗೊಳಿಸಲು ಈ ಚಳವಳಿ ಅಂದಿನ ದಿವಾನ್ ಆರ್ಕಾಟ್ ರಾಮಸ್ವಾಮಿಯವರ ವಿರೋಧಕ್ಕೆ ಪ್ರತಿರೋಧಿಸಿ ನಡೆಯಿತಲ್ಲದೆ ವಿಧ್ಯಾರ್ಥಿ ರಾಮುಸ್ವಾಮಿ ಎಂಬುವರು ಗುಂಡಿಗೆ ಬಲಿಯಾದರು. ಮುಂದೆ ಆತನ ಹೆಸರನ್ನು ನೂರಡಿ ರಸ್ತೆಯ ತುದಿಯ ಸರ್ಕಲ್ ಗೆ ಇಡಲಾಯಿತು. ಈ ಚಳುವಳಿಯಲ್ಲಿ ಯಾರಾದರೂ ಮಿರ್ಲೆಯವರಿದ್ದರೆ ತಿಳಿಯದು. ಒಟ್ಟಿನಲ್ಲಿ, ಸ್ವಾತಂತ್ರ್ಯ ಸಂಗ್ರಾಮದ ಯಾವುದೇ ಹಂತದಲ್ಲಿ ಮಿರ್ಲೆಯವರಿಲ್ಲ ಎನ್ನುವುದು ಆಶ್ಚರ್ಯ!. ಅಲ್ಲದೆ ಕರ್ನಾಟಕ ಏಕೀಕರಣ ಚಳುವಳಿಯ ಬಿಸಿ ಮೈಸೂರು ಪ್ರಾಂತ್ಯದಲ್ಲಿ ಕಡಿಮೆ ಇದ್ದದ್ದರಿಂದಲೋ ಏನೊ ಮಿರ್ಲೆಯವರಿಗೆ ಇದು ತಾಗಿದಂತೆಯೇ ಇಲ್ಲ!

## ಮಿರ್ಲೆಯಲ್ಲಿ ಗಾಂಧಿ ಆಶ್ರಮ ಪ್ರಭಾವಿತ ಕಸ್ತುರ್ ಬಾ ಮಹಿಳಾ ಶಿಭಿರ ಮತ್ತು ಮಹಿಳಾ ಸಮಾಜ




ಸ್ವತಂತ್ರ್ಯ ಪೂರ್ವದಿಂದಲೇ ಗಾಂಧಿ ಆಶ್ರಮ ಮಾದರಿಯ ಮಹಿಳಾ ಶಿಬಿರವೊಂದು ಮಿರ್ಲೆಯಲ್ಲಿ ಹಿರಿಯಣ್ಣನ ಗುಡಿ ಎದುರಿಗಿನ ಮನೆಯಲ್ಲಿತ್ತು. ಇದನ್ನು ಹೊರಗಿನಿಂದ ಊರಿಗೆ ಬಂದವರೊಬ್ಬರು

(ಶ್ರೀಮತಿ ಸುಂದರಮ್ಮ) ನಡೆಸುತ್ತಿದ್ದು ಸುಮಾರು 50ರ ದಶಕದ ಮಧ್ಯದಲ್ಲಿ ನಿಂತುಹೋಯಿತು. ಬಹಳಕಾಲ ಆ ಮನೆ ಪಾಳು ಬಿದ್ದಿತ್ತು. ಮುಂದೆ 60ರ ದಶಕದಲ್ಲಿ (1962-63) ಅಧುನಿಕ ರೀತಿಯ ಮಹಿಳಾ ಸಮಾಜ ಮತ್ತು ಶಿಶುವಿಹಾರಗಳನ್ನು ಚನ್ನಿಗರಾಯ ಮತ್ತು ಹನುಮಂತರಾರಾಯ ದೇವಸ್ಥಾನಗಳ ಕಾಂಪೌಂಡಿನಲ್ಲೇ ಆರಂಭಿಸಲಾಯಿತು. ಮಹಿಳಾ ಶಿಬಿರ ಸ್ವತಂತ್ರ್ಯ ಪೂರ್ವದ ಒಂದು ವಿಶೇಷ ಗಾಂಧೀ ಮಾರ್ಗದ ಸಂಘಟನೆಯಾದರೆ ಮಹಿಳಾ ಸಮಾಜ ಒಂದು ಆಧುನಿಕ ಸಂಘ. ಮಹಿಳಾ ಸಮಾಜ ಒಂದು ಶಿಶುವಿಹಾರವನ್ನು ಆರಂಭಿಸಿತು ಮತ್ತು ಅದಕ್ಕೆ ಒಂದು ಕಟ್ಟಡವನ್ನು ಆಸ್ಪತ್ರೆ ಕಟ್ಟಡ ಕಟ್ಟಿಸಿಕೊಟ್ಟ ಸಾಹುಕಾರ್ ಕೋಟೇಗೌಡರೇ ಹನುಮಂತರಾಯನ ಗುಡಿ ಆವರಣದಲ್ಲಿ ಕಟ್ಟಿಸಿಕೊಟ್ಟರು. ಅದಕ್ಕೆ ಮುಂಚೆ ಶಿಶುವಿಹಾರ ಚಾವಡಿ ಹತ್ತಿರದ ಒಂದು ಕಟ್ಟಡದಲ್ಲಿ ನಡೆಯುತ್ತಿತ್ತು. ಫೇಸ್ ಬುಕ್ ನ ಮಿರ್ಲೆ ಪೀಪಲ್ ಗ್ರೂಪ್ ಗೆಳೆಯರು (ಶ್ರೀ ಪ್ರಶಾಂತ?) upload ಮಾಡಿರುವ 1969ನೇ ಇಸವಿಯ ಶ್ರೀ ಶಾರದಾಂಬ ಮಹಿಳಾ ಸಮಾಜದ ಸದಸ್ಯರುಗಳ ಫೊಟೊ ನೋಡಿ. ಈ ಶಿಭಿರದ ಬಗ್ಗೆ ಶ್ರೀ ಕಾಂತರಾಜು ಮಿರ್ಲೆ ಅವರು ಪ್ರತಿಕ್ರಿಯೆ ರೂಪದಲ್ಲಿ ತಿಳಿಸಿದ್ದನ್ನು ಅವರ ಪದಗಳಲ್ಲೇ ಓದಿ:

"*ಹೆಣ್ಣು ಮಕ್ಕಳಿಗಾಗಿ ' ಶಿಬಿರ '* ಎಂಬುದೊಂದು ಮಿರ್ಲೆಯಲ್ಲಿತ್ತು . ಹಿರಿಯಣ್ಣನ ಗುಡಿ ಮುಂಭಾಗದ ಜಾಗದಲ್ಲಿ ಮಣ್ಣಿನ ಗೋಡೆಯ, ನಾಡ ಹೆಂಚಿನ ಮನೆಯಲ್ಲಿ ಸುಂದರಮ್ಮ ಎಂಬುವವರೊಬ್ಬರು ಶಿಬಿರ ನಡೆಸುತ್ತಿದ್ದರು . ವಯಸ್ಸಾದ ಹೆಂಗಸರೊಬ್ಬರೂ (ಸುಂದರಮ್ಮನವರ ತಾಯಿ ಇರಬಹುದು ) ಇದ್ದರು. ಶಿಬಿರದ ಮುಂದೆ ರೈಲು ಕಂಬಿಗಳಿಂದ ಚಪ್ಪರ , ಚಪ್ಪರದ ಮೇಲಕ್ಕೆ ಹಬ್ಬಿದ ಹೂಬಳ್ಳಿಗಳು ,ಕೆಳಗೆ ನೆರಳು . ಎಲ್ಲವೂ ಸುಂದರ ಮತ್ತು ಹಿತಕರ ವಾತಾವರಣ . ಒಳಗೆ ಒಂದು ದೊಡ್ಡ ಹಾಲ್ ಇತ್ತು . ಪ್ರೈಮರಿ /ಮಿಡಲ್ ಸ್ಕೂಲ್ ನಲ್ಲಿ ಓದುತ್ತಿದ್ದ ಅನೇಕ ಹೆಣ್ಣು ಮಕ್ಕಳು ಬೆಳಿಗ್ಗೆ / ಸಾಯಂಕಾಲ ( ರಜ ದಿನಗಳಲ್ಲಿ ಹೆಚ್ಚು ಕಾಲ ) ಶಿಬಿರದಲ್ಲಿ ಸೇರಿ ಸ್ಕಿಪ್ಪಿಂಗ್,ಕೋಲಾಟ ಮುಂತಾದ ಅನೇಕ ಬಗೆಯ ಆಟಗಳನ್ನಾಡುತ್ತಿದ್ದರು. ಹಾಡುಗಳನ್ನು , ನೃತ್ಯಗಳನ್ನು ಕಲಿತು , ಹಾಡಿ, ನರ್ತಿಸಿ ಹರ್ಷ ಚಿತ್ತದಿಂದಿರುತ್ತಿದ್ದರು. ಹಿರಿಯಣ್ಣನ ಗುಡಿ ಪಕ್ಕದಲ್ಲಿ, ಅಂದರೆ ಶಿಬಿರದ ಮುಂದೆ ಧ್ವಜಸ್ಥಂಭವೊಂದಿತ್ತು. ಸ್ವಾತಂತ್ರ್ಯೋತ್ಸವದಂತಹ ರಾಷ್ಟ್ರೀಯ ಹಬ್ಬದ ದಿನಗಳಲ್ಲಿ ಧ್ವಜಾರೋಹಣ ಮಾಡುತ್ತಿದ್ದರು . 1950 ರ ದಶಕದಲ್ಲಿ ನಾನು ಕಂಡ ಆ ಶಿಬಿರ ಈಗಿಲ್ಲ. ಆ

ಶಿಬಿರವಿದ್ದ ಜಾಗ ಪ. ಲ. ತಮ್ಮಪ್ಪನವರ ಸ್ವತ್ತು ಎಂದು ಕೇಳಿದ ನೆನಪು. ಆ ಶಿಬಿರದ ಆರಂಭ, ಅಂತ್ಯಗಳ ಬಗ್ಗೆ ನನ್ನ ಬಳಿ ಮಾಹಿತಿ ಇಲ್ಲ . ಸುಂದರಮ್ಮನವರ ಸೇವೆ ಶ್ಲಾಘನೀಯ . ಸರ್ಕಾರದಿಂದ ಏನಾದರೂ ಅನುದಾನವಿತ್ತೋ ಏನೋ ಗೊತ್ತಿಲ್ಲ. ಹೆಣ್ಣುಮಕ್ಕಳ ಲವಲವಿಕೆಯ ಬದುಕಿಗಾಗಿ ಸಾಂಸ್ಕೃತಿಕ ಬೆಳವಣಿಗೆಗಾಗಿ ಮಿರ್ಲೆಗೆ ಅಂತಹ ಶಿಬಿರದ ಅಗತ್ಯವಿದೆ ಎನಿಸುತ್ತಿದೆ . ಹೀಗೆ ಹೇಳುವಾಗ, ಮಿರ್ಲೆಯಲ್ಲಿ ಯುವಕರಿಗಾಗಿ ಇದ್ದ ಗರಡಿ ಮನೆಗಳೂ ಮಾಯವಾಗಿರುವಂತೆ ಕಾಣುತ್ತಿದ್ದು ,ಅದು ಚರ್ಚೆಗೊಳಪಡಿಸಬಹುದಾದ ಮತ್ತೊಂದು ಅಂಶ ಎನ್ನಿಸುತ್ತದೆ."

## ಭೂಸುಧಾರಣೆ:

ಭೂಸುಧಾರಣೆ ಕಾಯ್ದೆ 1965ರಲ್ಲೇ ಜಾರಿಗೆ ಬಂದು ಮುಂದೆ ಆರನೇ ತಿದ್ದುಪಡಿ 1974ರಲ್ಲಿ "ಉಳುವವನಿಗೇ ಭೂಮಿ" ಎಂಬ ಘೋಷಣೆಯೊಂದಿಗೆ ಭೂನ್ಯಾಯ ಮಂಡಳಿಗಳನ್ನು ಸ್ಥಾಪಿಸಿ ಭೂಸುಧಾರಣೆ ಚಾಲ್ತಿಗೆ ಬಂದು ಬಹುತೇಕ ಗುತ್ತಿಗೆ ಭೂಒಡೆತನ ಗೇಣೀದಾರರ ಪಾಲಾಯ್ತು .ತಾಲ್ಲೂಕಿನ ಇತರ ಕಡೆಗಳಂತೆ ಮಿರ್ಲೆಯಲ್ಲಿಯೂ ಸಣ್ಣ ಭೂಹಿಡುವಳಿದಾರರು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿದ್ದು ಇದರ ಪ್ರಯೋಜನ ಪಡೆದರು.

## *ಇತಿಹಾಸದಲ್ಲಿ ಸಾಮಾಜಿಕ ನ್ಯಾಯವಿಲ್ಲದ ಸ್ವೇಚ್ಛೆಯ ಸಂಪತ್ತಿನ ಹಂಚಿಕೆ*

ಈ ಹಿಂದೆ ತಿಳಿಸಿದಂತೆ ಸುಮಾರು 1900ರ ವೇಳೆಗೆ ಎಡತೊರೆ ತಾಲ್ಲೂಕಿನ ಜನಗಳಲ್ಲಿ ಬಹಳ ಮಾನ್ಯರಾದವರು ಶ್ರೀ ಶಿವೋಜಿರಾಯರೆಂಬ ಮರಾಠೆ ಜಮೀನ್ದಾರರು. ಅವರಿಗೆ ನೂರಾರು ಎಕರೆ ನಾಲಾ ಕೆಳಗಿನ ಜಮೀನು ಇದ್ದು, ಸಾವಿರಾರು ಖಂಡುಗ ಭತ್ತ ಬೆಳೆಯುತ್ತಿದ್ದರು ಮತ್ತು ಲಕ್ಷಾಂತರ ರೂಪಾಯಿ ಲೇವಾದೇವಿ ಮಾಡುತ್ತಿದ್ದರು. ಅವರ ಪೂರ್ವಿಕರು ಮುಂಬಯಿ ಪ್ರಾಂತ್ಯದಲ್ಲಿ Montgomery (ಮೂರನೆ ಮೈಸೂರು ಯುದ್ಧದಲ್ಲಿ ಪಾಲ್ಗೊಂಡ **Richard Montgomery,** December 2, 1738 – December 31, 1775 ಇರಬಹುದೆ?) ಎಂಬ ಬ್ರಿಟೀಷ್ ಸರದಾರನ ಬಳಿ ಕೆಲಸಕ್ಕಿದ್ದರು. Commission

(ಯೋಧರ) ನೇಮಕಾತಿ ಕಾಲದಲ್ಲಿ Montgomery ಮೈಸೂರು ಸಂಸ್ಥಾನಕ್ಕೆ ದೊಡ್ಡ ಹುದ್ದೆಗೆ ಬಂದಾಗ ಈ ಇಬ್ಬರು ಮರಾಠರ ನಿಯತ್ತು ಮತ್ತು ಧಕ್ಷತೆ ಮೆಚ್ಚಿ ಅವರನ್ನು ತನ್ನ ಸಂಗಡ ಕರೆತಂದು ಮೈಸೂರಿನಲ್ಲಿ ಸುಭೇದಾರ ಹುದ್ದೆಗೇರಿಸಿ, ಅವರು ನಿವೃತ್ತರಾದಾಗ ಅವರು ಕೇಳಿದ ಕಡೆ ಕೇಳಿದಷ್ಟು ಜಮೀನು ಕೊಟ್ಟನು. ಮುಂದೆ ತಾಲ್ಲೂಕಿನಲ್ಲಿ ಅವರ ವಂಶಜರು ನಂಬರ್ ಒನ್ ಕುಳಗಳಾದರು. ಹೀಗೆ ಅಧಿಕಾರ ರೂಢರು ತಮ್ಮ ನೆಚ್ಚಿನ ಭಂಟರಿಗೆ ನೂರಾರು ಎಕರೆ ಸಂಪತ್ತನ್ನ ನೀಡಿ ದೊಡ್ಡ ಜಮೀನ್ದಾರರನ್ನಾಗಿಸಿರುವ ಸಾಕಷ್ಟು ನಿಧರ್ಶನಗಳಿವೆ . ವಿಪರ್ಯಾಸವೆಂದರೆ ಮುಂದಿನಪೀಳಿಗೆಯವರು ಇದನ್ನು ಅವರ ಪೂರ್ವಜರು ಕಷ್ಟಪಟ್ಟು ಸಂಪಾದಿಸಿದ್ದು ಎಂದು ಹೇಳುತ್ತಿರುತ್ತಾರೆ!



ಇದೇ ರೀತಿ ಆಗ್ರಹಾರಗಳ ಸ್ಥಾಪನೆ ಮತ್ತು ದೇವಸ್ಥನದ ದತ್ತಿಗಳ ಜೊತೆಗೆ ಪ್ರಭುತ್ವ (ಸಂಸ್ಥಾನದ ಮಹಾಪ್ರಭುಗಳು) ಶತಮಾನಗಳಿಂದ ಬ್ರಹ್ಮಾದಾಯಕ್ಕಾಗಿ ಬೆಲೆಬಾಳುವ ನೂರಾರು ಎಕರೆ ಕಾವೇರಿ ನಾಲಾ ಕೆಳಗಣ ಜಮೀನುಗಳಿರುವ ಇನಾಂ ಗಾಮಗಳನ್ನು ಜೋಡಿದಾರರು/ವೃತ್ತಿದಾರರು/ ಇನಾಂದಾರರುಗಳಿಗೆ ಕೊಟ್ಟು ಅವರ ಸ್ವಂತ ಅನುಭವ ಅಥವ ವಹಿವಾಟಿನಲ್ಲಿ ಬಿಟ್ಟಿರುತ್ತಾರೆ.

## ಸಮಾಜವಾದಿ ಮತ್ತು ಭೂಸುಧಾರಣೆ ಚಳುವಳಿ:

ಸಮಾಜವಾದಿ ಮತ್ತು ಭೂಸುಧಾರಣೆ ಚಳುವಳಿಗಳಲ್ಲಿ ಮಿರ್ಲೆ ನೇರ ಮತ್ತು ಸಕ್ರಿಯ ಭಾಗವಹಿಸುವಿಕೆ ಇರಲಿಲ್ಲವಾದರೂ ಭೂ ಸುಧಾರಣೆಯ (Tenancy Act) ಫಲವನ್ನು ಮಿರ್ಲೆಯ ಅನೇಕ ರೈತರು 60 ಮತ್ತು 70 ರ ದಶಕದಲ್ಲಿ ಪಡೆದರು. ಹಲವರು ದಶಕಗಳ ಕಾಲ ಈ ಸಂಬಂಧ ಕೋರ್ಟು ಕಚೇರಿಗಳಿಗೆ ಅಲೆಯುವ ವ್ಯಸನಿಗಳೂ ಆಗಿದ್ದರು.

## *ಇಪ್ಪತ್ತನೇ ಶತಮಾನದ ಆದಿಯಲ್ಲೇ ಗೇಣೀದಾರರ ಮುಖಂಡತ್ವ ವಹಿಸಿ ಅವರ ಹಿತ ಕಾಯ್ದ ಅಪೂರ್ವ ನಾಯಕ ಜಮೀನ್ದಾರ್ ಪಟೇಲ್ ದೇವರಸೇಗೌಡ*

ಸಾಮಾನ್ಯವಾಗಿ ಗೇಣಿದಾರರ ಚಳುವಳಿಯ ಆರಂಭವನ್ನು ಶಿವಮೊಗ್ಗೆ ಜಿಲ್ಲೆಯಲ್ಲಿ 20ನೇ ಶತಮಾನದ ಮಧ್ಯ ಅಥವ ಉತ್ತರಾರ್ಧದ ಆರಂಭದಲ್ಲಿ ಗುರುತಿಸಲಾಗುತ್ತದೆ. ಮಿರ್ಲೆಯಲ್ಲಿ ವ್ಯವಸ್ಥಿತ ಗೇಣೀದಾರರ ಚಳುವಳಿ ನಡೆದಂತಿಲ್ಲ. ಆದರೆ ಪಕ್ಕದ ಸಾಲಿಗ್ರಾಮದಲ್ಲಿ ಸರಿಸುಮಾರು 1902ರಲ್ಲೇ ಒಬ್ಬ ಅಧ್ಭುತ ಮುಖಂಡ ಹತ್ತಾರು ಗೇಣಿದಾರರನ್ನು ಸಂಘಟಿಸಿ ಜಮೀಂದಾರರ (ವರ್ತಕರ) ಬಳಿ ಹೋಗಿ ನಾಲೆಯಲ್ಲಿ ನೀರು ಕಡಿಮೆಯಾಗಿರುವುದರಿಂದ ನಾಲ್ಕು ವರ್ಷಗಳ ಕಾಲ ಗುತ್ತಿಗೆಯನ್ನು ಎಕರೆಯೊಂದಕ್ಕೆ ಒಂದು ಖಂಡುಗ ಇಳಿಸಬೇಕು, ಇಲ್ಲವಾದಲ್ಲಿ ರೈತರ ಜೀವನಕ್ಕೆ ತಾವೇ ದವಸವನ್ನು ಮುಂಗಡವಾಗಿ ಕೊಟ್ಟು, ತಮ್ಮ ಜಮೀನನ್ನು ರೈತರಿಗೆ ಗುತ್ತಿಗೆಗೆ ಬಿಟ್ಟು ನಿಮ್ಮ ಜಮೀನುಗಳನ್ನು ಮಾಡಬೇಡಿರೆಂದು ಕಟ್ಟುಮಾಡುತ್ತೆನೆ ಎಂದು ಧಮ್ಕಿ ಹಾಕಿದರು. ವಿಪರ್ಯಾಸವೆಂದರೆ ಈ ರೈತರೆಲ್ಲಾ ಅದೇ ವರ್ತಕರ ಚಕ್ರಬಡ್ಡಿ ಸುಳಿಗೆ ಸಿಲುಕಿ ಕಳೆದು ಕೊಂಡ ತಮ್ಮ ಜಮೀನನ್ನೇ ಗುತ್ತಿಗೆಗೆ ಮಾಡುತ್ತಿದ್ದರು. ಈ ಹೋರಾಟದ ನಾಯಕ ತಾನೇ ಸ್ವಂತ ಜಮೀನ್ದಾರ. ವರ್ತಕ- ಜಮೀನ್ದಾರರ ಜಿಪುಣತನ/ ಹಟಮಾರಿತನದಿಂದಾಗಿ ಜಮೀನುಗಳನ್ನು ಒಂದು ವರ್ಷ ಪಾಳು ಬೀಳಿಸಿ, ನಾಯಕ ತನ್ನ ಮಾತಿನಂತೆ ನಡೆದುಕೊಂಡುದ್ದಲ್ಲದೆ ಸುತ್ತಲಿನ ರಸ್ತೆ, ನಾಲೆ, ಇತ್ಯಾದಿ ಹತ್ತಾರು ಕಂಟ್ರಾಕ್ಟ್ ಕೆಲಸ ಹಿಡಿದು ಈ ರೈತರಿಗೆ ಜೀವನೋಪಾಯಕ್ಕಾಗಿ ಉದ್ಯೋಗವನ್ನೂ ಕಲ್ಪಿಸಿಕೊಟ್ಟರು. ಆ ವ್ಯಕ್ತಿಯೇ ಸಾಲಿಗ್ರಾಮದ ಒಳ್ಳೆಯ ಹೆಸರುವಾಸಿಯಾದ ರುಸ್ತುಂ ಪಟೇಲರೆನಸಿಕೊಂಡ **ಶ್ರೀ ದೇವರಸೇಗೌಡ**. ಅವರ ಪೀಳಿಗೆಯವರನ್ನು ಈಗಲೂ ಸಾಲಿಗ್ರಾಮದಲ್ಲಿ ಗುರುತಿಸಬಹುದಾಗಿದೆ. ಆರು ಅಡಿ ಎತ್ತರದ, ಅಚ್ಚ ಕಪ್ಪು ಬಣ್ಣದ, ನಡುವಯಸ್ಸಿಗೆ ಮೀರಿದ, ಬಲವಾದ ಸ್ಥೂಲ ಮೈಕಟ್ಟಿನ, ವಿಶಾಲ ಹಣೆಯ, ಸಂಕೋಚವಿಲ್ಲದ ತೆರಗಣ್ಣುಗಳ, ನೀಳ ಮೂಗಿನ, ದಟ್ಟ ಬಿಳೀ ಮೀಸೆಯ, ಗಂಭೀರ ಧೀರ ಧ್ವನಿಯ, ಬಿಳೀ ಪೇಟದ, ಹಚ್ಚಡ ಅಥವ ಕಂಬಳಿ ಹೊದ್ದ ಬಹಳ ಅಪರೂಪದ ಐಶ್ವರ್ಯವಂತ ವ್ಯಕ್ತಿ ಎಂದು ದೇವರಸೇಗೌಡರನ್ನು


A MYSORE MAN PLOUGHING.

ಅಂದಿನ ಅಮುಲ್ದಾರರು ಬಣ್ಣಿಸುತ್ತಾರೆ. ಮುಂದುವರೆದು 'ಅವರು ನೂರೈವತ್ತು ವರುಷಗಳ ಹಿಂದೆ ಹುಟ್ಟಿದ್ದರೆ ಪಾಳೆಯಪಟ್ಟನ್ನೋ ರಾಜ್ಯವನ್ನೋ ಕಟ್ಟಿ ಐತಿಹಾಸಿಕ ಮನೆತನದ ಮೂಲಪುರುಷರಾಗುತ್ತಿದ್ದರು" ಎನ್ನುತ್ತಾರೆ

ಅಂತೆಯೇ ಊರಿನ ಹೆಸರು ಹೇಳದೆ ತಾಲ್ಲೂಕಿನ ಪೂರ್ವಭಾಗದ ಒಂದು ಊರು ಎಂದಷ್ಟೇ ಹೇಳಿ ಅಮುಲ್ದಾರರು ತಿಳಿಸುವ ಮತ್ತೊಂದು ಗೇಣೀದಾರರ ಹಿತ ಕಾಯ್ದ ಘಟನೆ ಹೀಗಿದೆ. ಮಹಾಪ್ರಭುಗಳು ಬ್ರಹ್ಮಾದಾಯಕ್ಕಾಗಿ ಬಹಳ ಬೆಲೆಬಾಳುವ ಕಾವೇರಿ ನಾಲಾ ಕೆಳಗಣ ಜಮೀನುಗಳಿರುವ ಇನಾಂ ಗಾಮವೊಂದನ್ನ 10-12 ಜೋಡಿದಾರರು/ವೃತ್ತಿದಾರರು/ ಇನಾಂದಾರರುಗಳಿಗೆ ವಿಭಾಗಿಸಿ ಕೊಟ್ಟು ಅವರ ಸ್ವಂತ ಅನುಭವ ಅಥವ ವಹಿವಾಟಿನಲ್ಲಿ ಬಿಟ್ಟಿರುತ್ತಾರೆ. ಖಾತೆಗಳು ಅವರ ಹೆಸರಿನಲ್ಲೇ ಇದ್ದು, ಸರ್ಕಾರಕ್ಕೆ ಕ್ವಿಟ್ ರೆಂಟ್ ಕಟ್ಟುತ್ತಿರುತ್ತಾರೆ. ಜಮೀನನ್ನು ಮಾತ್ರ ಗೇಣೀದಾರರು ಸಾಗುವಳಿ ಮಾಡುತ್ತಿರುತ್ತಾರೆ. ಇಂತಹ ಸಂದರ್ಭದಲ್ಲಿ ಆ ಊರಿನ ಜೋಡೀದಾರರು ಗುತ್ತಿಗೆ ಹೆಚ್ಚಿಸಲು ವಿಫಲ ಪ್ರಯತ್ನಮಾಡಿ, ಜಮೀನನ್ನು ಹಿಂಪಡೆಯಲೂ ಪ್ರಯತ್ನಿಸಿ ವಿಫಲರಾಗಿ, ವಕೀಲರೊಬ್ಬರ ಸಲಹೆಯಂತೆ ಸರ್ಕಾರಕ್ಕೆ ಕ್ವಿಟ್ ರೆಂಟ್ ಕೊಡದೆ ಜಮೀನನ್ನು ಹರಾಜಿಗೆ ತಂದು ಗೇಣಿದಾರರು ಗುತ್ತಿಗೆ ಮತ್ತು ಕ್ವಿಟ್ ರೆಂಟ್ ಕೊಟ್ಟಿಲ್ಲವೆಂದು ಸುಳ್ಳು ಹೇಳಿ ತಮ್ಮ ಕಡೆಯವರು ಹರಾಜಿನಲ್ಲಿ ಜಮೀನನ್ನು ಕೊಳ್ಳುವಂತೆ  ಯೋಜನೆ ರೂಪಿಸುತ್ತಾರೆ. ಗೇಣೀದಾರರಿಂದ ನಿಜ ವಿಷಯ ತಿಳಿದು ಅಮುಲ್ದಾರರು ಹರಾಜನ್ನು ತಪ್ಪಿಸಿ ಎಚ್ಚರಿಕೆ ನೀಡುತ್ತಾರೆ.

## ಕ್ಷಾಮ, ಸಾಂಕ್ರಾಮಿಕ ಪಿಡುಗು, ಪ್ಲೇಗ್ , ವಿಷಮಶೀತ ಜ್ವರ ಹಾಗೂ ನೆರೆ ಹಾವಳಿಯ ಬಿಸಿ ಮಿರ್ಲೆಗೂ ತಟ್ಟಿತೆ?

19ನೇ ಶತಮಾನದ ಉದ್ದಕ್ಕೂ ಮತ್ತು 20ನೇ ಶತಮಾನದ ಆದಿಯಲ್ಲಿ ಹಲವಾರು ಭೀಕರ ಬರ/ ಕ್ಷಾಮಗಳ ದುಷ್ಪರಿಣಾಮಗಳಿದ್ದರೂ ಜಿಲ್ಲೆ/ ತಾಲೂಕಿನ ಮೇಲೆ ಅಷ್ಟಾಗಿ ಪರಿಣಾಮ ಬೀರಲಿಲ್ಲವಾದರೂ 1923/24 ಮತ್ತು 1882/3 ರಿಂದ 1884/5 ರವರೆಗಿನದನ್ನು

ಅಪೂರ್ವ/ಭೀಕರ ಎಂದೇ ಗುರುತಿಸಲಾದ ಬರಗಾಲ ಎಲ್ಲರನ್ನೂ ತಟ್ಟಿದೆ. ಹಾಗೆಯೇ 1911, 1924 ಮತ್ತು 1955ರ ನೆರೆ ಹಾವಳಿ ಕಾವೇರಿ ತೀರದಲ್ಲಿ ಹಾನಿಯುಂಟುಮಾಡಿತ್ತು.

ಮೊದಲನೇ ಮಹಾ ಯುದ್ಧದ (1914-18) ಅಂತ್ಯಕ್ಕೆ, ಅಂದರೆ 1918ರ ಸುಮಾರಿಗೆ influenza (ವಿಷಮಶೀತ ಜ್ವರ) ಮಹಾಮಾರಿ ಮೂರು ವರ್ಷಗಳ ಅವಧಿಯಲ್ಲಿ ಭಾರತದಲ್ಲಿನ 2 ಕೋಟಿ ಸೇರಿದಂತೆ (ಜನಸಂಖ್ಯೆ 30 ಕೋಟಿ) ಜಗತ್ತಿನಾದ್ಯಂತ 10 ಕೋಟಿ ಬಲಿ ತೆಗೆದು ಕೊಂಡಿತ್ತು. ಮೈಸೂರು ಸಂಸ್ಥಾನದಲ್ಲಿ ಎರಡೂವರೆ ಲಕ್ಷ ಸಾವು ಸಂಭವಿಸಿ ಶೇ 2.9 ಜನಸಂಖ್ಯೆಯನ್ನು ಕಳೆದು ಕೊಂಡಿತು. ಇದರ ಅನುಪಾತದಂತೆ ಮಿರ್ಲೆಯಲ್ಲಿಯೂ ನೂರಕ್ಕೂ ಹೆಚ್ಚು ಮಂದಿ ಸತ್ತಿರಬೇಕು. ಇಂದಿನ ಕರೋನ ಪಿಡುಗಿಗೆ ಈಗಾಗಲೇ ಜಗತ್ತಿನಾದ್ಯಂತ ಎರಡುವರೆ ಕೋಟಿ ಸೋಂಕಿತರಿದ್ದು (25 ಆಗಸ್ಟ್ 2020) ಇದು ನೂರು ವರ್ಷಗಳ ಹಿಂದಿನ ವಿಷಮ ಸೀತಜ್ವರದ  ಮಹಾಮಾರಿಯನ್ನು ಮೀರುವ ಎಲ್ಲಾ ಸೂಚನೆಗಳಿವೆ.




ಪ್ಲೇಗ್ ಹಾವಳಿ 1898 ರಲ್ಲಿ ನಾಡನ್ನು ತತ್ತರಗೊಳ್ಳುವಂತೆ ಮಾಡಿತ್ತು. ಪ್ಲೇಗನ ಅಧಿಕೇಂದ್ರ ಬೆಂಗಳೂರಾದ್ದರಿಂದ ಮೈಸೂರಿನಲ್ಲಿ ಕಾಣಿಸಿಕೊಂಡದ್ದು 14ನೇ ಶತಮಾನದ ಬುಬೋನಿಕ್ ಪ್ಲೇಗ್ ಆಗಿರಲಿಲ್ಲವಾದರೂ ಜೂನ್ 1904  ರ ವೇಳೆಗೆ ಜನಸಂಖ್ಯೆಯ ಶೇ. 2.5 ರಷ್ಟು (1,41,403) ಹರಡಿ, ಅವರಲ್ಲಿ ಶೇ 76 ರಷ್ಟು (1,06,950) ಮಂದಿಯನ್ನು ಬಲಿ ತೆಗೆದು ಕೊಂಡಿತು. 1898ರ ಸೆಪ್ಟೆಂಬರ್ ನಿಂದ ಡಿಶೆಂಬರ್ ವರೆಗೆ ಪ್ಲೇಗ್ ಅತ್ಯಂತ ತೀವ್ರವಾಗಿದ್ದಿತು. ಪ್ಲೇಗ್ ಮಾರಿ ಬಂದಾಗ ಮಿರ್ಲೆ ಇನ್ನೂ ಅಮೃತೇಶ್ವರ ಗುಡಿ ಬಯಲಿನಲ್ಲೇ ಇದ್ದಿತು. 1998 ನಲ್ಲಿ ಬಂದ ಪ್ಲೇಗ್ ಮಾರಿಯಿಂದ ತತ್ತರಿಸಿದ್ದ ಮಿರ್ಲೆ 1903 ರಲ್ಲಿ ಚಾಮರಾಜ ನಾಲೆ ಬಂದು ಶಾಶ್ವತವಾಗಿಯೇ ಊರನ್ನು ಸ್ಥಳಾಂತರಿಸುವಂತಾಯಿತು.

ಪ್ಲೇಗ್ ಕೊನೆಗೊಂಡಮೇಲೆ ಸಂಸ್ಥಾನದ ಪ್ರಜಾಪ್ರತಿನಿದಿಸಭೆ 5ನೇ ಅಕ್ಟೋಬರ್ 1905 ರಂದು ಪುನರಾರಂಭಗೊಂಡಿತು.

ಜುಲೈ 1924 ರಲ್ಲಿ ಸಂಸ್ಥಾನದ ಎಲ್ಲ ನದಿಗಳಲ್ಲೂ, ಕಾವೇರಿ ಮತ್ತು ಕಾವೇರಿಯ ಉಪನದಿಗಳೂ ಸೇರಿದಂತೆ, ಹಿಂದೆಂದೂ ಕಾಣದ ಪ್ರವಾಹ ನೆರೆ ಹಾವಳಿ ತಂದೊಡ್ಡಿದವು. ಎರಡನೇ ಮಹಾಯುದ್ಧ (1939 to 1945) ಕಾಲದ ಮಿರ್ಲೆಯ ಪರಿಸ್ಥಿತಿ ಏನಿರಬಹುದು ತಿಳಿಯದು. ಮಲೇರಿಯ, ಕಾಲರ, ಕುಷ್ಟ, ಕ್ಷಯ, ಸಿಡುಬು, ಇತ್ಯಾದಿ ರೋಗಗಳನ್ನು ಅಧುನಿಕ ಅಲೋಪತಿ ಲಸಿಕೆಗಳನ್ನು ಬಳಸಿ ಪರಿಣಾಮಕಾರಿಯಾಗಿ 1960ರ ದಶಕದಲ್ಲಿ ನಿಯಂತ್ರಿಸಲಾಯಿತು.

# 4

# ಕೃಷಿ, ನೀರಾವರಿ, ಆಣೆಕಟ್ಟೆ, ಕಾಲುವೆಗಳು, ಕೆರೆ

ಇಂದಿಗೂ ಕರ್ನಾಟಕದ 188 ನಾಲೆಗಳ ಪೈಕಿ ಅತ್ಯಂತ ಹೆಚ್ಚು, ಅಂದರೆ 33 ನಾಲೆಗಳು ಮೈಸೂರು ಜಿಲ್ಲೆಯಲ್ಲಿವೆ. ಕೆ. ಆರ್. ನಗರ ತಾಲ್ಲೂಕಿನಲ್ಲಿ ಶೇ. 77.98 ರಷ್ಟು ವಿಸ್ತೀರ್ಣ ಜಮೀನು ನಿರಾವರಿಗೆ ಒಳಗಾಗಿ ರಾಜ್ಯದಲ್ಲಿ 6ನೇ ಸ್ಥಾನದಲ್ಲಿದೆ. ಎಡತೊರೆ (ಇಂದಿನ ಕೆ. ಆರ್. ನಗರ) ತಾಲ್ಲೂಕು ಅಷ್ಟಾಗಿ ಕಾಡು ಮತ್ತು ಬೆಟ್ಟಗುಡ್ಡಗಳಿಲ್ಲದ ಸಮತಲವಾದ ಅಲ್ಲಲ್ಲಿ ಗಿಡ್ಡದಾದ ಮೆಳೆಗಳಿರುವ ಪ್ರದೇಶ. ತಾಲ್ಲೂಕಿನಲ್ಲೇ ಕಾಡು ಕೇವಲ ಶೇಕಡ 0.26ರಷ್ಟಿದೆ. ಸಾದಾರಣ ಮರಳು ಮತ್ತು ಕೆಂಪು ಮಣ್ಣು ಮಿಶ್ರಿತ ಫಲವತ್ತಾದ ಭೂಮಿ ಮತ್ತು ಅಲ್ಲಲ್ಲಿ ಕಪ್ಪು ಜಿಗಟು ಮಣ್ಣು.  ಸಾಲಿಗ್ರಾಮ, ಮಿರ್ಲೆ ಮತ್ತು ತಿಪ್ಪೂರು ನಾಲೆಗಳ ಬಯಲು ಅತ್ಯುತ್ತಮವಾದುದು ಎನ್ನುತ್ತಾರೆ ಮೈಸೂರಿನ ಮೊದಲ ಗೆಜೆಟಿಯರ್ ಕತೃ  ಬಿ. ಎಲ್. ರೈಸ್ ಅವರು. ಭೂ ಮೇಲ್ಮೈಲಕ್ಷಣವನ್ನು ವಿವರಿಸುತ್ತ,   ಮೇಲ್ಭಾಗವು ಒರಟಾದ ಕ್ರಿಸ್ಟಲೈನ್ ಶಿಲೆಗಳಿಂದ ಕೂಡಿದ್ದು ಜಲವನ್ನು ಸುಧೀರ್ಘ ಕಾಲ ಹಿಡಿದಿಡುವ ಸಾಮರ್ತ್ಯ ಹೊಂದಿವೆ ಮತ್ತು ಮೇಲ್ಪದರದಲ್ಲಿ ಪೋರಸ್ ಯುಕ್ತ ಸಡಿಲ ಮಣ್ಣಿನ ಸ್ಥರಗಳಿವೆ. ತಾಲ್ಲೂಕಿನ ಇಡೀ ಪ್ರದೇಶವು ಪಶ್ಚಿಮದಿಂದ ಪೂರ್ವದೆಡೆಗೆ ಇಳಿಜಾರಾಗಿದೆ ಎನ್ನಲಾಗಿದೆ ತಾಲ್ಲೂಕಿನ ಗೆಜೆಟಿಯರ್ ನಲ್ಲಿ. ಇದು ಕಾವೇರಿ ನದಿ ಹರೆಯುವ ದಿಕ್ಕನ್ನ ಗಮನಿಸಿದರೆ ಅರಿವಾಗುತ್ತದೆ. ಸ್ವಾಭಾವಿಕವಾಗಿ ಮಿರ್ಲೆಯ ಮುಖ್ಯ ನಾಲೆಗಳೆಲ್ಲವೂ ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತವೆ.

ಬ್ರಿಟೀಷ್ ಆಳ್ವಿಕೆಗೆ ಪೂರ್ವದಲ್ಲಿಯೆ ಸ್ಥಳೀಯವಾಗಿ ನಿರ್ಮಿಸಿದ ನೀರಾವರಿ ವ್ಯವಸ್ಥೆಯಿಂದ ದೇಶದಲ್ಲೇ ಅಗ್ರ ಸ್ಥಾನ ಪಡೆದು ಬ್ರಿಟೀಷರಿಂದಲೇ ಹೊಗಳಿಸಿಕೊಂಡು ಲೆಕ್ಕವಿಲ್ಲದಷ್ಟು ಸ್ವಾಭಾವಿಕ ನಾಲೆಗಳನ್ನು ಬಳಸಿಕೊಂಡ ಹೆಗ್ಗಳಿಕೆ ಮೈಸೂರು ಸಂಸ್ಥಾನದ್ದು. ಕೃಷಿಗೆ ಸಂಸ್ಥಾನದ ಅರಸರು ಪ್ರಾಧಾನ್ಯತೆ ನೀಡಿದ್ದನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ.  ಬಿ. ಎಲ್. ರೈಸ್ ಅವರ ಪ್ರಕಾರ 1876 ರಷ್ಟರಲ್ಲಿಯೇ ಕಾವೇರಿ ನದಿಗೆ 12 ಅಣೆಕಟ್ಟುಗಳಿದ್ದವು.

ಅವುಗಳಲ್ಲಿ 2 ಹಾಸನ ಜಿಲ್ಲೆಗೆ ಸೇರಿದವು.

ದಕ್ಷಿಣ ಗಂಗೆ ಎಂದು ಕರೆಯುವ ಕಾವೇರಿ ನದಿಯು ಪಶ್ಚಿಮದಿಂದ ಪೂರ್ವಕ್ಕೆ ತಾಲ್ಲೂಕಿನ ಮದ್ಯಭಾಗದಲ್ಲಿ ಹರಿಯುತ್ತದೆ ಮತ್ತು ಇದು ಮಿರ್ಲೆಯ ದಕ್ಷಿಣಕ್ಕೆ ಚುಂಚನ ಕಟ್ಟೆಯಾದ ನಂತರ ಮಿರ್ಲೆಯಿಂದ ಮೂರು ಕಿಲೋಮೀಟರ್ ದೂರದ ಸಣ್ಣಮಠದ ಬಳಿ ಹರಿಯುತ್ತದೆ. ಉಪನದಿಗಳಲ್ಲಿ ಹಾರಂಗಿ ಮತ್ತು ಹೇಮಾವತಿ ನೀರಾವರಿ ಸೌಲಭ್ಯದ ದೃಷ್ಟಿಯಿಂದ ತಾಲ್ಲೂಕಿಗೆ ಮುಖ್ಯವಾದುವು. ಕಾವೇರಿ ಪ್ರವಾಹದಿಂದ ಸಾಮಾನ್ಯವಾಗಿ ಆಗಸ್ಟ್-ಸೆಪ್ಟೆಂಬರ್ ತಿಂಗಳುಗಳಲ್ಲಿ ನೀರು ನುಗ್ಗಿ ಬೆಳೆ ಹಾನಿಯಾಗುತ್ತದೆ. ನದಿ ಪ್ರವಾಹದಿಂದ 1911,1924, 1953 ಮತ್ತು 1958ರಲ್ಲಿ ಹಾನಿಯಾಗಿತ್ತೆಂದು ತಿಳಿದುಬರುತ್ತದೆ. ತಾಲ್ಲೂಕಿನಲ್ಲಿ ಸರಾಸರಿ ಮಳೆ ಜಿಲ್ಲೆಯ ಸರಾಸರಿಗಿಂತ ಹೆಚ್ಚಿರುತ್ತದೆ. ತಾಲ್ಲೂಕಿನಲ್ಲಿ ಏಳು ಮಳೆ ಮಾಪನ ಕೇಂದ್ರಗಳಿದ್ದು, ಒಂದು ಮಿರ್ಲೆಯಲ್ಲಿದೆ. ಅಂತರ್ ಜಲದ ಕೊರತೆಯನ್ನು ಇದುವರೆವಿಗೆ ಮಿರ್ಲೆ ಕಂಡಿಲ್ಲ.




ಮಿರ್ಲೆಯಲ್ಲಿ ಶೇ. 95 ಕ್ಕಿಂತ ಹೆಚ್ಚು ಕಾಲುವೆ ಆಧಾರಿತ ನೀರಾವರಿ. ಉಳಿದಂತೆ ಕೆರೆ ಮತ್ತು ಭಾವಿ ಆಧಾರಿತ ನೀರಾವರಿ ಅತ್ಯಲ್ಪ. ಮಿರ್ಲೆಯ ಕೆರೆಯೂ ಕಾಲುವೆ ಸಂಪರ್ಕ ಹೊಂದಿದ್ದು 365 ದಿನವೂ ತುಂಬಿರುತ್ತದೆ. ಮಿರ್ಲೆಯ ಕಾಲುವೆಗಳು ಸದಾ ನೀರಿನಿಂದ ತುಂಬಿರುತ್ತವೆ ಮತ್ತು ಮಿರ್ಲೆ ಗದ್ದೆ ಬಯಲು ಕಾಲುವೆಗಳ ತುಟ್ಟತುದಿಗೆ ಇಲ್ಲವಾಗಿ ನೀರಿಗೆ ಬಹಳ ಪರದಾಡಬೇಕಾಗಿಲ್ಲ. ಆದರೂ ಇದ್ದದ್ದನ್ನ ಉಪಯೋಗಿಸುವಾಗಲೇ ಸಾಕಷ್ಟು ಜಗಳಗಳು ಆಗುತ್ತಿರುತ್ತವೆ.

**ಅಣೆಕಟ್ಟೆಗಳು (ಮಿರ್ಲೆ ಕೃಷಿ ನೀರಾವರಿಗೆ ಮುಖ್ಯ ಆಧಾರವಾದ ಅಣೆಕಟ್ಟೆಗಳು)**

**1. ಮಿರ್ಲೆ ಅಣೆಕಟ್ಟೆ (ಹನುಮನ/ ಹನುಮಂತನ ಕಟ್ಟೆ)**: ಚುಂಚನಕಟ್ಟೆ ಬಳಿಯ **ಹನುಮಂತನ**

**ಕಟ್ಟೆ** 1672 ರಲ್ಲಿ ಚಿಕ್ಕದೇವರಾಜ ಒಡೆಯರು ನಿರ್ಮಿಸಿದ್ದು. ಮುಂದೆ ಪೂರ್ಣಯ್ಯನವರು ಸುವ್ಯವಸ್ಥೆಗೊಳಿಸಿದ ಈ ಕಟ್ಟೆಯಿಂದ **ಮಿರ್ಲೆ ನಾಲೆ** ಎಡದಂಡೆಯಲ್ಲಿ ಹೊರಟು ಸುಮಾರು ಒಂದು ಮೈಲಿಯಾದ ಮೇಲೆ ಮೂರು ಉಪ ನಾಲೆಗಳಾಗಿ ಹರಿಯುತ್ತದೆ ಮತ್ತು ಈ ನಾಲೆಗಳ ಹಳ್ಳಗಳು ಗಂಧನಹಳ್ಳಿಯ ಬಳಿ 'ಹಂಪಾಪುರ ನಾಲೆಯಾಗಿ ಸುಮರು 16 ಮೈಲಿ ಹರಿದು ಗುಲ್ಲಿಗೆ ಕೆರೆ ಸೇರುತ್ತದೆ.

- ಹೊಸನಾಲೆ (6 ಮೈಲು)
- ಹಿರಿನಾಲೆ (12 ಮೈಲು)
- ಅತ್ತಿಕಟ್ಟೆ ನಾಲೆ (6 ಮೈಲು)

ಈ **ಮಿರ್ಲೆ ನಾಲೆ** 41 ಮೈಲು ಉದ್ದ ಇದ್ದು 6219 ಎಕರೆಗೆ ನೀರಾವರಿ ಒದಗಿಸಿದೆ. ಮಿರ್ಲೆ ಅಣೆಕಟ್ಟೆಯ ಧುರಸ್ತಿ ಮತ್ತು ನವೀಕರಣಕ್ಕೆ 1939-40ರಲ್ಲಿ ರೂ.5450 ಮಂಜೂರುಮಾಡಲಾಗಿದ್ದು ತಿಳಿದುಬರುತ್ತದೆ.




**2.ಚಾಮರಾಜ ಅಣೆಕಟ್ಟೆ (ಬಳ್ಳೂರು ಕಟ್ಟೆ/ ಅಳಲೆ ಕಟ್ಟೆ**) ಚುಂಚನಕಟ್ಟೆಗೆ 10 ಕಿ ಮಿ ದೂರದ ಬಳ್ಳೂರು ಬಳಿಯಿದೆ. ಇಲ್ಲಿಂದ 53 ಮೈಲು ಉದ್ದದ **ಚಾಮರಾಜ ನಾಲೆ** 9516 ಹೆಕ್ಟೇರ್ (23514 ಎಕರೆ)ಗೆ ನೀರಾವರಿ ಒದಗಿಸಿದೆ.

ಮಿರ್ಲೆ ಅಣೆಕಟ್ಟೆ ಮತ್ತು ಮಿರ್ಲೆ ನಾಲೆ ಇಂದು ಅಷ್ಟಾಗಿ ಚಾಲ್ತಿಯಲ್ಲಿಲ್ಲದ ಹೆಸರುಗಳು. **ಚಾಮರಾಜ ನಾಲೆ** 1903 ರಲ್ಲಿ ಮಿರ್ಲೆಯ ಭೌಗೋಳಿಕ ನಕ್ಷೆಯನ್ನೇ ಬದಲಿಸಿ ಊರು ಸ್ಥಳಾಂತರಗೊಳ್ಳಲು ಕಾರಣವಾಯಿತು.

---

**ವಿ.ಸೂ.** ವಿವಿಧ ಮೂಲಗಳಲ್ಲಿನ ಮಾಹಿತಿಯಲ್ಲಿ ಸ್ವಲ್ಪ ವ್ಯತ್ಯಾಸವಿದೆ. ರಾಮನಾಥಪುರದ ಬಳಿಯ **ಕೃಷ್ಣರಾಜ ಅಣೆಕಟ್ಟೆ** ಕಾವೇರಿ ನದಿಯ ಮೊದಲ ಅಣೆಕಟ್ಟೆ. ಸುಮಾರು 570 ಗಜ ಉದ್ದ ಮತ್ತು 4ಗಜ ಅಗಲದ **ಅಳಲೆ ಕಟ್ಟೆ** ಇಂದ 24 ಮೈಲು ಉದ್ದದ ಎಡದಂಡೆ ಸಾಲಿಗ್ರಾಮ ನಾಲೆಗಳು ಹರಿದವು. ಅಡಗೂರು ಬಳಿಯ ಕಟ್ಟೆಯೊಂದು ಕೃಷ್ಣರಾಜಸಾಗರ ಹಿನ್ನೀರಿನಲ್ಲಿ ಮುಳುಗಿಹೋಗಿದೆ. ಇಂಪೀರಿಯಲ್ ಗೆಜೆಟಿಯರ್ ಮೂಲದ ಪ್ರಕಾರ, ಸ್ವಾತಂತ್ರ್ಯ ಪೂರ್ವದಲ್ಲಿ 20ನೇ ಶತಮಾನಕ್ಕೂ ಮುಂಚೆ ಕಾವೇರಿ ನದಿಗೆ ಅಡ್ಡವಾಗಿ ನಿರ್ಮಿಸಿದ 4 ಅಣೆಕಟ್ಟೆಗಳಲ್ಲಿ 3 ಎಡತೊರೆ, ಅಂದರೆ ಇಂದಿನ ಕೃಷ್ಣರಾಜನಗರ ತಾಲ್ಲೂಕಿಗೆ ಸೇರಿವೆ. ಹನುಮನ ಕಟ್ಟೆ/ಮಿರ್ಲೆ

ಅಣೆಕಟ್ಟೆಯಿಂದ ಸುಮಾರು 200 ಗಜ ಕೆಳಗೆ ಚಿಕ್ಕದೇವ ರಾಜ ಒಡೆಯರೇ ನಿರ್ಮಿಸಿದ ಶ್ರೀರಾಮದೇವರ ಕಟ್ಟೆ/ **ಚುಂಚನಕಟ್ಟೆ (ರಾಮಸಮುದ್ರ ಕಟ್ಟೆ)** ಯಿಂದ ರಾಮಸಮುದ್ರ ಬಲದಂಡೆ ನಾಲೆ ಕೆ. ಆರ್. ನಗರದ ಕಡೆಗೆ ಹರಿದು ಸುಮಾರು 4300 ಎಕರೆಗೆ ನೀರಾವರಿ ಒದಗಿಸುತ್ತದೆ. ಮುಂದಕ್ಕೆ ಇರುವ ಮಾಧವ ಮಂತ್ರಿ ಅಣೆಕಟ್ಟೆಯಿಂದ 1874 ಹೆಕ್ಟೇರ್ ಗೆ ನೀರು ಒದಗಿಸುತ್ತದೆ.

---

## ಕಾಲುವೆಗಳು

ಮಿರ್ಲೆ ಕಾಲುವೆಗಳ ಊರು. ಮಿರ್ಲೆ ಬಯಲಿನಲ್ಲಿ ಎರಡು ಮುಖ್ಯ ಕಾಲುವೆಗಳೂ ಸೇರಿದಂತೆ 7 ಕಾಲುವೆಗಳಿವೆ. ಚಾಮರಾಜ ನಾಲೆ, ಹಿರಿ ಕಾಲುವೆ, ಪಿಳ್ಳಗಾಲುವೆ, ನಗುನಹಳ್ಳಿ ಕಾಲುವೆ, ನಾಯಿನಾಲೆ, ಅತ್ತಿಕಟ್ಟೆ ಕಾಲುವೆ ಮತ್ತು ಕೆಲವು ಹೆಸರುಗಳು ಮಾರ್ಪಾಟಾಗಿವೆ. ಇವುಗಳಲ್ಲಿ ಎರಡು ಮಾತ್ರ ಕಾವೇರಿನದಿಯ ಕಟ್ಟೆಗಳಿಂದ ನೇರ ಹರಿಯು ಮುಖ್ಯ ಕಾಲುವೆಗಳು. ಮಿಕ್ಕವುಗಳು ಉಪ ಕಾಲುವೆಗಳು. ಇದಲ್ಲದೆ ಹಲವಾರು ಹೆಸರಿಲ್ಲದ ನೈಸರ್ಗಿಕ ಕಾಲುವೆಗಳೂ ಅಥವ ಝರಿಗಳು ಇವೆ. ಸ್ಥಳಿಯವಾಗಿ ಇವನ್ನು ಕೊಲ್ಲಿಗಳು ಎನ್ನುತ್ತಾರೆ. ಉದಾಹರಣೆಗೆ 'ಕಾರಂಜಿಕಟ್ಟೆ' ಎಂಬ ಬಹಳ ತಂಪಾದ ಸ್ಥಳವಿದೆ. ಚಾಮರಾಜ ನಾಲೆ ಸ್ವಾತಂತ್ರ್ಯ ಪೂರ್ವದ್ದಾದರೂ ಅತ್ಯಂತ ಇತ್ತೀಚಿನ (1903) ಮತ್ತು ದೊಡ್ಡ ನಾಲೆ. ಇದು **ಚಾಮರಾಜ ಅಣೆಕಟ್ಟೆ (ಬಳ್ಳೂರು ಕಟ್ಟೆ/ ಅಳಲೆ ಕಟ್ಟೆ)** ಯಿಂದ ಆರಂಬಿಸಿ ಈಗಿನ ಮಿರ್ಲೆ ಗ್ರಾಮದ ನಡುವಿನಲ್ಲೇ ಸಾಕಷ್ಟು ರಭಸದಿಂದ ಹರಿಯುತ್ತದೆ. 1903ರ ಸುಮಾರಿಗೆ ಚಾಮರಾಜ ನಾಲೆ ಊರಿನ ಎತ್ತರದ ಈಶಾನ್ಯದಲ್ಲಿ ಆರಂಭಿಸಿ ವಾಯುವ್ಯದಲ್ಲಿ ಲಂಬಕ್ಕೆ ತಿರುಗಿ ಊರಿನ ಉತ್ತರ ಮತ್ತು ಪೂರ್ವ ಭಾಗಗಳೆರಡರಲ್ಲೂ ಪೂರ್ಣವಾಗಿ ಹರಿದು ಅರ್ಧ ಊರನ್ನು ಉತ್ತರಕ್ಕೆ ಸರಿಯುವಂತೆ ಮಾಡಿ ಮಿರ್ಲೆಯ ಭೌಗೋಳಿಕ ನಕ್ಷೆಯನ್ನೇ






ಬದಲಿಸಿತು. ಮುಂದೆ ಖಾಲಿ ಮಾಡಿದ ಊರಿನ ಭಾಗಗಳು ಗದ್ದೆಗಳಾದುವು. ಮಿರ್ಲೆಗೆ ಸೇರಿದ ಒಟ್ಟು ಸುಮಾರು 5000 ಎಕರೆ ಜಮೀನು ಈ ಎಲ್ಲಾ ಕಾಲುವೆಗಳಿಂದ ನೀರಾವರಿಗೆ ಒಳಪಟ್ಟಿದೆ ಎನ್ನಲಾಗಿದೆ. ಅತ್ಯಂತ ಹೆಚ್ಚು ಕಂದಾಯ ಬಾಕಿ ಇದ್ದ ಗ್ರಾಮ ಮಿರ್ಲೆ ಎನ್ನುತ್ತಾರೆ 1902/3ರಲ್ಲಿ ಎಡತೊರೆ ಅಮೂಲ್ದಾರರಾಗಿದ್ದ ನವರತ್ನ ರಾಮರಾವ್ ಅವರು.

## *ಮಿರ್ಲೆಯಲ್ಲಿ ರಾಮರಾಯರ ಕಂದಾಯ ಬಾಕಿ ವಸೂಲಿಯ ಹರಸಾಹಸ*

ನಮ್ಮ Facebookನ Mirle People Groupನಲ್ಲಿ ಸದಸ್ಯರಾದ ತಾರಿ ಎಂಬುವರು ಕಂದಾಯ ಬಾಕಿ ವಸೂಲಿಯ ಒಂದು ವಿಚಿತ್ರ ಪ್ರಸಂಗದಲ್ಲಿ ಅಧಿಕಾರಿಗಳು ತಪ್ಪಿತಸ್ಥರನ್ನು ಬೆತ್ತಲೆ ಮೆರವಣಿಗೆ ಮಾಡುವುದಾಗಿ ಬೆದರಿಸಿದ್ದು, ಅದಕ್ಕೆ ಪ್ರತಿಯಾಗಿ ತಪ್ಪಿತಸ್ಥರೊಬ್ಬರು ಸ್ವತಃ ಬೆತ್ತಲಾಗಿ ಊರಿನ ಬೀದಿಗಳಲ್ಲಿ ಮೆರವಣಿಗೆಗೆ ಮುಂದಾದದ್ದರಿಂದ ಅವರಿಗೆ **"ಮೊಂಡ"** ಎಂಬ ಬಿರುದು ದೊರಯಿತೆಂದು ತಿಳಿಸಿದರು. ಈ ಸಬಂಧವಾಗಿ ಒಂದೆಡೆ ಮಿರ್ಲೆಯ ಗೌಡರೊಬ್ಬರ ಮನೆಯ 7 ದಿನಗಳ ವೈಭವಯುತ ಮದುವೆ ಚಿತ್ರವನ್ನೂ ನೀಡುವ ಎಡತೊರೆ ಅಮುಲ್ದಾರ ನ. ರಾಮರಾವ್ ಅವರೇ ಮಿರ್ಲೆಯಲ್ಲಿ ಕಂದಾಯ ವಸೂಲಿ ಹರಸಾಹಸವನ್ನೂ ಹೀಗೆ ವಿವರಿಸುತ್ತಾರೆ. ಮಿರ್ಲೆ ರೈತರು ಬಹಳವಾಗಿ ಕಂದಾಯ ಬಾಕಿ ಉಳಿಸಿಕೊಂಡದ್ದರಿಂದ ಒಂದು ವಾರ ತಾವು ಮೊಕ್ಕಾಂ ಮಾಡಿದ್ದನ್ನು ವಿವರಿಸುವ ರಾಮರಾವ್ ಅವರು ಕಂದಾಯ ಕೊಡದೆ ತಲೆತಪ್ಪಿಸಿಕೊಳ್ಳುವವರಿಗೆ ನಾಲೆಯಿಂದ ನೀರು ಕೊಡಬೇಡಿ ಎಂದು ಮಣೇಗಾರರುಗಳಿಗೆ ತಾಕೀದ್ ಮಾಡುತ್ತಾರೆ (ಆಜ್ಞಾಪಿಸುತ್ತಾರೆ). ಜುಲ್ಮಾನೆ ಇತ್ಯಾದಿ ಕ್ರಮಗಳೆಲ್ಲಾ ಆದ ಮೇಲೆ ತಾಲ್ಲೂಕಿನ ಸಿಬ್ಬಂದಿಯನ್ನೆಲ್ಲಾ ಮಿರ್ಲೆ ಗ್ರಾಮಕ್ಕೆ ಕರೆಯಿಸಿಕೊಂಡು ಒಬ್ಬೊಬ್ಬರಿಗೂ ಇಷ್ಟು ಕುಳಗಳೆಂದು ಹಂಚಿಹಾಕಿ ಕಂದಾಯ ಬಾಕಿ ವಸೂಲಿ ಮಾಡಲು ಹರಸಾಹಸ ಪಡುತ್ತಾರೆ! ಅಲ್ಲದೆ **ಸುಬ್ಬಯ್ಯ** ಎಂಬ ಮಿರ್ಲೆ ಶ್ಯಾನುಬೋಗರು ಕಂದಾಯದ ಹಣ ದುರುಪಯೋಗ ಮಾಡಿದ್ದರಿಂದ ಸಸ್ಪೆಂಡ್ ಆಗಿ ಅವರ ಜಾಗದಲ್ಲಿ **ನಂಜಪ್ಪ** ಎಂಬುವವರನ್ನು ಗುಮಾಸ್ತೆಯಾಗಿ ಇವರು ಹೋಗುವಷ್ಟರಲ್ಲೆ ನೇಮಿಸಲಾಗಿತ್ತಂತೆ. ಅವರಿಬ್ಬರ ಬದ್ಧ ದ್ವೇಷದಿಂದಾಗಿ ಊರಿನ ಕುಳಗಳೆಲ್ಲಾ ಎರಡು

ಕಕ್ಷಿಗಳಾಗಿದ್ದರು ಎನ್ನುತ್ತಾರೆ. ಇದನ್ನು ಓದಿದ ಮೇಲೆ ತಾರಿಯವರು ವಿವರಿಸಿದ ಘಟನೆ ನಡೆದಿರಲಿಕ್ಕೂ ಸಾಕು ಎನ್ನಿಸುತ್ತದೆಯಲ್ಲವೆ? ಸ್ವಾರಸ್ಯವೂ ತಾರ್ಕಿಕವೂ ಆದ ಮಿರ್ಲೆಯ ಹಲವಾರು ವಂಶನಾಮ, ಅಡ್ಡ ಹೆಸರು, ಬಿರುದು, ವಿಶೇಷಣಗಳ ಹಿನ್ನೆಲೆ ಅಧ್ಯಯನಯೋಗ್ಯ ಎನ್ನಿಸುತ್ತದೆ. ಆದರೆ ಸಂಬಧಿಸಿದ ಮುಂದಿನ ಪೀಳಿಗೆಯವರು ಅದನ್ನು ವೈಯಕ್ತಿಕವಾಗಿ ಅನ್ಯತಾ ಭಾವಿಸಿ ಸಂಕುಚಿತರಾಗಬಾರದಷ್ಟೆ.

ಮುಂದೆ,ಅಂದರೆ 1920-21 ರಲ್ಲಿ ಅರಸೀಕೆರೆಯಲ್ಲಿ ನಡೆದ ವಿಜೃಂಬಣೆಯ (ದೇಶದ ಶಾನುಬೋಗರೆಲ್ಲರ) ಸಮ್ಮೇಳನ ಉದ್ಘಾಟಿಸುತ್ತ ತಾತಯ್ಯನವರು (ವೆಂಕಟಕೃಷ್ಣಯ್ಯ) 'ಶ್ಯಾನುಭೋಗರು ರೈತ ಎಂಬ ಹುಳುವನ್ನು ಸರ್ಕಾರ ಎಂಬ ಅಗ್ನಿಕುಂಡಕ್ಕೆ ಹಾಕುವ ತಂಡಸ (ಇಕ್ಕಳ) ಆಗಬಾರದು, ರೈತರಿಗೆ ರಕ್ಷಕರಾಗಿ, ರೈತರಿಗೆ ಜ್ಞಾನ ಭೋಧನೆ ಮಾಡಿ' ಎಂದು **ಶ್ಯಾನುಭೋಗರಿಗೆ ತಾತಯ್ಯನವರು ಕಿವಿಮಾತು** ಹೇಳಿದ್ದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.

***ಮಿರ್ಲೆ ಗೌಡರು ಅಮುಲ್ದಾರರ ಬಳ:*** ಈ ಸಂಧರ್ಬದಲ್ಲೇ ಒಂದು ಧನಾತ್ಮಕವಾದ ಘಟನೆಯನ್ನೂ ನೆನಪಿಸಿಕೊಳ್ಳುವುದು ಸೂಕ್ತ. ಸಾಲಿಗ್ರಮದ ಪಟಾಕಿ ಎಂಬುವನ ಮೇಲೆ ಒಂದು ಫಿರ್ಯಾದು ದಾಖಲಾದಾಗ, "ಮಿರ್ಲೆಯ ಮರ್ಯಾದಸ್ಥ ರೈತರೊಬ್ಬರು ನನ್ನನ್ನು ಅದೇ ಕೆಲಸವಾಗಿ ನೋಡಲು ಬಂದು 'ಸ್ವಾಮಿ ಪಟಾಕಿ ಕೇಸನ್ನು ಇನ್ಯಾವ ಕೋರ್ಟಿಗಾದರೂ ಕಳಿಸಿಬಿಡಿ, ಅವನನ್ನು ಬಿಟ್ಟರೆ ಅಪವಾದ, ಶಿಕ್ಷಿಸಿದರೆ ತಮ್ಮ ಜೀವಕ್ಕೇ ಅಪಾಯ' ಎಂದು ತಾನು ಮಿರ್ಲೆಯವನು ಎಂದು ಹೇಳಿದನು. ನಾನು ಧನ್ಯವಾದವನ್ನು ಹೇಳಿ ಕಳಿಸಿಕೊಟ್ಟೆ ಎನ್ನುತ್ತರೆ ನ. ರಾಮರವ್ ಅವರು.

## *ಗೇಣಿ / ಗುತ್ತಿಗೆ ಪದ್ಧತಿ ಬೆಳೆದು ಬಂದ ದಾರಿ*

ನೂರಾರು ವರ್ಷಗಳಿಂದ ಆಳುವ ಪ್ರಭುಗಳು ನೀರಾವರಿ ಜಮೀನನ್ನು ಅವರಿಗೆ ಆಪ್ತರೆನಸಿದವರಿಗೆ ಮೆಚ್ಚುಗೆಯ ಕುರುಹಾಗಿ, ಜಾಗಿರ್ ಆಗಿ ನೀಡುತ್ತಿದ್ದರು. ಹೀಗೆ ಜಮೀನ್ದಾರರೆನಿಸಿದವರು ಎಂದೂ ಸ್ವಂತ ಉಳುಮೆ ಮಾಡಿದವರಲ್ಲ, ಬದಲಾಗಿ ಗುತ್ತಿಗೆಗೆ/ ಗೇಣಿಗೆ ನೀಡಿ ಫಲ ಅನುಭವಿಸುತ್ತಿದ್ದವರು. ಕಾಲಕ್ರಮದಲ್ಲಿ ಹಲವಾರು ಗುತ್ತಿಗೆ ಪದ್ಧತಿಗಳು

ನಮ್ಮ ಹಳ್ಳಿಗಳಲ್ಲಿ ಉದ್ಭವಿಸಿ ಚಾಲ್ತಿಗೆ ಬಂದವು.

೧ .**ವರಂ** - ಜಮೀನ್ದಾರರರಿಗೆ ಮತ್ತು ಗೇಣಿದರರಿಗೆ ಫಸಲಿನಲ್ಲಿ ಸಮ ಪಾಲು; ಕಂದಾಯವನ್ನು ಜಮೀನ್ದಾರರು ಪಾವಿತಿಸತಕ್ಕದ್ದು.

೨ .**ಮುಕ್ಕುಪ್ಪೆ** - ಫಸಲಿನಲ್ಲಿ ಜಮೀನ್ದಾರರರಿಗೆ 1/3 ಭಾಗ ಮತ್ತು ಗೇಣಿದರರಿಗೆ 2/3 ಭಾಗ; ಕಂದಾಯವನ್ನು ಜಮೀನ್ದಾರರು ಪಾವಿತಿಸತಕ್ಕದ್ದು.

೩ .**ಅರಕಂದಾಯ** - ಫಸಲಿನಲ್ಲಿ ಜಮೀನ್ದಾರರರಿಗೆ 1/4 ಭಾಗ ಮತ್ತು ಗೇಣಿದರರಿಗೆ 3/4 ಭಾಗ; ಕಂದಾಯವನ್ನು ಜಮೀನ್ದಾರರು ಮತ್ತು ಗೇಣಿದಾರರು ಸಮವಾಗಿ ಪಾವಿತಿಸತಕ್ಕದ್ದು .

೪.**ವೋಲಕಂದಾಯ** - ನಿರ್ಧಿಷ್ಟ ಹಣವನ್ನು ಗುತ್ತಿಗೆಯಾಗಿ ಪಾವತಿಸುವುದು.

೫ .**ಗುತ್ತಿಗೆ** - ನಿರ್ಧಿಷ್ಟ ಗುತ್ತಿಗೆಯನ್ನು ವಸ್ತು (ಬೆಳೆ/ ಫಸಲು) ರೂಪದಲ್ಲಿ ಪಾವತಿಸುವುದು.

ಮೈಸೂರು ಅರಸರ ಆಡಳಿತದಲ್ಲಿ ಕೃಷಿಗೆ ಹೆಚ್ಚಿನ ಒತ್ತು ನೀಡಿದ್ದರೂ ಕಂದಾಯವನ್ನು ಧನ-ಧಾನ್ಯದ ರೂಪದಲ್ಲಿ ಉತ್ಪನ್ನದ ಆರನೇ-ಒಂದು ಭಾಗದಿಂದ ಎರಡನೇ-ಒಂದು ಭಾಗದವರೆವಿಗೂ ಪಡೆಯಲಾಗುತ್ತಿತ್ತು. ನಂತರ 1877-78ರಲ್ಲಿ ಭೂಸರ್ವೇಕ್ಷಣೆ ನಡೆಸಿ ಫಲವತ್ತತೆ ಆಧಾರದ ಮೇಲೆ ಆಣೆವಾರಿ ವರ್ಗೀಕರಿಸಿ ಕಂದಾಯ ನಿಗದಿಪಡಿಸಲಾಯಿತು. ಸುಮಾರು ಮುವ್ವತ್ತು ವರ್ಷಗಳ ನಂತರ ಮತ್ತು ಮತ್ತೊಮ್ಮೆ ಸ್ವಾತಂತ್ರ್ಯಾನಂತರ 1964ರಲ್ಲಿ ಕಂದಾಯ ಪರಿಷ್ಕರಣೆ ಮಾಡಲಾಯಿತು. ಇದಲ್ಲದೆ ನೀರಾವರಿ ಕರ ಮತ್ತು ನೀರಾವರಿ ನಿರ್ವಹಣೆ ಕರಗಳನ್ನೂ ಸೇರಿಸಲಾಯಿತು.

## ಮಿರ್ಲೆ ಕೆರೆ:




ನಮ್ಮೂರ ಕೆರೆಯನ್ನು ನೆನೆದಾಗಲೆಲ್ಲಾ 60 ವರ್ಷಗಳ ಹಿಂದಿನ ಗಾಢ-ಮಧುರ ನೆನಪುಗಳು ಮರುಕಳಿಸುತ್ತವೆ. ಶತಮಾನಗಳಿಂದ ಬೇಸಿಗೆಯಲ್ಲೂ ಬತ್ತದೆ ಕುಡಿಯುವ ನೀರೊದಗಿಸಿ,

ಕೆಂಪು ತಾವರೆ ಹೂವುಗಳನ್ನು ಹೊತ್ತು, ಕೋದಂಡರಾಮ ದೇವರ ತೆಪ್ಪೋತ್ಸವ ನಡೆಸಿ, ಈಜು ಕಲಿಸಿ, ಸ್ವಚ್ಚಂದವಾಗಿ ಈಜಾಡಲು ಅನುವುಮಾಡಿ, ಸಾಕಷ್ಟು ಮೀನುಗಳಿಗೆ ಆಸರೆಯಾಗಿ, ಗ್ರಾಮದ ಮದುವೆ ಮತ್ತಿತರ ಸಮಾರಂಭಗಳಿಗೆ ಎಲ್ಲ ರೀತಿಯ ನೀರಿನ ಅವಶ್ಯಕತೆಗಳನ್ನು ಪೂರೈಸುತ್ತಿದ್ದ ನೆನಪುಗಳು ವಿಪುಲ. ಮಿರ್ಲೆ ಕೆರೆ ಸದಾ ಕಾಲ ಸ್ವಚ್ಛ ಹಾಗೂ ಸಮೃದ್ಧ ನೀರು ಮತ್ತು ತಾವರೆ ಹೂವುಗಳಿಂದ ತುಂಬಿದ್ದು ನನ್ನ ಹಿರಿಯರನೇಕರು ಆಗಾಗ್ಯೆ 'ತಾವರೆಕೆರೆ ನೀರು ಮತ್ತು ಸಣ್ಣಕ್ಕಿ ಅನ್ನದ ಮಧ' ಎನ್ನುತ್ತಿದ್ದರು. ವಿಪುಲ ತಾವರೆ ಹೂವು ಇದ್ದದ್ದರಿಂದ ಮಿರ್ಲೆ ಕೆರೆಯನ್ನು 'ತಾವರೆ ಕಟ್ಟೆ' ಎಂದೂ ಕರೆಯುತ್ತಿದ್ದರು. ನನ್ನ ಬಾಲ್ಯದಲ್ಲಿ ಈ ಕೆರೆಯಲ್ಲಿ (ಹಾಗೂ ಕಾವೇರಿ ನದಿಯಲ್ಲಿ ಸಣ್ಣಮಠದ ಬಳಿ) ಈಜುವುದೇ ಒಂದು ಮೋಜು ಎನ್ನಿಸುತ್ತಿತ್ತು. ಮಿರ್ಲೆಯನ್ನು ನವರತ್ನ ರಾಮರಾವ್ ಅವರು 'ರಸವತ್ತಾದ ಗ್ರಾಮ' ಎಂದು ಚಿತ್ರಿಸಿ, ಮಿರ್ಲೆಯ ಹೊಳೆಕೆರೆಗಳಲ್ಲಿ ಈಜಾಡಿದ್ದನ್ನು ನೆನಪಿಸಿಕೊಳ್ಳುತ್ತಾ, 'ನದಿಗಳೇ ಲಾವಣ್ಯವಾದ ಈ ತಾಲ್ಲೂಕಿನಲ್ಲಿ ಈಜು ಬಾರದವನೇ ಪಾಪಿ, ದೋಣಿಗಳಲ್ಲಿ ವಿಹರಿಸದವನು ತನ್ನನ್ನು ತಾನೇ ವಂಚಿಸಿದ ಮೂಢ' ಎನ್ನುತ್ತಾರೆ. ನೋವಿನ ಸಂಗತಿ ಎಂದರೆ ತಾಲ್ಲೂಕಿನ ನಕ್ಷೆಯಲ್ಲಿ ಈ ಕೆರೆ ಈಗಾಗಲೇ ಮಾಯವಾಗಿದೆ. ಸಂಪೂರ್ಣವಾಗಿ ಭತ್ತವನ್ನೇ ಬೆಳೆಯುತ್ತಿದ್ದ ಮಿರ್ಲೆಯಲ್ಲಿ, ಡಿಶೆಂಬರ್ ತಿಂಗಳ ಸುಗ್ಗಿಯಲ್ಲಿ, ತಂಡೋಪತಂಡವಾಗಿ ಬಾತು ಕೋಳಿಗಳು ಕುಯಿಲಾದ ಗದ್ದೆಯಲ್ಲಿ ಚಲ್ಲಿದ ಬತ್ತದ ಕಾಳುಗಳನ್ನು ತಿನ್ನಲು ಹೊರಗಿನಿಂದ ಬರುತ್ತಿದ್ದವು. ನನ್ನ ತಾಯಿ ಬಾತು ಮೊಟ್ಟೆಗಳನ್ನು ಕೋಳಿ ಮೊಟ್ಟೆಯೊಡನೆ ಇಟ್ಟು ಮರಿಮಾಡಿಸುತ್ತಿದ್ದದ್ದು, ಹೀಗೆ ಬೆಳೆಸಿದವುಗಳಲ್ಲಿ ಕೆಲವು ಬಾತು ಕೋಳಿಗಳು ಮನೆ ಹತ್ತಿರದ ಪಿಳ್ಳಗಾವಲೆಗೆ ಬಿಟ್ಟರೆ ಖಾಯಂ ಆಗಿ ಕೆರೆಯನ್ನೇ ಸೇರಿಕೊಂಡಿದ್ದು ಮತ್ತು ಬಹಳಕಾಲ ಅವು ಪ್ರತೀದಿನ ನಸುಕಿನಲ್ಲಿ ಬಹಿರ್ದೆಸೆಗೆ ಕೆರೆಕಡೆ ಮೊದಲು ಬಂದವರಿಗೆ ಮೊಟ್ಟೆ ದಯಪಾಲಿಸುತ್ತಿದ್ದದ್ದು ಮತ್ತೆ ಕೆಲವು ನನ್ನ ವಯಕ್ತಿಕ ನೆನಪುಗಳು.



## ಮಿರ್ಲೆ ಕೆರೆ ಹೆಸರಿನ ಹಿಂದಿರುವ ಮಾಚನಾಯಕ ಯಾರು?

ಯಾರು ಮತ್ತು ಯಾವಾಗ ಈ ಕೆರೆ ಕಟ್ಟಿಸಿದರು ತಿಳಿಯದು. ಬಹುಶಃ ಸಾವಿರ ವರ್ಷಗಳ ಹಿಂದೆ ಮಿರ್ಲೆ ಸ್ಥಾಪನೆಗೊಂಡಾಗ ಕಟ್ಟಿಸಿರಬಹುದು. ಬಹಳ ಹಿಂದೆ ಇದನ್ನು **ಮಾಚನಾಯಕನ ಕೆರೆ** ಎಂದು ಒಬ್ಬ ಪಾಳೆಗಾರನ/ ಸಾಮಂತನ ಹೆಸರಿನಲ್ಲಿ ಕರೆಯಲಾಗಿತ್ತು ಎಂದು ಹೇಳುತ್ತಾರೆ. ಹನಸೋಗೆಯನ್ನು ಚಂಗಾಳ್ವರ ರಾಜಧಾನಿಯಾಗಿಯೂ/ಮುಖ್ಯ ನಗರವಾಗಿಯೂ ಮತ್ತು ಸಾಲಿಗ್ರಾಮವನ್ನು ಗಂಗರಸರ ಮೂಲ ನೆಲೆ ಎಂದು ಗುರುತಿಸಲಾಗಿದ್ದರೂ ಮಾಚನಾಯಕನ ಕಾಲ, ಸ್ಥಳ ಮತ್ತು ಅವನು ಯಾರ ಆಳ್ವಿಕೆಯಲ್ಲಿ ಸಾಮಂತ/ ಪಾಳೆಯಗಾರನಾಗಿದ್ದ ತಿಳಿಯದು. ಇದೇ ಗುಂಗಿನಲ್ಲಿ, ಮಾಚನಾಯಕನನ್ನು ಅರಸಿ ಹೊರಟಾಗ ಇತಿಹಾಸದಲ್ಲಿ ಸಾವಿರಗಟ್ಟಳೆ 'ನಾಯಕ' ಹೆಸರಿನೊಂದಿಗೆ ಹೊಂದಿದ್ದ ಪಾಳೆಗಾರರು/ ಸಾಮಂತರು ಇದ್ದು ಒಂದೆರಡು 'ಮಾಚನಾಯಕ' ಎಂಬ ಹೆಸರು ದೊರಕಿತಾದರೂ ಇಂತಹವನ ಹೆಸರನ್ನೇ ಮಿರ್ಲೆ ಕೆರೆಗೆ ಇಡಲಾಗಿದೆ ಎಂದು ಖಾತ್ರಿಯಾಗಿ ಹೇಳಲಾಗದು.

ಮಿರ್ಲೆ ಸ್ಥಾಪನೆಗೊಂಡಿರಬಹುದಾದ ಕಾಲದಲ್ಲೇ, ಅಂದರೆ ಹನ್ನೊಂದನೇ ಶತಮಾನದಲ್ಲಿ ಚಾಲುಕ್ಯ ರಾಜ ಜಯಸಿಂಹನ ಸೈನ್ಯಾಧಿಕಾರಿಯೊಬ್ಬನ ಹೆಸರು '**ಮಾಚ' [ನಾಯಕ].** ಅವನು ಕೆಲುವು ಕವಿಗಳನ್ನ ಪೋಷಿಸಿದ್ದ ಎಂದು ತಿಳಿದುಬರುತ್ತದೆ. ವಿಜಯನಗರ ಸಾಮ್ರಾಜ್ಯ (1336-1664) ಉಚ್ಛ್ರಾಯದಲ್ಲಿದ್ದಾಗ 'ನಾಯಕ' ಏಂಬ ನಾಮೆಯ ಹಲವಾರು ಪಾಳ್ಯೇಗಾರರನ್ನು ಹೊಂದಿದ್ದು, ಉತ್ತರದವರನ್ನ ನೇರವಾಗಿ ರಾಜಧಾನಿಯಿಂದಲೇ ಮತ್ತು ದಕ್ಷಿಣದವರನ್ನ ಶ್ರೀರಂಗಪಟ್ಟಣವಾಸಿ ವೈಸ್ರಾಯ್ ಶ್ರೀರಂಗರಾಯನ ಉಸ್ತವಾರಿಯಲ್ಲಿ/ ನಿಯಂತ್ರಣದಲ್ಲಿ ಇಡಲಾಗಿತ್ತು. ಚರಿತ್ರೆಯಲ್ಲಿ ನಾಯಕ ಎಂದು ಕರೆಯಿಸಿಕೊಳ್ಳುವ ಮನೆತನ, ವಿಜಯನಗರ ರಾಜ್ಯಕ್ಕೆ ಸಾಮಂತರಾಗಿ 15-16ನೇ ಶತಮಾನದಲ್ಲಿ ಮಧುರೆ, ತಂಜಾವೂರು, ಸೇಂಜಿ (ಜಿಂಜಿ) ಮತ್ಥು ಕೆಳದಿ/ಇಕ್ಕೇರಿಗಳಲ್ಲಿ ಇದ್ದದ್ದು ಕಂಡುಬರುತ್ತದೆ. ಮಧುರೆ, ತಂಜಾವೂರು ಮತ್ತು ಸೇಂಜಿ ಇಂದಿನ ತಮಿಳು ನಾಡಿನಲ್ಲೂ, ಇಕ್ಕೇರಿ (ಕೆಳದಿ) ಕರ್ನಾಟಕದಲ್ಲಿ ಇದ್ದರೂ ಅಂದು ಇವೆಲ್ಲವೂ ವಿಜಯನಗರದ ಸಾಮಂತ ರಾಜ್ಯಗಳಾಗಿದ್ದುವು.

ಕರ್ನಾಟಕದ ನಾಯಕರನ್ನು ಮೂರು ವರ್ಗವಾಗಿ ವಿಂಗಡಿಸುತ್ತಾರೆ: ಕೆಳದಿ, ಯಲಹಂಕ ಮತ್ತು ಚಿತ್ರದುರ್ಗ. ಅಲ್ಲದೆ ಹಲವಾರು ಇತರೆ ನಾಯಕ ಸಾಮಂತರೂ ಇದ್ದರು. ಅದರಲ್ಲಿ ಮೈಸೂರಿನ ಕಳಲೆ (ಕ್ಯಾಲೆ) ಯ ಬೆನಪ್ಪನಾಯಕ ಒಬ್ಬ.

ಕೃಷ್ಣದೇವರಾಯನ ಎಂಟು  ಅತ್ಯುನ್ನತ ಕವಿಗಳಲ್ಲಿ ಅಪ್ಪಯ್ಯ ಧೀಕ್ಷಿತ ಪ್ರಮುಖ. ಅಪ್ಪಯ್ಯ ಧೀಕ್ಷಿತ ವೆಲ್ಲೂರು ದೇವಾಲಯದ ಧುರಸ್ತಿ/ ವಿಸ್ತರಣೆ ಕಾರ್ಯ ನಡೆಸಿದಾಗ, 1549ರಲ್ಲಿ, ಚಿನ್ನ ಬೊಮ್ಮನಾಯಕ ಎಂಬ ಸಾಮಂತ ದೇವಸ್ಥಾನದ ಸುತ್ತ ಹಾಸು ಗಲ್ಲಿನ ಕೆಲಸವನ್ನು ವೆಲ್ಲೂರಿನ **ಮಾಚನಯಕನ** ಹೆಸರಿನಲ್ಲಿ ನೆರವೇರಿಸಿದ. ಇದಕ್ಕೆ ಪೂರಕವಾಗಿ ವಿಜಯನಗರ ಆರಂಭ ಕಾಲದ ಶೈಲಿಯಲ್ಲಿ ನಿರ್ಮಿಸಿದ ಮಿರ್ಲೆ **ಕೋದಂಡರಾಮ ದೇವಸ್ಥಾನದ** ನವರಂಗಮಂಟಪದ ಮಾಳಿಗೆಯಲ್ಲಿರುವ ಕೆತ್ತನೆಯಲ್ಲಿ ಕ್ರಿ. ಶ. 1219 ಎಂದು ತಿಳಿಸಿರುವುದಲ್ಲದೆ,  ಕ್ರಿ. ಶ. 1299ರಲ್ಲಿ ಬಲ್ಲಿಯ ದಣ್ಣಾಯಕನ ಅಧಿಕಾರಿ ಪುಮಾಂದ ದೇವಸ್ಥಾನಕ್ಕೆ ಧತ್ತಿ ನೀಡಿದ ಉಲ್ಲೇಖವಿದೆ. ಹದಿನೈದನೇ ಶತಮಾನದಲ್ಲಿ ಈ ಆಸ್ಥಿಯನ್ನು (ಮನೆ, ತರಿ ಮತ್ತು  ಖುಷ್ಕಿ ಜಮೀನುಗಳನ್ನು) ಶೃಂಗೇರಿಯ ನರಸಿಂಹಭಾರತಿಯವರ ಶಿಷ್ಯ ಭಾರತೀಪುರದ ಚಿಕ್ಕಧೀಕ್ಷಿತ ಎಂಬುವರಿಗೆ ಮಾರಲಾಯಿತು ಎಂಬ ಶಾಸನವಿದೆ.

ವಿಜಯನಗರದ ಅರಸರ ಈ 'ನಾಯಕ" ಪಟ್ಟದ ಬಗ್ಗೆ ಮತ್ತು ಇದರ ಆರಂಭದ ಬಗ್ಗೆ ಇತಿಹಾಸಕಾರರಲ್ಲೇ ಭಿನ್ನಾಬಿಪ್ರಾಯಗಳಿವೆ. ಕೆಳದಿ ವಿಜಯನಗರದ ಬಹಳ ಮುಖ್ಯವಾದ ಅಧೀನ ರಾಜ್ಯ. ವಿಜಯನಗರದ ಪಥನದ ನಂತರ ಕೆಳದಿ ಸ್ವತಂತ್ರ್ಯ ರಾಜ್ಯವಾಯಿತು. ಮುಂದೆ ಇದನ್ನು ಇಕ್ಕೇರಿ ಎಂದೂ ಕರೆಯಲಾಯಿತು. ಕೆಳದಿಯ ರಾಯಪದ್ಧತಿಯ ವಂಶಾವಳಿಯಂತೆ, ಕೆಳದಿಯ ಸುತ್ತಲಿನ ಐದಾರು ಗ್ರಾಮಗಳ ಮುಖ್ಯಸ್ಥ ಚೌಡಪ್ಪ ಗೌಡ ಈ ನಾಯಕ ಪರಂಪರೆಗೆ ಮೂಲ ಎನ್ನಲಾಗಿದೆ. ಚೌಡ ಎಂಬ ಕೃಷಿಕನೊಬ್ಬ ತನಗೆ ಬೂಮಿಯಲ್ಲಿ ದೊರೆತ ನಿಧಿಯಿಂದ ಸೈನ್ಯ ಕಟ್ಟಿದ ಕಥೆ ಕೇಳಿ ಕೃಷ್ಣದೇವರಾಯ ಅವನನ್ನು ಕರೆಯಿಸಿ ಪುಲ್ಲದೇಶದ ಗೌರ್ನರ್ ಆಗಿ ನೇಮಿಸಿ ಅವನನ್ನು 'ಕೆಳದಿಯ ಚೌಡಪ್ಪ ನಾಯಕ' ಎಂದು ಹೆಸರಿಸಿದ ಎನ್ನಲಾಗಿದೆ. ಈ ಕೆಳದಿ ನಾಯಕರ ವಂಶದಲ್ಲಿ ಚೌಡಪ್ಪನಾಯಕನಿಂದ (1499-

1530) ಚೆನ್ನಬಸಪ್ಪ ನಾಯಕ (1754-1757) ಮತ್ತು ರಾಣಿ ವೀರಮ್ಮಾಜಿ (1757-1763) ವರೆವಿಗೆ ಮಾಚನಾಯಕನೆಂಬ ರಾಜನಿದ್ದಂತಿಲ್ಲ. ಬೇರೆಯೇ ಆದ ಸೈನ್ಯಾಧಿಕಾರಿ ಅಥವ ಯೋಧ ಅಥವ ಸಾಮಂತ ಇದ್ದಿರಬಹುದೇನೊ? ಮಿರ್ಲೆಯ ಆಸಕ್ತ ಮುಂದಿನ ಪೀಳಿಗೆಯ ಯುವಕರು ಯಾರಾದರು ಇದನ್ನು ಶೋಧಿಸಲಿ ಎಂದು ಆಶಿಸುತ್ತೇನೆ.




## ಮಿರ್ಲೆ ಭತ್ತದ ಕಣಜವಾಗಿಯೇ ಉಳಿದಿದೆಯೆ?

ಶಾಸನಗಳಲ್ಲಿ ಸೂಚಿಸಿರುವಂತೆ, 17ನೇ ಶತಮಾನದಿಂದಲೇ ತಾಲ್ಲೂಕಿನಲ್ಲಿ ಹಲವಾರು ಭತ್ತದ ತಳಿಗಳನ್ನು ಮತ್ತು ಹೊಲಗಳಲ್ಲಿ ಸಿರಿಧಾನ್ಯಗಳನ್ನು ಬೆಳೆಯಲಾಗುತ್ತಿತ್ತು. ಭತ್ತಗಳಲ್ಲಿ ಸಥ್ಯಗಾಲದ ಸಣ್ಣ, ಜೀರಿಗೆ ಸಣ್ಣ, ಕಸ್ತೂರಿ ರಾಜಾನ್ನ, ದೊಡ್ಡ ಭತ್ತ, ಪುಟ್ಟ ಭತ್ತ, ಸುಕುದುರೆ, ಇತ್ಯಾದಿ ಮತ್ತು ಸಿರಿಧಾನ್ಯಗಳಲ್ಲಿ ಹಾರಕ, ನವಣೆ, ಸಾವೆ, ಜೋಳ, ಇತ್ಯಾದಿ ಸೇರಿವೆ.

ಸ್ವಾತಂತ್ರ್ಯಪೂರ್ವದ ಮೈಸೂರು ಸಂಸ್ಥಾನದಲ್ಲಿ 'ಕೆ. ಆರ್. ನಗರ/ ಮಿರ್ಲೆ ಭತ್ತದ ಕಣಜ' ಎನ್ನುತ್ತಿದ್ದರು. ಆದರೆ ಅದು ಇಂದಿನ ಸ್ಥಿತಿಗೂ ಅನ್ವಯಿಸುತ್ತದೆಯೆ? ಏಳು ಕಾಲುವೆಗಳು, ಸುಮಾರು 5000 ಎಕರೆ ನೀರಾವರಿ ಜಮೀನನ್ನು ಹೊಂದಿರುವ ಮಿರ್ಲೆ ಅಂದು ಅತ್ಯಂತ ಹೆಚ್ಚು ಕಂದಾಯ ಕಟ್ಟುತ್ತಿದ್ದು ಮೊಟ್ಟಮೊದಲಿಗೆ ತಾಲ್ಲೂಕಿನ ಹೊರಗೆ ಸಬ್ ರಿಜಿಸ್ಟ್ರಾರ್ ಕಚೇರಿ ಪಡೆದ ಗ್ರಾಮ ಎನ್ನಿಸಿತ್ತು. ಆದರೆ ಪ್ರತಿಶಃ ನೀರಾವರಿ ಕೃಷಿ ಪ್ರದೇಶ (Percentage of area irrigated) ಪರಿಗಣಿಸಿದರೆ ಇಂದು ರಾಜ್ಯದಲ್ಲಿ (2003-2004) ಕೆ.ಆರ್. ನಗರ ತಾಲ್ಲೂಕು 6ನೇ ಸ್ಥಾನದಲ್ಲಿದೆ (77.98) ಮತ್ತು ಕೃಷಿ ತೀವ್ರತೆಯಲ್ಲಿ (Intensity of Irrigation) 136ನೇ ಸ್ಥಾನದಲ್ಲಿದೆ. ಮೈಸೂರು ಜಿಲ್ಲೆ 100-150 ಸಾವಿರ ಹೆಕ್ಟೇರ್ ಕೃಷಿ ಪ್ರದೇಶ ಹೊಂದಿರುವ ಗುಂಪಿನಲ್ಲಿರುವ 9 ಜಿಲ್ಲೆಗಳ ಪೈಕಿ ಒಂದು. ಅಲ್ಲದೆ 200 ಸಾವಿರ ಹೆಕ್ಟೇರ್ ಗಿಂತಲೂ ಹೆಚ್ಚು ಕೃಷಿ ಪ್ರದೇಶ ಹೊಂದಿರುವ ಒಂದು ಇತರ ಜಿಲ್ಲೆ ಮತ್ತು 150 – 200 ಸಾವಿರ ಹೆಕ್ಟೇರ್ ಕೃಷಿ ಪ್ರದೇಶ ಹೊಂದಿರುವ ಇತರ ಮೂರು ಜಿಲ್ಲೆಗಳು ಕರ್ನಾಟಕದಲ್ಲಿವೆ.

ಮೈಸೂರು ಜಿಲ್ಲೆಯಲ್ಲಿಯೇ ಅತ್ಯಂತ ಹೆಚ್ಚು ಮಳೆ ಬೀಳುವ ಮತ್ತು ಅತ್ಯಂತ ಹೆಚ್ಚು ರಸಗೊಬ್ಬರ ಬಳಸುವ ತಾಲ್ಲೂಕು ಕೆ. ಆರ್. ನಗರ. ಇತ್ತೀಚಿನ (2007-08) ಅಂಕಿಅಂಶಗಳಂತೆ ಜಿಲ್ಲೆಯಹೊರಗಿನ ಮಾತಿರಲಿ ಮೈಸೂರು ಜಿಲ್ಲೆಯಲ್ಲಿಯೆ ಭತ್ತ ಬೆಳೆಯುವುದರಲ್ಲಿ ಟಿ. ನರಸೀಪುರ ತಲ್ಲೂಕು ಮೊದಲಸ್ಥಾನದಲ್ಲಿದ್ದರೆ. ಕೆ. ಆರ್. ನಗರ ತಾಲ್ಲೂಕು ಎರಡನೇ ಸ್ಥಾನದಲ್ಲಿದೆ. ಕಳೆದ ಒಂದು ಶತಮಾನದಲ್ಲಿ ಮಿರ್ಲೆಯಲ್ಲಿ ಭತ್ತದ ಬೆಳೆ ಗಣನೀಯವಾಗಿ ಕಡಿಮೆ ಆಗಿದ್ದು ಈ ಗತ ವಿಶೇಷಣ 'ಭತ್ತದ ಕಣಜ ಮಿರ್ಲೆ' ಯನ್ನು (ಅಥವ ''ಭತ್ತದ ಕಣಜ ಕೆ. ಆರ್. ನಗರ' ವನ್ನು) ಇಂದಿನ ದಿನಗಳಲ್ಲಿ ನೀರಾವರಿ ಮತ್ತು ಕೃಷಿ ತಜ್ಞರು ಮರುಪರಿಶೀಲನೆ ಮಾಡ ಬೇಕಲ್ಲವೆ?

---

*ಪ್ರತಿಕ್ರಿಯೆಗಳು:*

**ರವಿಶಂಕರ್:** ಇಡೀ ಮೈಸೂರು ಸಂಸ್ಥಾನದಲ್ಲಿ ಅತೀ ಹೆಚ್ಚು ಕಂದಾಯವನ್ನು ಮಿರ್ಲೆಯ ಸಾಹುಕಾರ M H ರಾಮಣ್ಣ ನವರ ವಂಶದ ಹಿರಿಯರಾದ ಹಿರಣ್ಣಯ್ಯ ನವರು ಕೊಡುತಲಿದ್ದ ಕಾಲ omdittu. ಕೀರ್ತಿಶೇಷರಾದ ಹಿರಣ್ಣಯ್ಯನವರು ಕಂದಾಯವನ್ನು ಊರಿನ ಶಾನುಭೋಗರಿಗೆ ಕೊಡದೆ, ತಾವೇ ಕುದುರೆ ಏರಿ ಮೈಸೂರಿಗೆ ಹೋಗಿ. ದರ್ಬಾರ್ ನಲ್ಲಿ ಸ್ವತ ಮಹಾರಾಜರಿಗೆ ಒಪ್ಪಿಸುತ್ತಲಿದ್ದರು

**ಉ:** ಬಹಳ ಕುತೂಹಲಕರ ಮಾಹಿತಿ! ಅಂದರೆ ಖಾಸಗಿ ಈಶ್ವರ ದೇವಸ್ಥಾನ ಕಟ್ಟಿಸಿದ ನೂರು ಎಕರೆ ಜಮೀನ್ದಾರ್ ಅಂಗಡಿ ರಾಮಣ್ಣ ಅವರೆ?

**ರವಿಶಂಕರ್:** ಹೌದು. ಬರೀ ನೂರಲ್ಲ ಆ ಕಾಲಕ್ಕೆ ಒಂದು ನಾಲೆಯ ಬಯಲೆಲ್ಲ ಅವರದ್ದೇ ಆಗಿತ್ತು. ಅರ್ಕೇಶ್ವರ ದೇವಾಲಯ ಕಟ್ಟಿಸಿದ್ದು ರಾಮಣ್ಣನವರ ತಾತ ಹಿರಣ್ಣಯ್ಯನವರ ಕಾಲದಲ್ಲಿ. ಸಾರಿ ಅಂಗಡಿ ರಾಮಣ್ಣ ನವರು ಬೇರೆ. ಇದು m h ರಾಮಣ್ಣ ಅಂತ ಇದ್ರೂ ಅವರು. ಈ ದೇವಸ್ಥಾನಕ್ಕೆ ಹೊಂದಿ ಕೊಂಡಂತೆ ಅವರ ಮನೆ ಇದೆ.

**ಸುಮ:** ಮಿರ್ಲೆ ಭತ್ತದ ಕಣಜವಾಗಿ ಇಡೀ ಜಿಲ್ಲೆ ಹಾಗೂ ರಾಜ್ಯದಲ್ಲಿ ಹೆಸರು ವಾಸಿಯಾಗಿರುವುದು ಹೆಮ್ಮೆಯ ಸಂಗತಿ.. ಆದರೆ ಇತ್ತೀಚಿನ ದಿನಗಳಲ್ಲಿ ಅಡಿಕೆ, ತೆಂಗು, ಹಾಗೂ ಶುಂಠಿ ಬೆಳೆಗಳಿಗೆ ಮಾರುಹೋಗಿ ಮತ್ತು ಬೆಳೆಯುವ ಪ್ರಮಾಣ ಸ್ವಲ್ಪ ಕುಂಠಿತಗೊಂಡಿದೆ. ಆದರೆ ಹಿಂದಿನ ಭೌಗೋಳಿಕ ಸ್ಥಿತಿ ಯೇ ಇಂದಿಗೂ ಬದಲಾಗಿದೆ.. ಮನುಜರ ಮನಸ್ಥಿತಿ ಬದಲಾಗಿದೆ ಅಷ್ಟೇ.

---

ಮಿರ್ಲೆ ಭತ್ತದ ಕಣಜ ಮತ್ತು ಮಿರ್ಲೆಯಲ್ಲಿ ಬಹಳ ಶ್ರೀಮಂತ ಜಮೀನ್ದಾರರಿದ್ದಾರೆ ಎಂಬ ಪ್ರಚಲಿತ ನಂಬಿಕೆ ಎಷ್ಟಿತ್ತೆಂದರೆ ಮೈಸೂರಿನ ಕಾಲೇಜಿನಲ್ಲಿ ಶುಲ್ಕ ಮಾಫಿ, ವಿಧ್ಯಾರ್ಥಿವೇತನ ಮತ್ತು ಪುಕ್ಕಟೆ ಮಧ್ಯಾನ್ಹದ ತಿಂಡಿಗಾಗಿ ಸಂದರ್ಶನಗಳಲ್ಲಿ ಊರು ಯಾವುದೆಂದು ಕೇಳಿದಾಗ ಮಿರ್ಲೆ ಎಂದರೆ ಹುಬ್ಬು ಏರಿಸಿ ಮಿರ್ಲೆಯ ಜಮೀನ್ದಾರರ ಮಕ್ಕಳಿಗೇಕೆ ಎಂದು ನಿರ್ಲಕ್ಷಿಸುವುದು ಸಾಮಾನ್ಯವಾಗಿತ್ತು. ಕೃಷಿಯನ್ನೇ ಆಧರಿಸಿದವರು ಮಿರ್ಲೆಯಲ್ಲಿ ಶೇಕಡ ೯೦ಕ್ಕಿಂತಲೂ ಹೆಚ್ಚಿರಬಹುದು ಆದರೆ 25 ಎಕರೆಗಿಂತ ಹೆಚ್ಚು ನೀರಾವರಿ ಜಮೀನು ಹೋಂದಿರುವವರು ಶೇಕಡ 3 ಅಥವ 4 ಕ್ಕಿಂತ ಹೆಚ್ಚಿರಲಾರರು.

## ಮಿರ್ಲೆಯಲ್ಲಿ ಏತ ನೀರಾವರಿ?

ಮಿರ್ಲೆಯಲ್ಲಿ **ಏತ ನೀರಾವರಿ** ಇದ್ದಂತಿರಲಿಲ್ಲ. ಆದರೆ 1953ರಲ್ಲಿ ವಿಧ್ಯುಚ್ಛಕ್ತಿ ಬಂದಮೇಲೆ ಕುಪ್ಪೇಭಾರೆ ಬಳಿ ಶ್ರೀ ರಾಚಪ್ಪ  ಮತ್ತು ಕೊಪ್ಪಲಲ್ಲಿ ಬೀಚನಹಳ್ಳಿ ದಾರಿಯಲ್ಲಿ ಶ್ರೀ ರಾಮುಸ್ವಾಮಿ ಗೌಡ Irrigation pump set ಬಳಸಿ  ಮೊದಲಿಗೆ ವ್ಯವಸಾಯ  ನಡೆಸಿದ್ದರು ಎಂದು ತಿಳಿಯಿತು.

## ಕೃಷಿ ಅಧಿಕಾರಿಗಳ ಕಚೇರಿ?



ತಾಲ್ಲೂಕು ಕೇಂದ್ರದಲ್ಲಿ ಕೃಷಿ ಅಧಿಕಾರಿಗಳ ಕಚೇರಿಯಿದ್ದು ರೈತ ಸಂಪರ್ಕ ಕೇಂದ್ರ ಮಿರ್ಲೆಯಲ್ಲಿ ಪದವೀಧರ ಸಂಘದ ಕಟ್ಟದ ಭಾಗವಾಗಿದೆ.  ಹೋಬಳಿ ಮಟ್ಟದ ರೇಷ್ಮೆ ವಿಸ್ತರಣ ಅಧಿಕಾರಿ ಇದ್ದಂತಿಲ್ಲ. ಅಲ್ಲದೆ ಪಕ್ಕದಲ್ಲೇ ಮಿರ್ಲೆ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ಇದೆ.



## ಕೃಷಿಕರ ಉಪಕಸುಬುಗಳು

ಹಸು, ಹೋರಿ/ ಎತ್ತು, ಮೇಕೆ, ಕುರಿ, ಕೋಳಿ  ಸಾಕುವುದು ಮತ್ತು ಮೀನುಗಾರಿಕೆ ಕೃಷಿಕರ

ವಿಸ್ತೃತ ಉಪಕಸುಬಾಗಿ ಮಿರ್ಲೆಯಲ್ಲಿ ಇತ್ತು. ಚಾರಿತ್ರಿಕವಾಗಿ ಶಾಸನಗಳಲ್ಲಿ ನಮೂದಿಸಿರುವಂತೆ ದೇವಾಲಯಗಳಿಗೆ ಗೋವುಗಳನ್ನು ಸೇವೆಗಾಗಿ ಧಾನಬಿಡುವ ಪದ್ಧತಿ ಮತ್ತು ದನಗಳ ಮೇವಿಗಾಗಿ ಗೋಮಾಳಗಳನ್ನು ಬಿಡುವ ಪದ್ಧತಿ ಬಹಳ ಹಿಂದಿನಿಂದ ಇತ್ತು. ನಂತರದ ಶತಮಾನಗಳಲ್ಲಿ ಬ್ರಾಹ್ಮಣರಿಗೆ ಗೋದಾನ ಕೊಡುವಪದ್ಧತಿ ಬೆಳೆದು ಬಂದಿತು. ತಾಲ್ಲೂಕು ಕೇಂದ್ರವನ್ನು ಬಿಟ್ಟರೆ ಪಶು ಆಸ್ಪತ್ರೆ ಮಿರ್ಲೆಯಲ್ಲಿ ಮಾತ್ರ ಇದೆ. ಹೋರಿಗಳನ್ನು (ಹಳ್ಳಿಕಾರ್ ಹೋರಿ ಬಹಳ ಪ್ರಸಿದ್ಧಿ) ಉಳಮೆಗೆ ಮತ್ತು ಸಾರಿಗೆಗಾಗಿಯಷ್ಟೇ ಅಲ್ಲದೆ ಒಂದು ಘನತೆಯ ಕುರುಹಾಗಿ, ಹವ್ಯಾಸವಾಗಿ, ಜಾತ್ರೆಯಲ್ಲಿ ಸ್ಪರ್ಧಿಸಲು ಬಹಳ ಆಸಕ್ತಿ-ನಿಷ್ಠೆಯಿಂದ ಸಾಕಲಾಗುತ್ತಿತ್ತು. ಒಳ್ಳೆಯ ಹೋರಿಗಳನ್ನು ಪ್ರದರ್ಶನಕ್ಕೆ ಸಾಕುತ್ತಿದ್ದವರ ಪೈಕಿ ಶ್ರೀ ದೊಡ್ಡರಾಮೇಗೌಡರು, ಶ್ರೀ ಚಲಪ್ಪನ ಪಾಪಶೆಟ್ಟರು, ಹೋರಿ ಮುದ್ದಪ್ಪನವರು ಮತ್ತು ಜವಳಿ ಅಂಗಡೀ ಕೃಷ್ಣೇಗೌಡರು ಪ್ರಮುಖರು.

## ಕಾವೇರಿ ನದಿ:




*ಕಾವೇರಿ ತೀರದಲ್ಲಿರುವ ಸಣ್ಣ ಮಠದ* ಮೂಲ ಹೆಸರು ***ಸಂಧ್ಯಾವಂದನ ಮಂಟಪ*** ಎಂದಿರಬೇಕು. ಪಕ್ಕದಲ್ಲಿ ಒಂದು ಸಣ್ಣ ಗುಡಿಯೂ ಇದೆ. ಈಗ ಸಾಕಷ್ಟು ನಶಿಸಿ ಸುತ್ತ ಪೊದೆಗಳು ಬೆಳೆದಿವೆ. ಇಲ್ಲಿ ಮಿರ್ಲೆ ನಾಗಣ್ಣನವರ ಮಗ ಲಕ್ಕಣ್ಣನವರು ಸ್ಥಾಪಿಸದ ಸ್ಥಂಭ ಎಂದು ಕೆತ್ತಲಾದ 17ನೇ ಶತಮಾನದ ಶಾಸನವಿತ್ತೆಂದು ಹೇಳಲಾಗಿದೆ. ಇದರ ಮುಂಭಾಗದಿಂದ ನದಿಗೆ ಇಳಿಯಲು ಇದ್ದ ಮೆಟ್ಟಿಲುಗಳನ್ನು/ ಸೋಪಾನಗಳನ್ನು ಬಳಸಿ ಬೇಸಿಗೆಯಲ್ಲಿ ಬಟ್ಟೆ ಒಗೆಯಲು, ಸ್ನಾನ ಮಾಡಲು ಮತ್ತು ಈಜಲು ಕೆಳಗೆ ಇಳಿಯಬಹುದಿತ್ತು. ಶಿವರಾತ್ರಿಯಂದು ಇಲ್ಲಿ ಸುಮಾರು ಸಾವಿರಕ್ಕೂ ಹೆಚ್ಚು ಮಿರ್ಲೆಯವರು ಸ್ನಾನ ಮಾಡುತ್ತಿದ್ದರು. ನದಿಯಲ್ಲಿ ಮೊಸಳೆಗಳಿದ್ದವು. ಶ್ರಾವಣದಲ್ಲಿ ಹೊಳೆ ಸಣ್ಣ ಮಠದ ಬಾಗಿಲವರೆವಿಗೂ ತುಂಬಿ ಹರಿಯುತ್ತದೆ. ಸ್ವಲ್ಪ ಎಡಕ್ಕೆ ಗರಗಸದಿಂದ ಕೊಯ್ದಿಟ್ಟಂತಹ ಸಣ್ಣ ಕಲ್ಲುಬಂಡೆಗಳ ಸಾಲು ಅಕ್ಟೋಬರ್-ನವೆಂಬರ್

ತಿಂಗಳುಗಳಲ್ಲಿ ಹೊಳೆಯ ಆ ಕಡೆಯಿಂದ ಹಸಿರು ಹುಲ್ಲು ಕೊಯ್ದು ತರುವವರಿಗೆ ಎದೆಮಟ್ಟ ನೀರನ್ನು ದಾಟಲು ಅನುಕೂಲವಾಗಿತ್ತು. ಆ ಕಲ್ಲು ಸಾಲಿನ ಪಕ್ಕದಲ್ಲೆ ಒಂದು ಮಡುವಿನಲ್ಲಿ ಮೀನು ಹಿಡಿಯುತ್ತಿದ್ದರು. ಒಮ್ಮೆ ಮಿರ್ಲೆಯವರೊಬ್ಬರು (ಹೆಸರು ಜ್ಞಾಪಕವಿಲ್ಲ, ಮಡಕೆ ಬೋರಣ್ಣನವರ ಮಗ ಇರಬೇಕು) ಮೀನು ಹಿಡಿಯಲು ಕೈಬಾಂಬ್ ಸಿಡಿಸಿ ತಮ್ಮ ಮುಂಗೈ ಕಳೆದುಕೊಂಡಿದ್ದರು. ನದಿಯ ಈ ಕಡೆಯ ದಂಡೆಯಲ್ಲಿ ಅಕ್ಕಪಕ್ಕಕ್ಕೆ ದಟ್ಟವಾದ ಕಾಡಿತ್ತು ಮತ್ತು ಅದರಲ್ಲಿ ನೇರಳೆ ಹಾಗೂ ಅತ್ತಿ ಹಣ್ಣು ಹೇರಳವಾಗಿ ದೊರೆಯುತ್ತಿದ್ದವು. ಇತ್ತೀಚಿನ ವರ್ಷಗಳಲ್ಲಿ ಈ ಮಠದ ಪಕ್ಕದಲ್ಲೇ ಮಿರ್ಲೆಯ ಕುಡಿಯುವ ನೀರಿನ ಯೋಜನೆಯ ಭಾಗವಾಗಿ ಒಂದು ಬಾವಿ ನಿರ್ಮಿಸಿ, ಮೋಟಾರ್ ಇಟ್ಟು, ಅದಕ್ಕೆ ವಿಧ್ಯುಚ್ಛಕ್ತಿ ಸರಬರಾಜಿನ ವ್ಯವಸ್ಥೆ ಇದೆ. ಇಲ್ಲಿಂದ ಸುಮಾರು ಒಂದು ಕಿಲೋಮೀಟರ್ ಮುಂದೆ ನದಿ ಬಲಕ್ಕೆ ಲಂಭವಾಗಿ ಹೊರಳುವಾಗ ಮರಳು ರಾಶಿಗಳನ್ನು ಸೃಷ್ಟಿಸಿ ವಿಶಾಲವಾಗಿ ಹರಿಯುತ್ತದೆ. ***ತಡಕಡ*** ಎನ್ನುತ್ತಿದ್ದ ಈ ತಿರುವಿನ ಸ್ಥಳದಲ್ಲಿ ಬೇಸಿಗೆಯಲ್ಲಿ ಎತ್ತಿನ ಗಾಡಿಗಳು ಮರಳ ರಾಶಿಗಳ ಮೇಲೆ ಸಾಗಿ ನದಿಯನ್ನು ದಾಟಿ ನದಿಯ ಆಚೆನ ಊರುಗಳಿಗೆ ಹೋಗುತ್ತಿದ್ದ ರೂಢಿಯಿತ್ತು.

ಅಧ್ಯಾಯ 8 ರಲ್ಲಿ *ಪ್ರವಾಸೀ ತಾಣಗಳಾಗುವ ಸಾಧ್ಯತೆಗಳಿದ್ದ ಕಾವೇರಿ ತೀರ, ಸಣ್ಣ ಮಠ ಮತ್ತು ತಡಕಡ ನೋಡಿ.*

# 5

# *ಧಾರ್ಮಿಕ ಕೇಂದ್ರಗಳು/ ದೇವಸ್ಥಾನಗಳು*

ಸಾವಿರ ವರ್ಷಗಳಿಗೂ ಮಿಗಿಲಾದ ಇತಿಹಾಸ ವಿರುವ ಮಿರ್ಲೆ ಮೂಲತಃ ಹಿಂದೂ ದೇವಸ್ಥಾನಗಳ ಮತ್ತು ಬ್ರಾಹ್ಮಣರ ಊರು. ಮುಸಲ್ಮಾನರ ಮಸೀದಿಯೊಂದನ್ನು ಉಳಿದಂತೆ ಮಿರ್ಲೆಯಲ್ಲಿ ಯಾವುದೇ ಇತರ (ಜೈನ, ವೀರಶೈವ, ಬೌದ್ಧ, ಕ್ರಿಶ್ಚಿಯನ್) ಧಾರ್ಮಿಕ ಕೇಂದ್ರಗಳಿಲ್ಲ, ಮಠಗಳ ಶಾಖೆಗಳಿಲ್ಲ. ಮಿರ್ಲೆಯಲ್ಲಿ, ಗೆಜೆಟಿಯರ್ ಗುರುತಿಸಿರುವಂತೆ, 8 ದೇವಸ್ಥಾನಗಳಲ್ಲದೆ ಮೂರು ಇತರ ಗ್ರಾಮದೇವತೆಗಳ ಗುಡಿಗಳೂ ಇವೆ.

1. *ಕೋದಂಡರಾಮ ದೇವಸ್ಥಾನ*
2. *ಚನ್ನಕೇಶವ/ ಚನ್ನಿಗರಾಯ ದೇವಸ್ಥಾನ*
3. ಹನುಮಂತರಾಯ/ ಆಂಜನೇಯಸ್ವಾಮಿ ದೇವಸ್ಥಾನ
4. *ಯೋಗಾನರಸಿಂಹ ದೇವಸ್ಥಾನ*
5. *ಅಮೃತೇಶ್ವರ ದೇವಸ್ಥಾನ*
6. *ಈಶ್ವರ ( ವಿರೂಪಾಕ್ಷೇಶ್ವರ/* ಅರ್ಕೇಶ್ವರ) *ದೇವಸ್ಥಾನ*
7. *ಕಾವೇರಿ ತೀರದ ಸಣ್ಣಮಠ (ಸಂಧ್ಯಾವಂದನ ಮಂಟಪ) ಮತ್ತು ಈಶ್ವರ ದೇವಸ್ಥಾನ*
8. *ಬಸವಣ್ಣನ ಗುಡಿ*
9. *ಹುಣಸಮ್ಮನ ಗುಡಿ*
10. *ಹಿರಿಯಣ್ಣನ ಗುಡಿ*
11. *ಮಾರಿಗುಡಿ*

ಹೊಸ ಚಾಮರಾಜ ನಾಲೆ ಬಂದಾಗ (1903) 13ನೇ ಶತಮಾನದ ಅಮೃತೇಶ್ವರ ದೇವಸ್ಥಾನವನ್ನು ಗದ್ದೆ ಬಯಲಿನಲ್ಲಿ ಪಾಳುಬಿಟ್ಟು ಊರು ಸ್ಥಳಾಂತರಗೊಂಡಿತು.  1980ರ ದಶಕದಲ್ಲಿ ಫುರಾತತ್ವ ಶಾಸ್ತ್ರ ಮತ್ತು ವಸ್ತು ಸಂಗ್ರಹಾಲಯಗಳ ನಿರ್ದೇಶಕರಾಗಿದ್ದ ಮಿರ್ಲೆಯವರೇ ಆದ ***ಡಾ. ಎಂ. ಎಸ್. ನಾಗರಾಜರಾವ್*** ಅವರ ನೇತೃತ್ವದಲ್ಲಿ ಮಿರ್ಲೆಯ

ಕೊಪ್ಪಲಿನ ಎತ್ತರವಾದ ಸ್ಥಳಕ್ಕೆ ಕ್ರಮ ಬದ್ಧವಾಗಿ ಸ್ಥಳಾಂತರಿಸಲಾಯಿತು. ಈಗ ಈ ದೇವಸ್ಥಾನದಲ್ಲಿ ನಿತ್ಯ ಪೂಜೆಗೆ ವ್ಯವಸ್ಥೆ ಕಲ್ಪಿಸಲಾಗಿದೆ. ಆದರೆ ಶತಮಾನಗಳ ಕಾಲ ಊರೊಳಗೆ ಇದ್ದು ಪೂಜೆಗೊಳ್ಳುತ್ತಿದ್ದ ಕೋದಂಡರಾಮ, ಹನುಮಂತರಾಯ, ಚನ್ನಕೇಶವ, ಬಸವ, ಮತ್ತು ಈಶ್ವರ ದೇವಸ್ಥಾನಗಳಲ್ಲಿ ನಿತ್ಯ ಪೂಜೆ ಕ್ರಮಬದ್ಧವಾಗಿದ್ದಂತಿಲ್ಲ.

ಕೆಲವು ದೇವಸ್ಥಾನಗಳನ್ನು ಕಾಂಕ್ರೀಟ್ನಿಂದ ಮರುಸೃಷ್ಠಿಸಲಾಗಿರುವುದರಿಂದ ಇತ್ತೀಚಿನ ಚಿತ್ರಗಳಲ್ಲಿ ಮೂಲ ವಿನ್ಯಾಸವನ್ನು ಕಲ್ಪಿಸಿಕೊಳ್ಳುವುದೂ ಕಠಿಣವಾಗಿದೆ. ಮತ್ತೆ ಕೆಲವು ಬಣ್ಣ-ಸುಣ್ಣ ಬಳಿದಿರುವುರಿಂದ ತೀರ ಭಿನ್ನವಾಗಿಯೇ ಕಾಣುತ್ತವೆ.




1. **ಕೋದಂಡರಾಮ ದೇವಸ್ಥಾನ:**

ವಿಜಯನಗರ (ಆರಂಭ ಕಾಲದ) ಶೈಲಿಯಲ್ಲಿ ನಿರ್ಮಿಸಿದ ಕೋದಂಡರಾಮ ದೇವಸ್ಥಾನದ ನವರಂಗಮಂಟಪದ ಮಾಳಿಗೆಯಲ್ಲಿರುವ ಕೆತ್ತನೆಯಲ್ಲಿ ಕ್ರಿ. ಶ. 1219 ಎಂದು ತಿಳಿಸಲಾಗಿದೆ. ಬಾಗಿಲ ಬಳಿಯ ಕಂಬದ ಮೇಲಿನ 12ನೇ ಶತಮಾನದ ಕೆತ್ತನೆಯಂತೆ ***ಅಧಿಕಾರಿ ಬೀರಯ್ಯನ ಸಾವು ಮತ್ತು ಸಂಸ್ಕಾರ ಜೈನ ಧರ್ಮದ ರೀತಿ ನಡೆಯಿತು*** ಎಂದು ತಿಳಿಸುತ್ತದೆ. ಹದಿನೈದನೇ ಶತಮಾನದಲ್ಲಿ ಈ ಆಸ್ಥಿಯನ್ನು (ಮನೆ, ತರಿ ಮತ್ತು ಕುಷ್ಕಿ ಜಮೀನುಗಳನ್ನು) ಶೃಂಗೇರಿಯ ನರಸಿಂಹಭಾರತಿಯವರ ಶಿಷ್ಯ ಭಾರತೀಪುರದ ಚಿಕ್ಕಧೀಕ್ಷಿತ ಎಂಬುವರಿಗೆ ಮಾರಲಾಯಿತು ಎಂಬ ಶಾಸನವಿದೆ. ಈ ಕೋದಂಡರಾಮ ದೇವಸ್ಥಾನದ ಅರ್ಚಕರಾದ ಶೇಷಭಟ್ಟರಿಗೆ 120 ವರ್ಷಗಳ ಹಿಂದೆ (1893 ರಲ್ಲಿ) 1 ರೂಪಾಯಿ, 7 ಆಣೆ ಮತ್ತು 4 ಕಾಸು ಪಡಿತರ ನಿರ್ಧರಿಸಲಾಗಿತ್ತು ಎಂಬುದು ಕುತೂಹಲದ ಮಾಹಿತಿ. ಈ ಅಧಿಕಾರಿ ಪುಮಾಂದ ಯಾರು? ಭಾರತೀಪುರದ ಚಿಕ್ಕಧೀಕ್ಷಿತ ಯಾರು? ಶೇಷಭಟ್ಟರ ಮುಂದಿನ ಪೀಳಿಗೆ ಮಿರ್ಲೆಯಲ್ಲಿ ಇದೆಯೆ? ಇತ್ಯಾದಿ ಪ್ರಶ್ನೆಗಳು ಹಾಗೇ ಉಳಿದಿವೆ. ಅಲ್ಲದೆ ಇದೇ ಹೊಯ್ಸಳರ ಕಾಲದಲ್ಲಿ

(ಅಂದರೆ 11 ರಿಂದ 14 ನೇ ಶತಮಾನದ ಅವಧಿಯಲ್ಲಿ) ಮಿರ್ಲೆಯಲ್ಲಿ ಚನ್ನಿಗರಾಯ, ಯೋಗಾನರಸಿಂಹ ಮತ್ತು ಅಮೃತೇಶ್ವರ ದೇವಸ್ಥಾನಗಳೂ ನಿರ್ಮಾಣವಾದುವು

ಹೊಯ್ಸಳರ ಆಳ್ವಿಕೆಯ ಕ್ರಿ. ಶ. 1219ರಲ್ಲಿ ನಿರ್ಮಿಸಿದ ಕೋದಂಡರಾಮ ದೇವಸ್ಥಾನ ಸುಮಾರು 800 ವರ್ಷ ಸಧೃಡವಾಗಿಯೇ ಉಳಿದಿರುವುದು ಸೋಜಿಗವೇ ಸರಿ. ಆದರೂ ಮೂಲ ಕಲ್ಲಿನ ಕಟ್ಟಡದ ವಿನ್ಯಾಸ ಇತ್ತೀಚಿನ ದಿನಗಳಲ್ಲಿ ವಿವಿಧ ಬಣ್ಣ ಬಳೆದು ಕೊಂಡು ಮೇಲ್ನೋಟಕ್ಕೆ ಒಂದು ರಾಮಮಂದಿರದಂತೆ ಭಾಸವಾಗುತ್ತದೆ. ಕೋದಂಡರಾಮ ದೇವಸ್ಥಾನ ನೆನೆದಾಗಲೆಲ್ಲಾ ಮಕ್ಕಳಲ್ಲಿ ಮಕ್ಕಳಾಗಿ ಬೆರೆತು ದೇವಸ್ಥಾನದ ಆವರಣದಲ್ಲೇ ಕಬ್ಬಡ್ಡಿ, ಫುಟ್ ಬಾಲ್ ಆಟವಾಡುತ್ತಲಿದ್ದ ದೇವಸ್ಥಾನದ ಅರ್ಚಕ ಅಂದಿನ ಉತ್ಸಾಹಿ ಯುವಕ ಹಾಗೂ ಮಗುವಿನ ಮನಸ್ಸಿನ ಅನಂತರಾಮ ಭಟ್ಟರು ಗಾಢವಾಗಿ ಜ್ಞಾಪಕಕ್ಕೆ ಬರುತ್ತಾರೆ. ನನ್ನ ಬಾಲ್ಯದಲ್ಲಿ (1950 ಮತ್ತು 60ರ ದಶಕ), ಮಿರ್ಲೆ ದೇವಸ್ಥಾನಗಳ ಪೈಕಿ ಕೋದಂಡರಾಮ ದೇವಸ್ಥಾನ ಪ್ರಮುಖವೆನಿಸಿ ವಿವಿಧ ಪೂಜೆ ಮತ್ತು ಉತ್ಸವಗಳ ಕೇಂದ್ರವೆನಿಸಿತ್ತು. ದಿನನಿತ್ಯದ ಉದಯಕಾಲ ಮತ್ತು ಸೂರ್ಯಾಸ್ತಮ ಪೂಜೆಗಳಲ್ಲದೆ, ಮಾಘಮಾಸದ ವಿಶೇಷ ನಸುಕಿನ ಪೂಜೆ-ಉತ್ಸವ, ವಾರ್ಷಿಕ ಸಹಸ್ರ ದೀಪೋತ್ಸವ (ಕಾರ್ತಿಕ ಮಾಸದ ರಾತ್ರಿಯ ಎಳ್ಳಿನ ಉಂಡೆ ದೀಪಗಳ ಉತ್ಸವ), ಮೂರು-ನಾಲ್ಕು ದಿನಗಳ ವಾರ್ಷಿಕ ರಥೋತ್ಸವಕ್ಕೆ ಮುನ್ನಾದಿನಗಳ ಸೀತಾರಾಮ ಕಲ್ಯಾಣೋತ್ಸವ, ಜಾತ್ರೆ-ರಥೋತ್ಸವ, ರಾಮನವಮಿ ಉತ್ಸವ ಮತ್ತು ಕೆರೆಯಲ್ಲಿ ರಾತ್ರಿ ವೇಳೆ ತೆಪ್ಪೋತ್ಸವವನ್ನು ಭಕ್ತಿ, ಶ್ರಧ್ಧೆ ಮತ್ತು ವಿಜೃಂಬಣೆಯಿಂದ ಕ್ರಮಬದ್ಧವಾಗಿ ಆಚರಿಸಲಾಗುತ್ತಿತ್ತು. ಅದು ಸ್ವಲ್ಪಮಟ್ಟಿಗಾದರೂ ಈಗಲೂ ಮುಂದುವರೆದಿದೆ. ದೇವಸ್ಥಾನದ ಸಂರಕ್ಷಣೆಯ ಧೃಷ್ಟಿಯಿಂದ ದೇವಸ್ಥಾನದ ಆವರಣದೊಳಗೆ ತೆಂಗಿನಮರಗಳನ್ನು ಬೆಳೆಸುವುದು ಸುರಕ್ಷಿತವೆ?

***ಜಾನಪದ ಸಂಗ್ರಹಯೋಗ್ಯ ವಾರ್ಷಿಕ ರಥೋತ್ಸವದ ಗತವೈಭದ ಕುರುಹು ಈ ಶಿಥಿಲ ಕೋದಂಡರಾಮ ರಥ:*** ಜಾನಪದ ಸಂಗ್ರಹಾಲಯದಲ್ಲಿರಬೇಕಾದ ಈ ಕೋದಂಡರಾಮ ದೇವರ ರಥ, ಬೀದಿಯಲ್ಲಿ ಹೀಗೆ ರಥದ ಚಕ್ರಗಳು ಮತ್ತು

ಮಧ್ಯಭಾಗವನ್ನು ಕಳೆದುಕೊಂಡು ಶಿರಭಾಗ ಮಾತ್ರ ಉಳಿದು ನಶಿಸುತ್ತಿದೆ! ಒಂದು ಕಾಲಕ್ಕೆ ವೈಭವಯುತ ವಾರ್ಷಿಕ ರಥೋತ್ಸವದಲ್ಲಿ ಭಾಗಿಯಾದ ಈ ರಥ ಜನಪದ ಮತ್ತು ಇತಿಹಾಸ ತಜ್ಞರ/ ವಿಧ್ಯಾರ್ಥಿಗಳ ಅಧ್ಯಯನಕ್ಕೆ ಯೋಗ್ಯವಾದದ್ದಾಗಿತ್ತಲ್ಲವೆ? ಈಗ ಶಿಥಿಲಗೊಂಡು ನಶಿಸುತ್ತಿರುವ ಕೋದಂಡರಾಮ ದೇವರ ರಥ ನೂರಾರು ವರ್ಷ ಹಳೆಯದಿರಲಾರದು. ರಥದ ಯಾವುದಾದರೂ ಭಾಗದಲ್ಲಿ ಅದನ್ನು ನಿರ್ಮಿಸಿದ ವರ್ಷ ಕೆತ್ತಿದ್ದರೆ ಎಂಬುದೊಂದು ಅನುಮಾನ. ಒಟ್ಟಿನಲ್ಲಿ ಫೋಟೋದಲ್ಲಿನ ಈ *ಶಿಥಿಲ ರಥ ವಾರ್ಷಿಕ ರಥೋತ್ಸವದ ಗತವೈಭದ ಕುರುಹಾಗಿ ಜಾನಪದ ಸಂಗ್ರಹಯೋಗ್ಯ* ಮತ್ತು ಇತಿಹಾಸ ಅಧ್ಯಯನ ಯೋಗ್ಯವಾಗಿದೆ. ರಥೋತ್ಸವದ ರಥ ನಶಿಸಿಹೋಗುತ್ತಿದ್ದಂತೆ ಪರ್ಯಾಯವಾಗಿ ಒಂದು ಸಾಧಾರಣ ರಥ ಬಳಸಲಾಗುತ್ತಿದೆ ಎಂದು ತಿಳಿಯಿತು.


ಶಿಥಿಲ ಕೋದಂಡರಾಮ ರಥ

## 2. **ಚನ್ನಕೇಶವ/ ಚನ್ನಿಗರಾಯ ದೇವಸ್ಥಾನ:**

ಹೊಯ್ಸಳರು ಕಟ್ಟಿಸಿದ ಚನ್ನಕೇಶವ ದೇವಸ್ಥಾನವನ್ನು 15ನೇ ಶತಮಾನದಲ್ಲಿ ಚಂಗಾಳ್ವರು ಜೀರ್ಣೋದ್ಧಾರ ಮಾಡಿದರು ಎಂಬ ಮಾಸಿದ ಶಾಸನವಿದೆ. ಗರ್ಭಗುಡಿಯ ಗೋಡೆಯೊಂದಿಗೆ ಕೂಡಿಸಿರುವ ಹೊಯ್ಸಳ ಮಾದರಿಯ ಚೌಕ ಸ್ಥಂಭಗಳಿವೆ (pilasters). ಅಲ್ಲದೆ ಅರ್ಧಮಂಟಪ, ನವರಂಗ ಮತ್ತು ಮುಖಮಂಟಪಗಳಿದ್ದು, ಒಂದು ಮೀಟರ್ ಎತ್ತರದ ನಾಲ್ಕು ಕೈಗಳ ಚನ್ನಕೇಶವ ವಿಗ್ರಹವಿದೆ. ಇಷ್ಟೆಲ್ಲಾ ಇದ್ದೂ ಇಲ್ಲಿ ಜೈನ ಬಸದಿಗಳಿದ್ದುವೆ ಎಂಬ ಅನುಮಾನವಿದೆ. ಹಲವಾರು ಕಾರಣಗಳಿಂದ ಇಲ್ಲಿ ಮತ್ತು ಇದರ ಹಿಂದೆ ಇರುವ ಹನುಮಂತರಾಯನ ದೇವಸ್ಥಾನ ವಿದ್ದೆಡೆ ಮೂಲದಲ್ಲಿ ಜೈನ ಬಸದಿಗಳಿದ್ದರಬಹುದೆಂದು ಊಹೆಮಾಡಲಡ್ಡಿಯಿಲ್ಲ. ಯಾವುದೆ official ಉತ್ಕನನ ಅಥವ ಸಂಶೋಧನೆ ನಡೆದಿಲ್ಲವಾಗಿ ನಿಖರ ಮಾಹಿತಿಯ ಕೊರತೆ ಇದೆ. ಈ ದೇವಸ್ಥಾನವನ್ನು ರಿಪೇರಿ ಮಾಡಿ 1960ರ ಸುಮಾರಿಗೆ ಪ್ರಾರಂಬೋತ್ಸವ ಮಾಡಲಾಯಿತು. ಅದಕ್ಕಿಂತ ಸ್ವಲ್ಪ ಮುಂಚೆ ಈ

ದೇವಸ್ಥಾನದ ಪಕ್ಕದ ಜಾಗದಲ್ಲಿ ಅಡಿಪಾಯ ತೆಗೆಯುವಾಗ ಒಂದು ಜಿನ ವಿಗ್ರಹ ದೊರಕಿದ್ದು, ಅದನ್ನು ದೇವಸ್ಥಾನದಲ್ಲಿಯೇ ಇಡಲಾಯಿತು. ಸಾಮಾನ್ಯವಾಗಿ ಹಿಂದು ದೇವಾಲಯಗಳು ಪೂರ್ವಾಭಿಮಖವಾಗಿರುತ್ತವೆ. ಆದರೆ ಈ ದೇವಸ್ಥಾನ ಉತ್ತರಾಭಿಮುಖವಾಗಿದೆ. ಹಾಗೆಯೇ ಹಿಂದಿರುವ ಹನುಮಂತರಾಯನ ಗುಡಿ ದಕ್ಷಿಣಾಭಿಮುಖವಾಗಿದ್ದು, ಈ ಎರಡೂ ದೆವಸ್ಥಾನಗಳಿಗೆ ಸರಿಪ್ರಮಾಣದ ಗರ್ಭಗುಡಿ ಗೋಪುರಗಳಿದ್ದಂತಿಲ್ಲ ಮತ್ತು ಹೊರನೋಟಕ್ಕೆ ಒಟ್ಟಾರೆ ವಾಸ್ತು ಶಿಲ್ಪ ಹಿಂದೂ ದೇವಾಲಯಗಳಂತಿಲ್ಲ ಎನ್ನಿಸುತ್ತದೆ. ಜೊತೆಗೆ ಕೋದಂಡರಾಮ ದೇವಸ್ಥಾನದ ಬಾಗಿಲ ಬಳಿಯ ಕಂಬದ ಮೇಲಿನ 12ನೇ ಶತಮಾನದ ಕೆತ್ತನೆಯಂತೆ ಅಧಿಕಾರಿ ಬೀರಯ್ಯನ ಸಾವು ಮತ್ತು ಸಂಸ್ಕಾರ ಜೈನ ಧರ್ಮದ ರೀತಿ ನಡೆಯಿತು ಎಂದು ತಿಳಿಸಿರುವುದು ಜೈನರು ಮಿರ್ಲೆಯಲ್ಲಿದ್ದರು ಎಂದು ಸೂಚಿಸುತ್ತದೆ.


ಚನ್ನಿಗರಾಯ ದೇವಸ್ಥಾನ


ಚನ್ನಿಗರಾಯ ಮತ್ತು ಹನುಮಂತರಾಯ ದೇವಸ್ಥಾನಗಳ ನಡುವಿನ ಮದುವೆ ಮಂಟಪ

ಚನ್ನಿಗರಾಯ ದೇವಸ್ಥಾನ ರಿಪೇರಿ ಮಾಡಿದಾಗ ಸಿಮೆಂಟಿನ ಕಿಟಕಿಗಳನ್ನುಇಟಿದ್ದು ಈಗಲೂ ಹಾಗೇ ಇದೆ. ಶ್ರೀ ರವಿಶಂಕರ್ ಅವರು ಈ ಹಿಂದೆ ಕುಪ್ಪೆಭಾರೆಯಲ್ಲಿಯೂ ಅಡಿಪಾಯ ತೆಗೆಯುವಾಗ ಜೈನ ಬಸದಿಯ ಪಳಯುಳಿಕೆ ದೊರಕಿತ್ತು ಎಂದು ತಿಳಿಸಿದ್ದಾರೆ. ಹೀಗಾಗಿ ಕೆರೆಯ ಪಕ್ಕದಲ್ಲಿ ಮತ್ತು ಕುಪ್ಪೇ ಭಾರೆಯಲ್ಲಿ ಜೈನರ ವಾಸ್ತವ್ಯ ಮತ್ತು ಬಸದಿ ಇದ್ದಿರಬೇಕು ಎನಿಸುತ್ತದೆ.

---

**ರವಿಶಂಕರ್: ಮಿರ್ಲೆಯಲ್ಲಿ ಜೈನರು** ವಾಸವಿದ್ದಿದ್ದಕ್ಕೆ ಸಾಕ್ಸಿಯಾಗಿ ಒಂದು ಬಸದಿ ಸಿಕ್ಕಿತ್ತು. ಅದರ ಅವಶೇಷಗಳು ಇನ್ನೂ ಅಲ್ಲಿದೆ. **ಕುಪ್ಪೆ ಬೋರೆಯಲ್ಲಿ** ಹೀಗೆ ಊರಾಗಿ ಬೆಳೆಯುವ ಮೊದಲು ಒಂದು ದಿಬ್ಬ ittu. ಅದರ ಮೇಲೆ ಸಣ್ಣ ಇಟ್ಟಿಗೆ ಚೂರುಗಳು iddavu. ಅದೊಂದು ಸಹಜವಾಗಿ ಅದ ಪ್ರಾಕೃತಿಕ

ದಿಬ್ಬದಂತೆ ನಾವೆಲ್ಲ ಬಾವಿಸಿದ್ದೆವು. ಆದರೆ ಮನೆ ಕಟ್ಟಲು todidaaga. ಬಸದಿಯ ಅವಶೇಷ ಗಳು. ಅಲ್ಲಿ doretavu. ಕಲ್ಲು cappadi. ಅಗಲವಾದ ಇಟ್ಟಿಗೆ ಗಳು ಕಲ್ಲು kambagalu. ಲೋಹದ ಪದಾರ್ಥಗಳು ಮತ್ತು ದೊಡ್ಡ ಗಾತ್ರದ ಪಾಣಿಪೀಠ ಅಲ್ಲಿ ittu. ಇಟ್ಟಿಗೆ ಕಲ್ಲು ಗಳು ಅಕ್ಕ ಪಕ್ಕದ ಮನೆ ಕಟ್ಟಡಕ್ಕೆ ಬಳಕೆ ಆಗಿದೆ. ಈಗಲೂ ಪಾಣಿಪೀಠ allide. ಪಾಣಿಪೀಠ ದ ಮುಂಬದಿಯಲ್ಲಿ ಐದು ಸಿಂಹಗಳ ಉಬ್ಬು ಕೆತ್ತನೆ ಇದೆ.

---------------------------------------------------------------------------

***ಪಾಳುಬಿದ್ದ ಮದುವೆ ಮಂಟಪ***

ಚನ್ನಕೇಶವ ದೇವಸ್ಥಾನ ಮತ್ತು ಹನುಮಂತರಾಯ ದೇವಸ್ಥಾನಗಳ ಮದ್ಯದಲ್ಲಿ ಒಂದೇ ಕಾಂಪೌಡಿನಲ್ಲಿ ಒಂದು ಮಂಟಪವಿದೆ (ಚಿತ್ರದಲ್ಲಿ ಈಗ ಈ ಪಾಳು ಬಿದ್ದದೆ). ಬಹಳ ಹಿಂದೆ ಈ ಮಂಟಪದಲ್ಲಿ (ಪಕ್ಕದಲ್ಲೆ ಕಾಂಪೌಡ್ ಒಳಗೇ ಇದ್ದ ಅಥವ ಹೊಸದಾಗಿ ನಿರ್ಮಿಸಿದ್ದ ಒಂದು ವಿಶಾಲವಾದ ಶೆಡ್ ಬಳಸಿ) ಮದುವೆಗಳನ್ನು ನಡೆಸುತ್ತಿದ್ದಂತೆ ಜ್ಞಾಪಕ. ಆ ಶೆಡ್ ನ್ನು ೬೦ರ ದಶಕದಲ್ಲಿ ಮಹಿಳಾ ಸಮಾಜ ಮತ್ತು ಶಿಶುವಿಹಾರಕ್ಕಾಗಿಯೂ ಬಳಸಲಾಗಿತ್ತು.




## 3. **ಹನುಮಂತರಾಯ/ ಆಂಜನೇಯಸ್ವಾಮಿ ದೇವಸ್ಥಾನ**

ಯುಗಾದಿಯ ನಂತರದ ಬೆಸಿಗೆ ದಿನಗಳಲ್ಲಿ ಮಳೆಯನ್ನು ಬೇಡಿ ಒಂದು ದಿನದ ಹನುಂತರಾಯನ ಹರಿಸೇವೆ ಆಚರಿಸಲಾಗುತ್ತದೆ. ಊರಿನ ವಿವಿದ ಪ್ರದೇಶಗಳ ನಾಲ್ಕಾರು ಗುಂಪುಗಳಲ್ಲಿ ಗಂಡಸರು ಮತ್ತು ಮಕ್ಕಳು ಸೇರಿ ಪಕ್ಕದಲ್ಲೇ ಅಡುಗೆ ಮಾಡಿ ಕೆರೆಯ ಬಳಿ ಊಟ (ಪ್ರಸಾದ) ಮಾಡುತ್ತಾರೆ.



## **4. ಯೋಗಾನರಸಿಂಹ ದೇವಸ್ಥಾನ**

ಹೊಯ್ಸಳರ ಕಾಲದಲ್ಲಿ ಯೋಗಾನರಸಿಂಹಸ್ವಾಮಿ ದೇವಸ್ಥಾನವನ್ನು ಸಂಪೂರ್ಣ ಜೀರ್ಣೋದ್ದಾರ

ಮಾಡಲಾಯಿತು. ಕೋದಂಡರಾಮ ದೇವಸ್ಥಾನದ ಸೀಲಿಂಗ್ ನಲ್ಲಿ ನರಸಿಂಹ ದೇವರು ಎಂದು ಬರೆದಿರುವುದು ಈ ದೇವಸ್ಥಾನದ ಬಗ್ಗೆ ಇರಬಹುದು ಎನ್ನಲಾಗಿದೆ. ಕ್ರಿ. ಶ. 1299ರಲ್ಲಿ ಬಲ್ಲಿಯ ದಣ್ಣಾಯಕನ ಅಧಿಕಾರಿ ಪುಮಾಂದ ದೇವಸ್ಥಾನಕ್ಕೆ ಧತ್ತಿ ನೀಡಿದ ಉಲ್ಲೇಖವಿದೆ. ಇದರಲ್ಲೇ ಮಿರ್ಲೆಯನ್ನು 'ದಕ್ಷಿಣ ಅಯ್ಯವಳೆ' ಎಂದು ಕರೆದು ಮಿರ್ಲೆಯ ವಾಣಿಜ್ಯ ಪ್ರಾಮುಖ್ಯತೆಯನ್ನು ಶ್ಲಾಘಿಸಿದೆ. ಹೊರಭಾಗವನ್ನು ಇತ್ತೀಚೆಗೆ ಮತ್ತೆ ಜೀರ್ಣೋದ್ಧಾರ ಮಾಡಲಾಗಿದೆ. ಇದನ್ನು ಸಂರಕ್ಷಿತ ಪಾಚೀನ ಪ್ರದೇಶವೆಂದು ಗೋಷಿಸಿ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ಇಲಾಖೆಯ ಸುಪರ್ದಿನಲ್ಲಿ ಇಡಲಾಗಿದೆ. ಇದನ್ನು ಶ್ರೀ ರಾಮಾನುಜಾಚಾರ್ಯರು ಮಿರ್ಲೆಗೆ ಬೇಠಿ ನೀಡಿ ಸಾಲಿಗ್ರಾಮದಲ್ಲಿ ಕೆಲವು ಕಾಲ ತಂಗಿದ್ದಾಗ ಕಟ್ಟಿಸಲಾಯಿತೆ ಎಂದು ಸಂಶೋಧಿಸಬೇಕಿದೆ.




## 5. ಅಮೃತೇಶ್ವರ ದೇವಸ್ಥಾನ:

ಇದು 13ನೇ ಶತಮಾನದ ದೇವಸ್ಥಾನ. ಇಲ್ಲಿ 'ಸುಂಕದ ಹಸಾಡ್ಯಯ್ಯನವರ ಸೊಸೆ ಬನ್ದವಾಲೆ ದಾನವಾಗಿ ನೀಡಿದ ದೀವಿಗೆ' ಎಂಬ 17ನೇ ಶತಮಾನದ ಶಾಸನವಿದೆ. ಪುರಾತತ್ವ ಶಾಸ್ತ್ರ ಮತ್ತು ವಸ್ತು ಸಂಗ್ರಹಾಲಯಗಳ ನಿರ್ದೇಶಕರಾಗಿದ್ದ ***ಡಾ. ಎಂ. ಎಸ್. ನಾಗರಾಜರಾವ್*** ಅವರ ಮಾರ್ಗದರ್ಶನದಲ್ಲಿ ಶ್ರೀ ಸಿದ್ದರಾಮೇಗೌಡರ ಕುಟುಂಬ ***ಶ್ರೀಮತಿ ರಾಮಮ್ಮ*** ಅವರ ಅರ್ಥಿಕ ನೆರವಿನೊಂದಿಗೆ ಗದ್ದೆ ಬಯಲಿನಲ್ಲಿ ಪಾಳುಬಿದ್ದಿದ್ದ ದೇವಸ್ಥಾನವನ್ನು ಊರಿನೊಳಕ್ಕೆ (ಕೊಪ್ಪಲಿನ ಪ್ರೌಡಶಾಲೆ ಎದುರಿನ ಪ್ರದೇಶಕ್ಕೆ) ಕ್ರಮಬದ್ಧವಾಗಿ ಸ್ಥಳಾಂತರಿಸಲಾಯಿತು. ಈ ಬಗ್ಗೆ The Hindu ಪತ್ರಿಕೆಯಲ್ಲಿ 1980ರ ದಶಕದಲ್ಲಿ ಸುಚಿತ್ರ-ಸುದೀರ್ಘ ಲೇಖನ ಪ್ರಕಟವಾಯಿತು. Arcaheology, Museums and Heritage Department ಇಲಾಖೆಯ ಸೂಚಿಯೊಂದರಲ್ಲಿ, ಅಂದರೆ ಸರ್ಕಾರೀ ಕಡತದಲ್ಲಿ ಮಿರ್ಲೆ ಅಮೃತೇಶ್ವರ ದೇವಸ್ಥಾನ ಪಕ್ಕದ ಹಳ್ಳಿಯೊಂದರಲ್ಲಿ ಕಾವೇರಿ ಹಿನ್ನೀರಿನಲ್ಲಿ ಇನ್ನೇನು ಮುಳುಗಡೆಯಾಗುವುದರಲ್ಲಿದ್ದದ್ದರಿಂದ ಸ್ಥಳಾಂತರಿಸಲಾಯಿತು ಎಂದು ಹೇಳಿ ಈ ಫೋಟೊ ಕೊಡಲಾಗಿದೆ. ಇದು ಅಮೃತೇಶ್ವರ ದೇವಸ್ಥಾನವೆ? ಬಹುಶಃ ಈ ಫೋಟೊ ಮೂಲ ಗದ್ದೆ

ಬಯಲಿನಲ್ಲಿದ್ದ ದೇವಸ್ಥಾನದ್ದಾಗಲಿ ಅಥವ ಕೊಪ್ಪಲಿಗೆ ಸ್ಥಳಾಂತರಿಸಿದ್ದಾಗಲಿ ಇರಲಾರದು. ಅಲ್ಲದೆ ಅಲ್ಲಿ ಬೇರೆ ಯಾವ ಹಳ್ಳಿಯೂ ಇದ್ದಿರಲಾರದು. ಚಾಮರಾಜ ನಾಲೆ ಬಂದಾಗ ಆ ದೇವಸ್ಥಾನವನ್ನು ಗದ್ದೆ ಬಯಲಿನಲ್ಲೇ ಪಾಳು ಬಿಟ್ಟಿರಬಹುದು. ಈಗ್ಗೆ 60 ವರ್ಷಗಳ ಹಿಂದೆ ಆ ದೇವಸ್ಥಾನದ ಮುಂಬಾಗದಲ್ಲಿ 50-100 ಅಡಿ ದೂರದಲ್ಲಿ ಗದ್ದೆಯಲ್ಲಿಯೇ ಶಾಸನವೋ ಎನ್ನುವಂತಹ ದೊಡ್ಡ ಕಪ್ಪು ಶಿಲೆಯೊಂದಿತ್ತು. ಅದನ್ನು ಸಂರಕ್ಷಿಸಲಾಯಿತೊ ಇಲ್ಲವೊ ತಿಳಿಯದು. ಹೇಗೆ ಚರಿತ್ರೆಯಲ್ಲಿ ತಪ್ಪು ಮಾಹಿತಿ ನುಸುಳುತ್ತದೆ ಎಂಬುದಕ್ಕೆ ಇದು ಉದಾಹರಣೆ. *ಚಿತ್ರದಲ್ಲಿ ಅಮೃತೇಶ್ವರ ದೇವಸ್ಥಾನ ಹಿಂದೆ ಇದ್ದ ಸ್ಥಳ ಮತ್ತು ದೂರದಲ್ಲಿ ಹಿಂದೆ ಇರುವುದು ಯೋಗಾನರಸಿಂಹ ದೇವಸ್ಥಾನ.*



ಚಾಮರಾಜ ನಾಲೆ ಬರುವ ಮುನ್ನ ದೇವಸ್ಥಾನ ಸಾರ್ವಜನಿಕ ಸ್ಥಳದಲ್ಲಿದ್ದಿರಬೇಕು ಮತ್ತು ಅದಕ್ಕೊಂದು ಸಾರ್ವಜನಿಕ ರಸ್ತೆಯೂ ಇದ್ದಿರಬೆಕು. ಆದರೆ ಮಿರ್ಲೆ ಪಂಚಾಯಿತಿ ಮತ್ತು ಪುರಾತತ್ವ ಶಾಸ್ತ್ರ ಮತ್ತು ವಸ್ತುಸಂಗ್ರಹಾಲಯ ಇಲಾಖೆ ಸ್ಥಳಾಂತರಿಸುವಾಗಲಾದರೂ ಇವಾವುದನ್ನೂ ಗಮನಿಸಲಿಲ್ಲವೆ? ಈಗ್ಗೆ 50 ವರ್ಷಗಳ ಹಿಂದೆ ನೋಡಿದಾಗಲೂ ಈ ಅಮೃತೇಶ್ವರ ದೇವಸ್ಥಾನದ ಗೋಪುರ ಇಷ್ಟು ಎತ್ತರ ಹಾಗೂ ಸ್ವಷ್ಟವಾಗಿರಲಿಲ್ಲ. ಇದನ್ನು ಸ್ಥಳಾಂತರಿಸಿದ್ದು ಸುಮಾರು 35 ವರ್ಷಗಳ ಹಿಂದೆ. ಕಾವೇರಿ ಹಿನ್ನೀರಿನಲ್ಲಿ ಇನ್ನೇನು ಮುಳುಗಡೆಯಾಗುವುದರಲ್ಲಿದ್ದದ್ದರಿಂದ ಸ್ಥಳಾಂತರಿಸಲಾಯಿತು ಎಂದು ತಪ್ಪು ಮಾಹಿತಿಯನ್ನು ದಾಖಲಿಸಿ ಬೆರೆ ಯಾವುದೋ ಫೋಟೊ ಬಳಸಲಾಗಿದೆ. ಮತ್ತೊಂದು ವಿಷಯ. ಮಾಧ್ಯಮಿಕ ಶಾಲೆಗೆ ಸೇರಿದ ಹೊಲ ಮತ್ತು ಗದ್ದೆಗಳಿದ್ದುವು. ಆ ಜಮೀನಿನಲ್ಲಿ ವಿಧ್ಯಾರ್ಥಿಗಳಾಗಿ ನಾವು ಕೆಲಸ ಮಾಡುತ್ತಿದ್ದದ್ದು ನೆನಪಿದೆ. ಆ ಗದ್ದೆಗಳ ಪಕ್ಕದಲ್ಲಿಯೇ ಈ ದೇವಸ್ಥಾನವಿತ್ತು. ಶಾಲೆ



ಜಮೀನು ಈಗ ಶಾಲೆಯ ವಶದಲ್ಲಿಲ್ಲ, ಬದಲಾಗಿ ಖಾಸಗಿ ಒಡೆತನದಲ್ಲಿದೆ ಎಂದು ತಿಳಿಯಿತು. *ಸ್ಥಳಾಂತರಿಸಿದ ಅಮೃತೇಶ್ವರ ದೇವಸ್ಥಾನದ ಇತ್ತೀಚಿನ ಚಿತ್ರಗಳು.*

## 6. ಈಶ್ವರ (ವಿರೂಪಾಕ್ಷೇಶ್ವರ/ ಅರ್ಕೇಶ್ವರ) ದೇವಸ್ಥಾನ




ಸೋಜಿಗದ ಸಂಗತಿಯೆಂದರೆ ಈ  ಈಶ್ವರ ದೇವಸ್ಥಾನ ಒಂದು ಖಾಸಗಿ ದೇವಸ್ಥಾನ. ಅರ್ಕೇಶ್ವರ ದೇವಾಲಯ ಸ್ವಂತಕ್ಕಾಗಿ ಕಟ್ಟಿಸಿದ್ದು ನೂರಾರು ಎಕರೆ ನೀರಾವರಿ ಜಮೀನನ್ನು ಹೋಂದಿದ್ದ ಜಮೀನ್ದಾರ್ ಎಂ. ಹೆಚ್. ರಾಮಣ್ಣನವರ ತಾತ ಶ್ರೀ ಹಿರಣ್ಣಯ್ಯನವರ ಕಾಲದಲ್ಲಿ.

## 7. ಕಾವೇರಿ ತೀರದ ಸಣ್ಣಮಠ/ ಸಂಧ್ಯಾವಂದನ ಮಂಟಪ:




ಇಲ್ಲಿ"ಮಿರ್ಲೆ ನಾಗಣ್ಣನವರ ಮಗ ಲಕ್ಕಣ್ಣನವರು ಸ್ಥಾಪಿಸಿದ ಸ್ಥಂಭ " ಎಂದು ಕೆತ್ತಲಾದ 17ನೇ ಶತಮಾನದ ಶಾಸನವಿದೆ ಎಂದು ಹೇಳಲಾಗಿದೆ. ಶ್ರೀಮತಿ ವೆಂಕಮ್ಮ ಎನ್ನುವವರು  (ಕಾವಿ ತೊಡುತ್ತಲಿದ್ದರು, ಸನ್ಯಾಸಿನಿ ಇರಬಹುದು) ಬಹಳ ಕಾಲ ಸಣ್ಣಮಠದಲ್ಲಿ ನೆಲೆಸಿದ್ದರು ಅವರ ಅಂತಿಮ ಆಸೆ ಸತ್ತನಂತರ ಅವರ ಕಳೇಬರವನ್ನು ಅಲ್ಲಿಯೇ ಮಣ್ಣುಮಾಡಬೇಕೆಂಬುದಾಗಿತ್ತು. ಇತ್ತೀಚಿನ ವರ್ಷಗಳಲ್ಲಿ ಈ ಫೋಟೊ ತೆಗೆದಾಗ ಮಾರಿಗುಡಿ ಬೀದಿಯ ವಯೋವೃದ್ಧ ಶ್ರೀ ತಿಮ್ಮಣ್ಣ ಎಂಬುವರು ಒಂಟಿಯಾಗಿ ಅಲ್ಲಿ ವಾಸವಾಗಿದ್ದರು.

## 8. ಬಸವಣ್ಣನ ಗುಡಿ




ಇದೊಂದು ಅರ್ಚಕರಿಲ್ಲದ ಊರ ಹೆಬ್ಬಾಗಿಲ ಪುಟ್ಟಗುಡಿ. ಜಮೀನು ಉಳುಮೆಗೆ ಹೊರಟ ರೈತರು ಇಲ್ಲಿ ಕೈಮುಗಿದು ಮುಂದುವರಿಯುವುದು ವಾಡಿಕೆ. ಮದುವೆ ಮತ್ತಿತರ ಸಮಾರಂಭಗಳಲ್ಲೂ ಈ ಬಸವನಿಗೆ ಪೂಜೆ ಸಲ್ಲಿಸುತ್ತಿದ್ದರು. ಪಕ್ಕದಲ್ಲಿದ್ದ ದೊಡ್ಡ ನಾಗರಕಲ್ಲುಗಳಿದ್ದ ಅರಳೀಕಟ್ಟೆಗೆ ನಮಿಸುವ ಹೆಂಗಸರು ಈ ಬಸವನಿಗೆ ನಮಸ್ಕರಿಸುತ್ತಿದ್ದರು. ಇದರಷ್ಟೆ ಹಳೆಯದಾದ ಸುತ್ತಲೂ ಭದ್ರ ಕಲ್ಲು ಕಟ್ಟೆ ಹೊಂದಿದ್ದ ಅರಳೀ ಕಟ್ಟೆಯೊಂದು ಹಿರಿಯಣ್ಣನ ಗುಡಿ ಪಕ್ಕದಲ್ಲಿಯೂ ಇತ್ತು. ಸುಮಾರು ೬೦ರ ದಶಕದಲ್ಲಿ ಚಾಮರಾಜಾ ನಾಲೆಯ ಹೊಸ (ಅಂದಿಗೆ ಹೊಸತು) ಸೇತುವೆ ಮುಂದೆ ಮರ ಕೊಯ್ಯುವ ಹಳ್ಳದ ಬಳಿ ಮತ್ತು ಹಳೇ ಪಂಚಾಯಿತಿ ಕಚೇರಿ ಮುಂದೆ (ಪಿಳ್ಳ ಕಾಲುವೆ ಪಕ್ಕಕ್ಕೆ) ಎರಡು ಅರಳೀ ಮರಗಳನ್ನು ನೆಟ್ಟು ಪೋಶಿಸಲಾಯಿತು. ಅವುಗಳು ಒಳ್ಳೆ ಅರಳೀ ಕಟ್ಟೆಗಳಾಗುವ ಎಲ್ಲಾ ಸೂಚನೆಗಳಿದ್ದುವು. ಪಂಚಾಯಿತಿ ಕಚೇರಿ ಮುಂದಿನದನ್ನು ಪಂಚಾಯಿತಿ ನೌಕರ ಶ್ರೀ ಕೋಟೇಗೌಡ ನೆಟ್ಟು ಪೋಶಿಸಿದ್ದರು.

ಕೆರೆಗೆ ದಿನವಿಡೀ ಹೆಂಗಸರು ಪಾತ್ರೆ ತೊಳೆಯಲು, ಬಟ್ಟೆ ಒಗೆಯಲು ಮತ್ತು ಮನೆಗೆ ನೀರು ತರಲು ಹೋಗುತ್ತಿದ್ದದ್ದರಿಂದ ದಿನವಿಡೀ ಅಲ್ಲಿ ಯಾರಾದರು ಇರುತ್ತಿದ್ದರು. ಅಲ್ಲದೆ ಈ ಗುಡಿಯ ಮುಂದೆ ಕಾಲುವೆ ಪಕ್ಕಕ್ಕೆ ಒಂದು ಬಹಳ ದೊಡ್ಡ ವಿಶಾಲವಾದ ಆಲದ ಮರವಿತ್ತು. ಅದರ ಬೀಳುಗಳನ್ನ ಉಯ್ಯಾಲೆಯಂತೆ ಮಕ್ಕಳು ಆಡುತ್ತಿದ್ದರು. ಮರದ ಒಂದು ಪಕ್ಕಕ್ಕೆ ಕಬ್ಬು ಮತ್ತು ಕಬ್ಬಿನ ಹಾಲು (ಅರೆಯುವ ಗಾಣದೊಂದಿಗೆ) ಮಾರುತ್ತಿದ್ದರೆ, ಮರದ ನೆರಳಿನಲ್ಲೆ (ಹಲಸು, ಕಲ್ಲಂಗಡಿ, ಪಪ್ಪಾಯಿ, ಇತ್ಯಾದಿ) ತಿನಿಸುಗಳನ್ನ ಮಾರುತ್ತಿದ್ದರು. ಬೇಡಿಕೆಯ ಮೇರೆಗೆ ಆಲದ ಮರದ ಬಳಿ ಬಸ್ ಹತ್ತಿ-ಇಳಿಯುವ ಸೌಲಭ್ಯವಿತ್ತು.

## 9. ಹುಣಸಮ್ಮನ ಗುಡಿ

ಹುಣಸಮ್ಮ ಮಿಲೆಯಷ್ಟೇ ಅಲ್ಲ ಸುತ್ತಲಿನ ಒಂಬತ್ತು ಗ್ರಾಮಗಳ ಪ್ರಮುಖ ಗ್ರಾಮದೇವತೆ. ವಾರ್ಷಿಕ ರಥೋತ್ಸವ/ ಜಾತ್ರೆಯಲ್ಲಿ ಸಿಂಗರಿಸಿದ ಒಂಬತ್ತು ಗ್ರಾಮಗಳ (ಬೀಚನಹಳ್ಳಿ, ಬೀಚನಹಳ್ಳಿ ಕೊಪ್ಪಲು, ಹನುಮನಹಳ್ಳಿ, ನಾಟನ ಹಳ್ಳಿ, ಅಂಕನಹಳ್ಳಿ, ನರಚನ ಹಳ್ಳಿ, ಕೊಡಿಯಾಲ, ಹಳೇ ಮಿರ್ಲೆ ಮತ್ತು ಮಿರ್ಲೆ) ರಥ ಅಥವ ಸಿಡಿಗಳು ಪಾಲ್ಗೊಂಡು ಸಂಜೆ ಸೂರ್ಯ ಮುಳುಗುವಾಗ ಮೂರು ಪ್ರದಿಕ್ಷಿಣೆ ಹಾಕುವ ಅಪೂರ್ವ ಸೌಹಾರ್ದಯುತ ಸಂಭ್ರಮದ ಒಂದು ದಿನದ ಜಾತ್ರೆ ಇದು. ಹುಣಸಮ್ಮ ಪ್ಲೇಗ್ ನಿಯಂತ್ರಣಕ್ಕಾಗಿ ಹುಣಸೇಮರದ ಅಮ್ಮ ಎಂಬುದಾಗಿ ಹುಟ್ಟಿಕೊಂಡಿತು. ಸ್ಥಳದೇವತೆ ಮಿರ್ಲೆಯಮ್ಮ ದೇವಸ್ಥಾನ/ ಜಾತ್ರೆಯ ಬಗ್ಗೆ ನವರತ್ನ ರಾಮರಾವ್ ಅವರು 120 ವರ್ಷಗಳ ಹಿಂದೆ ಬರೆದಿರುವುದು ಹುಣಸಮ್ಮನ ದೇವಸ್ಥಾನ/ ಜಾತ್ರೆ ಎನ್ನಿಸುತ್ತದೆ *(6ನೇ ಅಧ್ಯಾಯದಲ್ಲಿ 'ಮಿರ್ಲೆ ಗಾಮ ದೇವತೆಗಳ" ಲೇಖನ ನೋಡಿ).*








ಎಂ. ಎನ್. ಪ್ರದೀಪ್ ಅವರು upload ಮಾಡಿದ ಇಂದಿನ ಹುಣಸಮ್ಮನ ಗುಡಿ ಮತ್ತು 'ಹುಣಸಮ್ಮತಾಯಿ' ಟಿ ಷರ್ಟ್ ಫೋಟೊಗಳು:

***ಆಧುನೀಕರಿಸಿದ ಹುಣಸಮ್ಮ, ಹಿರಿಯಣ್ಣ ಮತ್ತು ಮಾರಮ್ಮನ ಗುಡಿಗಳು:***

ಮಿರ್ಲೆಯ ಎಲ್ಲಾ ದೇವಸ್ಥಾನಗಳ ಪೈಕಿ ಹುಣಸಮ್ಮ, ಹಿರಿಯಣ್ಣ ಮತ್ತು ಮಾರಮ್ಮನ ಗುಡಿಗಳನ್ನು ಆಧ್ಯತೆ ಮೇಲೆ ಅಧುನಿಕ ರೀತಿಯಲ್ಲಿ ಕಾಲಕ್ಕೆ ತಕ್ಕಂತೆ ಪಟ್ಟಣಗಳ ಮಾದರಿಯನ್ನು ಅನುಕರಿಸಿ ಕಾಂಕ್ರೀಟಿನಿಂದ (ಕಬ್ಬಿಣ ಮತ್ತು ಸಿಮೆಂಟ್ ಬಳಸಿ) ಹಿರಿಯರು






ಮತ್ತು ಧಾನಿಗಳ ಔದಾರ್ಯದಿಂದ ಪುನರ್ ನಿರ್ಮಿಸಲಾದಂತಿವೆ. ಈ ಚಿತ್ರದಲ್ಲಿರುವ ಜೀರ್ಣೋದ್ದಾರಗೊಂಡ ಅಥವ ಪುನರ್ ನಿರ್ಮಿಸಿದ ಹುಣಸಮ್ಮನ ಗುಡಿ ಮತ್ತು ಮಾರೀ ಗುಡಿ ನೋಡಿ ಒಮ್ಮೆಗೇ ಇವೇನು ಪಟ್ಟಣಗಳ ಫುಟ್ ಪಾತ್ ಅಥವ  ಪಾರ್ಕ  ಅತಿಕ್ರಮಿಸಿ ನಿರ್ಮಿಸುವ ದೇವಸ್ಥಾನಗಳಂತಿವೆ ಎನ್ನಿಸಿತು. ಹುಣಸಮ್ಮನ ದೇವಸ್ಥಾನದ ಗೋಪುರ, ಜೋಕಾಲಿ ಹಾಗೇ ಇದ್ದು ಹೊರಗಿನ ನೋಟದಲ್ಲಿ ಅಷ್ಟು ಬದಲಾವಣೆ ಇಲ್ಲ (ಇತ್ತೀಚೆಗೆ ಗೋಪುರದ ಪುನರ್ ನಿರ್ಮಾಣವನ್ನೂ ಆಡಲಾಗುತ್ತಿದೆ ಎಂದು ತಿಳಿಯಿತು). ಆದರೆ ದೇವಸ್ಥಾನದ ಅಂಗಳಕ್ಕೆ ಕಾಲಿಟ್ಟಾಗ ಹಳೇ ದೇವಸ್ಥಾನ ಬಹಳ ನೆನಪಾಯಿತು. ಈಗ ಮೂಲ ಕಟ್ಟಡದ ಸ್ವರೂಪ ಪೂರ್ಣ ಬದಲಾಗಿ ಹಿಂದೆ ಇದ್ದ ದೇವಸ್ಥಾನದ ಯಾವ ಕುರುಹೂ ಇಲ್ಲದಂತಾಗಿದೆ. ಇದು ಪರಂಪರೆಯ ಸಂರಕ್ಷಣೆ ಹೇಗಿರಬೇಕು ಎಂಬ ಜಿಜ್ಞಾಸೆಗೆ ದಾರಿಮಾಡಿತು.  ಅಮೃತೇಶ್ವರ ದೇವಸ್ಥಾನದ ಕಲ್ಲು ಕಲ್ಲಿಗೂ ಗುರುತು ಹಾಕಿ ಪುರಾತತ್ವ ಶಾಸ್ತ್ರ ಮತ್ತು ವಸ್ತುಸಂಗ್ರಹಾಲಯ ಇಲಾಖೆ ನಿರ್ದೇಶಕ ಮಿರ್ಲೆಯವರೇ ಆದ ಶ್ರೀ ನಾಗರಾಜರಾವ್ ಅವರ ನೇತೃತ್ವದಲ್ಲಿ ಯಥಾವತ್  ಸ್ಥಳಾಂತರಗೊಳಿಸಿದ್ದು ಪರಂಪರೆಯ ರಕ್ಷಣೆಯ ಒಂದು ಉನ್ನತ ಮಾದರಿ ಎಂದು ಬಗೆಯುವುದಾದರೆ ಹುಣಸಮ್ಮ ಮತ್ತು ಮಾರಮ್ಮನ ಗುಡಿಗಳ ಮೂಲ ಕಟ್ಟಡಗಳನ್ನು ಉಳಿಸಿಕೋಳ್ಳಲು ಸಾಧ್ಯವಿರಲಿಲ್ಲವೆ ಎನ್ನಿಸುತ್ತದೆ.  ಜೀರ್ಣೋದ್ದಾರ ಮಾಡುವಾಗ ಹಲವಾರು ಸಮಸ್ಯೆಗಳಿದ್ದಿರಬಹುದು. ಹಾಗೆಯೇ ಪುರಾತತ್ವ ಶಾಸ್ತ್ರ ಮತ್ತು ವಸ್ತುಸಂಗ್ರಹಾಲಯ ಇಲಾಖೆ ಕೈಗೊಂಡಿರುವ ಯೋಗಾನರಸಿಂಹ ದೇವಸ್ಥಾನ ಸಂರಕ್ಷಣೆಯಲ್ಲಿಯೂ  ಮೂಲ ಕಟ್ಟಡದ ವಿನ್ಯಾಸಕ್ಕೆ ಧಕ್ಕೆ ಬರದಂತೆ ಗ್ರ್ಯಾನೈಟ್ ಕ್ಲಾಡಿಂಗ್ ಮಾಡಿರುವುದು ಒಂದು ವೈಶಿಷ್ಟ್ಯ.









## ಪರಂಪರೆಯ (ಹೆರಿಟೇಜ್) ಸಂರಕ್ಷಣೆ

ಪರಂಪರೆಯ ಆಚರಣೆಯನ್ನು ಉಳಿಸಿಕೊಂಡು ಯಥಾವತ್ ಮುಂದುವರಿಸಬೇಕೆ ಬೇಡವೆ ಎಂಬುದು ಕಾಲಮಾನದ ಬದಲಾವಣೆಗಳನ್ನು ಅವಲಂಬಿಸಿದೆಯದರೂ ಭೌತಿಕ ಕುರುಹುಗಳನ್ನು ಹೆರಿಟೇಜ್ ಆಗಿ ರಕ್ಷಿಸಬೇಕೆಂಬುದುದರಲ್ಲಿ ಎರಡು ಮಾತಿಲ್ಲ. ಇಂತಹ ಹೆರಿಟೇಜ್ ಗಳನ್ನ ಬದಲಾಯಿಸುವುದು ಸರಿಯೆ? ಬದಲಾಯಿಸಿದರೆ, ಅದು ಪರಂಪರೆಯನ್ನು

ವಿಕೃತಿಗೊಳಿಸಿದಂತಾಗುತ್ತದೆಯೆ? ಉತ್ತರಿಸುವುದು ಕಷ್ಟ. ಹುಣಸಮ್ಮನ ಗುಡಿ ಕಟ್ಟಡ ಮತ್ತು ಗೋಪುರ ಬದಲಾಗಿವೆ, ಸಿಡಿಗಾಲಿಯನ್ನು ಯಥಾವಥ್ ಮರದಲ್ಲೇ ಪುನರ್ ನಿರ್ಮಿಸಲಾಗಿದೆ. ಕಬ್ಬಿಣ ಅಥವ ಅಲ್ಯುಮಿನಿಯಮ್ ಮತ್ತು ಟೈರ್ ಬಳಸಿದ್ದರೆ ಹಗುರಾದರೂ ಬಲಿಷ್ಠವಾಗಿ ಆಧುನಿಕಗೊಂಡು ಉಪಯೋಗಿಸಲು ಅನುಕೂಲವಗುತ್ತಿತ್ತಲ್ಲವೆ ಎನ್ನಿಸದೇ ಇರದು. ಇಷ್ಟಾದರೂ ಸ್ಥಳಾಂತರಗೊಳಿಸಿದ ಅಮೃತೇಶ್ವರ ದೇವಸ್ಥಾನದ ಮುಂದೆ ಹೊಸದಾಗಿ ಮಾಡಿರುವ ಕಲ್ನಾರು ಚಪ್ಪರ, ನವಗ್ರಹ ದೇವಸ್ಥಾನ, ವಸತಿ ಇತ್ಯಾದಿ ಸ್ಥಳಾಂತರಿಸಿದ ಮತ್ತು ಅದನ್ನು ಒಂದು ಹೆರಿಟೇಜ್ ಆಗಿ ಕಾಪಾಡುವ ಮೂಲ ಉದ್ದೇಶಕ್ಕೆ ಧಕ್ಕೆಯಲ್ಲವೆ? ಇಲಾಖೆಯ ನಿಯಂತ್ರಣಕ್ಕೆ ಒಳಪಟ್ಟಿರುವುದರಿಂದ ಯೋಗಾನರಸಿಂಹ ದೇವಸ್ಥಾನದ ಮುಂದೆ ಇಂತಹ ಪುನರ್ ನಿರ್ಮಾಣ/ ಹಸ್ತಕ್ಷೇಪ/ ಬದಲಾವಣೆಗಳಿಗೆ ಅವಕಾಶವಿರುವುದಿಲ್ಲ. ವಿಷಾದದ ಸಂಗತಿಯೆಂದರೆ ಇದುವರೆವಿಗೆ ಮಿರ್ಲೆಯ ಯಾವೊಂದು ದೇವಸ್ಥಾನವೂ ಹೆರಿಟೇಜ್ ಎಂದು ಪರಿಗಣಿತವಾದಂತಿಲ್ಲ. ಸದ್ಯಕ್ಕೆ ತಾಲ್ಲೂಕಿನಲ್ಲಿ ಗುರುತಿಸಿರುವ ಹೆರಿಟೇಜ್ ಗಳು ಕೃಷ್ಣರಾಜನಗರ, ಚುಂಚನಕಟ್ಟೆ, ಹನಸೋಗೆ, ದೊಡ್ಡಹನಸೋಗೆ, ಕಪ್ಪಡಿಕ್ಷೇತ್ರ ಮತ್ತು ಡೋರ್ನಹಳ್ಳಿಗಳಲ್ಲಿ ಮಾತ್ರ ಇವೆ. ಬಹುಷಃ ಪುರಾತತ್ವ ಶಾಸ್ತ್ರ ಮತ್ತು ವಸ್ತುಸಂಗ್ರಹಾಲಯ ಇಲಾಖೆಯ ನಿಯಂತ್ರಣಕ್ಕೆ ಒಳಪಟ್ಟು ಸಂರಕ್ಷಿಷಿಸಿರುವುದರಿಂದ ಯೋಗಾನರಸಿಂಹ ದೇವಸ್ಥಾನ ಮಾತ್ರ ಮುಂದೆ ಹೆರಿಟೇಜ್ ಪಟ್ಟಿಗೆ ಸೇರಬಹುದೇನೊ?




ಇಲ್ಲಿ ಒಂದು ಸಮಕಾಲೀನ ಉದಹರಣೆಯನ್ನು ಗಮನಿಸಬಹುದು. ಮೈಸೂರಿನಲ್ಲಿ ಲ್ಯಾಂಡ್ಸ್ ಡೌನ್ ಕಟ್ಟಡ ಶಿಥಿಲಗೊಂಡು ಮಾಡು ಕುಸಿಥಿದ್ದರೂ ಅದನ್ನು ಕೆಡವಿ ಪಾರ್ಕ ಮತ್ತು ಬಸ್

ನಿಲ್ದಾಣದ ಎದುರಿಗೆ ಪ್ರಮುಖ ಪ್ರದೇಶದಲ್ಲಿರುವ ಈ ಜಾಗದಲ್ಲಿ ಅತ್ಯಾಧುನಿಕ ಬಹು ಅಂತಸ್ಥಿನ ಹೊಸ ಸಂಕೀರ್ಣ/ ಕಟ್ಟಡವನ್ನು ನಿರ್ಮಿಸದೆ ಸರ್ಕಾರ ಸುಮಾರು 5 ಕೋಟಿ ರೂಪಾಯಿಗಳನ್ನು ಆಯವ್ಯಯದಲ್ಲಿ ಮೀಸಲಿರಿಸಿ ಕಟ್ಟಡದ ವಿನ್ಯಾಸವನ್ನು ಹಾಗೆ ಉಳಿಸಿ ಅದರ ಜೀರ್ಣೋದ್ಧಾರ ಮಾಡಬೇಕೆನ್ನುವ ಉದ್ದೇಶದ ಹಿಂದಿನ ಆಶಯವೇ ಪಾರಂಪರಿಕ (ಹೆರಿಟೇಜ್) ಸಂರಕ್ಷಣೆ.

## 10. ಹಿರಿಯಣ್ಣನ ಗುಡಿ:


ಹಿರಿಯಣ್ಣನ ಗುಡಿ

ಚಿತ್ರದಲ್ಲಿರುವುದು ಇತ್ತೀಚಿನ ವರ್ಷಗಳಲ್ಲಿ ಕಾಂಕ್ರೀಟ್ ಬಳಸಿ ಪುನರ್ ನಿರ್ಮಿಸಲಾದ ಹಿರಿಯಣ್ಣನ ದೇವಸ್ಥಾನ. ವಿಚಿತ್ರ ಎಂದರೆ ಇಲ್ಲಿ ವಿಗ್ರಹವೇ ಇರುವುದಿಲ್ಲ. ಮೃದುವಾದ ಪಾರಿವಾಳದ ಮರ ಕಡಿದು, ಅದರ ತುಂಡಿನಿಂದ (ಕಾಂಡದಿಂದ) ವಾರ್ಷಿಕ ಜಾತ್ರೆಯ ಹಿಂದಿನ ದಿನ (ಅಂದರೆ ಮಂಗಳವಾರ) ಬಡಗಿ ವಿಗ್ರಹ ನಿರ್ಮಿಸುತ್ತಾನೆ ಮತ್ತು ಜಾತ್ರೆ ನಂತರ ಅಂದರೆ ಬುದುವಾರವೇ ಅದನ್ನು ವಿಸರ್ಜಿಸಲಾಗುತ್ತದೆ. ಹಿರಿಯಣ್ಣನ ವಾರ್ಷಿಕ ಜಾತ್ರೆ ಹುಣಸಮ್ಮನ ಜಾತ್ರೆಗಿಂತ (ಶನಿವಾರ) ಮೂರು ದಿನ ಮುಂಚೆ ನಡೆಯುತ್ತದೆ. ಈ ದೇವಸ್ಥಾನದ ಮುಂದೆ ಒಂದು ಎತ್ತರದ ಕಪ್ಪು ಬಲೀ ಕಲ್ಲು ಇತ್ತು. ಇದರ ಮೇಲೆ ಸ್ವಾತಂತ್ರ್ಯ ಪೂರ್ವದಲ್ಲಿ (ಇಪ್ಪತ್ತನೇ ಶತಮಾನದ ಆದಿಯಲ್ಲಿ) ಕೋಣಗಳನ್ನು ಬಲಿ ಕೊಡುವ ಪದ್ದತಿ ಇತ್ತು. ಇಂತಹದೇ ಪದ್ಧತಿಯ ಪರಿಣಾಮಕಾರಿ ಚಿತ್ರಣವನ್ನು ಗೊರೂರು ರಾಮಸ್ವಾಮಿ ಐಯ್ಯಂಗಾರ್ ಅವರ 'ಬಾಲ್ಯದ ದಿನಗಳು' ಪುಸ್ತಕದಲ್ಲಿ ಕಾಣಬಹುದು. ಮತ್ತೊಂದು ಸೋಜಿಗವೆಂದರೆ ಊರಿನ ಪ್ರಮುಖ ರಸ್ತೆಯಾದ ಬ್ರಾಹ್ಮಣರ ಬೀದಿಯ ತುದಿಯಲ್ಲಿ ಕೋದಂಡರಾಮ ದೇವಸ್ಥಾನದಿಂದ ಕೇವಲ 200 ಅಡಿ ದೂರದಲ್ಲಿ ಕೋಣನ ಬಲಿ ನಡೆಯುತ್ತಿದ್ದಿತು ಎಂಬುದು. ದೂರದ ಊರುಗಳಿಂದ ಮಾಲೆ ಹಾಕಿ ಹರಕೆ ಹೊತ್ತು ಮುಡಿಪು ಬಿಡುತ್ತಿದ್ದ ಕೋಣಗಳು ಹಿರಿಯಣ್ಣನ ಜಾತ್ರೆ ಸಮಯಕ್ಕೆ ಸರಿಯಾಗಿ ತಾವಾಗಿಯೇ

ದೇವಸ್ಥಾನದ ಬಳಿಗೆ ಬರುತ್ತಿದ್ದುದ್ದು ಹಿರಿಯಣ್ಣ ದೇವರ ಸತ್ಯ ಎಂದು ನನ್ನ ತಾಯಿ ನೆನೆಯುತ್ತಿದ್ದರು. ನಂಬುವುದು ಅಸಾದ್ಯವಾದರೂ ಇದರ ಹಿಂದೆ ಒಂದು ಲಾಜಿಕ್ ಇದ್ದಂತೆ ತೋರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯವರಂತೆ ಕೋಣಗಳನ್ನು ಉಳುಮೆ, ಕಂಬಳ ಸ್ಪರ್ಧೆ ಇತ್ಯಾದಿಗಾಗಿ ಬಯಲು ಸೀಮೆಯಲ್ಲಿ ಬಳಸುವುದಿಲ್ಲವಾಗಿ ಕೋಣಗಳು ನಿಶ್ಪ್ರಯೋಜಕಗಳಾಗಿ ಸುಲಭದಲ್ಲಿ ಜವಾಬ್ದಾರಿ ಕಳೆದುಕೊಳ್ಳಲು ಹಿರಿಯಣ್ಣನಿಗೆ ಹರಕೆ ಮುಡುಪಾಗಿಸಿ ಬಲಿಪೀಠಕ್ಕೆ ರವಾನಿಸುತ್ತಿದ್ದರೇನೊ. ಸ್ವಭಾವಿಕವಾಗಿ ಮಾಲೆ ಹಾಕಿದ ಕೋಣಗಳನ್ನು ಗಮನಿಸಿದವರು ಹಿರಿಯಣ್ಣನ ದೇವಸ್ಥಾನದ ಕಡೆಗೆ ಅಟ್ಟಿರಲಿಕ್ಕೂ ಸಾಕು. ಇದೇ ರೀತಿ ಇಲಾತಿ ಹಸುಗಳ ಹೋರಿಕರುಗಳನ್ನು ಅವುಗಳು ಕುಡಿಯುವ ಹಾಲು ಉಳಿಸುವ ಸಲುವಾಗಿ ಎಳೇ ವಯಸ್ಸಿನಲ್ಲೇ ಕೊಂದು ಅವುಗಳ ತೊಗಲಿನೊಳಗೆ ಹುಲ್ಲು ತುಂಬಿಸಿ ಹಸುಗಳ ಮುಂದೆ ನಿಲ್ಲಿಸಿ ಹಾಲುಕರೆಯುವ ಪದ್ಧತಿಯನ್ನು ಮೈಸೂರಿಗೆ ಬಂದಾಗ ಗಮನಿಸಿದ್ದೆ.

## 11. ಮಾರೀಗುಡಿ




ಚಿತ್ರದಲ್ಲಿರುವ ಪುನರ್ ನಿರ್ಮಿಸಿದ ಮಾರೀ ಗುಡಿ ಒಂದು ಸಾಧಾರಣ ಮನೆಯಂತಿದ್ದು, ಅದರ ಮೂಲ ಸ್ವರೂಪ/ ವಿನ್ಯಾಸದ ವಿಶಿಷ್ಟತೆಗಳು ಇಲ್ಲವಾಗಿವೆ. ಸುತ್ತಲೂ ವಿಶಾಲವಾದ ಜಗುಲಿ ಅಥವ ಪಡಸಾಲೆ ಇತ್ತು ಮತ್ತು ಅದನ್ನು ಮೂರು ಕಡೆಯೂ ಗೋಡೆ ಕಟ್ಟಿ ಮುಚ್ಚಲಾಗಿತ್ತು. ಇಲ್ಲಿ ಬಜ್ರಂತಿ ತಂಡದವರು ನಾಟಕ ತಾಲೀಮು ನಡೆಸುವುದು, ಭಜನೆ, ವಿಶೇಷ ದಿನಗಳಲ್ಲಿ (ಶಿವರಾತ್ರಿ, ಕೋದಂಡರಾಮ ರಥೋತ್ಸವ, ಇತ್ಯಾದಿ ದಿನದಂದು) ಪ್ರಸಾದ ವಿನಯೋಗ ಮಾಡಲಾಗುತ್ತಿತ್ತು.

## ಅರ್ಚಕರು

ಶ್ರೀ ಅನಂತರಾಮ ಭಟ್ಟರು - ಶ್ರೀ ಕೋದಂಡರಾಮ ಧೇವಸ್ಥಾನ

ಶ್ರೀ ನರಸಿಂಹ ಭಟ್ಟರು - ಶ್ರೀ ಚನ್ನಕೇಶವ, ಶ್ರೀ ಯೋಗಾನರಸಿಂಹ, ಶ್ರೀ ಹನುಮಂತರಾಯ ಧೇವಸ್ಥಾನಗಳು

ಶ್ರೀ ಕರೀ ಭಟ್ಟರು - ಈಶ್ವರ ಧೇವಸ್ಥಾನ

ಶ್ರೀ ವಿಶ್ವೇಶ್ವರಯ್ಯ - ಶ್ರೀ ಅಮೃತೇಶ್ವರ ಧೇವಸ್ಥಾನ (ಇವರು ಧರ್ಜಿ ವೃತ್ತಿಯನ್ನೂ ನಡೆಸಿದ್ದರು)

ಶ್ರೀ ನಾಗಣ್ಣಯ್ಯನವರು - ಶ್ರೀ ಹುಣಸಮ್ಮನ ಗುಡಿ

ಶ್ರೀ ಶಿವರಾಮಯ್ಯ ಮತ್ತು ಶ್ರೀ ನಂಜುಂಡಯ್ಯ ಸಹೋದರರು - ಪೌರೋಹಿತ್ಯ (ಮದುವೆ, ಶ್ರಾದ್ಧ, ನಾಮಕರಣ, ಇತ್ಯಾದಿ)

ವಿಷ್ಣು ದೇವಾಲಯಗಳಲ್ಲಿ ಪೂಜೆಗೆ ತುಳಸಿಯನ್ನು ಬಳಸಿದರೆ, ಈಶ್ವರ ದೇವಸ್ಥಾನಗಳಲ್ಲಿ ಬಿಲ್ವಪತ್ರೆಯನ್ನು ಬಳಸುತ್ತಾರೆ ಮತ್ತು ವಿಷ್ಣು ದೇವಸ್ಥಾನಗಳಲ್ಲಿ ಬ್ರಾಹ್ಮಣ ಅರ್ಚಕರಾದರೆ, ಶಿವ ದೇವಾಲಯಗಳಲ್ಲಿ 'ಶಿವದ್ವಿಜರು' ಅರ್ಚಕರಾಗಿರುತ್ತಿದ್ದರು. ಅಂತೆಯೇ ಗ್ರಾಮದೇವತೆಗಳ ಅರ್ಚಕರು ಸಾಮಾನ್ಯವಾಗಿ ಶೂದ್ರರು! ಕಾವೇರಿ ತೀರದ ಸಣ್ಣ ಮಠದ ಬಳಿ ಒಂದು ಶಿವಲಿಂಗವಿದ್ದ ಪುಟ್ಟ ಶಿವದೇವಾಲಯ ಮತ್ತು ಬಿಲ್ವಪತ್ರೆ ಮರವಿದ್ದಿದ್ದನ್ನು ಮತ್ತು ಕೆಲವು ಸಂಚಾರಿ ಶೈವ ಯೋಗಿಗಳಿದ್ದದ್ದನ್ನೂ ಬಾಲ್ಯದಲ್ಲಿ ನೋಡಿದ್ದೆ.

## ಮಿರ್ಲೆಯಲ್ಲಿ ಬಾಬಯ್ಯನ (ಮೊಹರಂ) ಹಬ್ಬದ ಆಚರಣೆಯ ನೆನಪುಗಳು:

ಮಿರ್ಲೆಯ ಕರೀಕಲ್ಲು ಬೀದಿಯಲ್ಲಿ ಒಂದು ಮಸೀದಿ ಇದೆ. ಪ್ರತೀ ವರ್ಷ ಮೊಹರಂ ಹಬ್ಬವನ್ನು (ಬಾಬಯ್ಯನ ಹಬ್ಬಎನ್ನುತ್ತಿದ್ದರು) ವೇಷದಾರಿಗಳ ಮೆರವಣಿಗೆ-ಕುಣಿತಗಳೊಂದಿಗೆ ಆಕರ್ಷಕವಾಗಿ ಆಚರಿಸಲಾಗುತ್ತಿತ್ತು. ಮಸೀದಿಯಿಂದ ಹೊರಡುತ್ತಿದ್ದ ಮೆರವಣಿಗೆಯಲ್ಲಿ ಹೆಚ್ಚಿನ ವೇಷದಾರಿಗಳು ಹಿಂದೂಗಳೇ ಆಗಿರುತ್ತಿದ್ದರು. ಸುಮಾರು 36 ವರ್ಷದ ಆಳ್ವಿಕೆಯಲ್ಲಿ ಹೈದರ್ ಅಥವ ಟಿಪ್ಪು ಮಿರ್ಲೆಗೆ ಭೇಟಿ ನೀಡಿದ ಬಗ್ಗೆ ಯಾವುದೇ ಮಾಹಿತಿ

ಇದ್ದಂತಿಲ್ಲ. ನನ್ನ ಬಾಲ್ಯದಲ್ಲಿ ಮಿರ್ಲೆಯಲ್ಲಿ ನಾಲ್ಕೈದು ಮುಸಲ್ಮಾನ ಕುಟುಂಬಗಳು ಮಾತ್ರ ಇದ್ದುವು. ಇವರೆಲ್ಲರೂ ಹತ್ತಿರದ ಹಂಪಾಪುರ ಮತ್ತು ಭೇರ್ಯ ದಿಂದ ವಲಸೆ ಬಂದವರೆಂದು ಹಿರಿಯರು ಹೇಳುತ್ತಿದ್ದರು. ಸಾಬ್ಜಾನ್ ಎಂಬುವರು ಬಹಳಕಾಲ ಮಿರ್ಲೆಯಲ್ಲಿ ಅಂಚೆಪತ್ರಗಳನ್ನು ವಿತರಿಸುತ್ತಿದ್ದ ಜನಪ್ರಿಯ ಅಂಚೆಯಣ್ಣ. ಅವರ ಅಣ್ಣ ಬಾಬುಸಾಬ್ (ಅವರ ಬಾವಮೈದುನ ಬಷೀರ್ ನನ್ನ ಶಾಲಾ ಸಹಪಾಟಿ) ಒಂದು ಬಟ್ಟೆ ಅಂಗಡಿ ನಡೆಸುತ್ತಿದ್ದರು ಮತ್ತು ಅವರ ಇನ್ನೊಬ್ಬ ತಮ್ಮ ಅಬ್ದುಲ್ ಎಂಬುವರು ಶಾಲಾ ಉಪಾಧ್ಯಾಯರಾಗಿ ಕೆಲಸ ಮಾಡುತ್ತಿದ್ದರು. ಇವರಲ್ಲದೆ ಹಿರಿಯಣ್ಣನ ಗುಡಿ ಹಿಂಭಾಗದ ಧನದ ದೊಡ್ಡಿಗೆ ಸೇರಿಕೊಂಡತ್ತಿದ್ದ ಮಾಂಸದ ಅಂಗಡಿ ನಡೆಸುತ್ತಿದ್ದವರೊಬ್ಬರು ಮತ್ತು ಕೊಪ್ಪಲಲ್ಲಿ ಎತ್ತುಗಳಿಗೆ ಲಾಳ ಹಾಕುತ್ತಿದ್ದವರೊಬ್ಬರು ಮುಸಲ್ಮಾನರು ಮಾತ್ರ ಇದ್ದಂತೆ ನೆನಪು. ಕೆರೆ ಕೆಳಗಿನ ಮುಖ್ಯ ರಸ್ತೆ ಪಕ್ಕದಲ್ಲಿ ಮುಸಲ್ಮಾನರು ಪ್ರಾರ್ಥನೆ ಸಲ್ಲಿಸುತ್ತಿದ್ದರು. ಅಲ್ಲೇ ಹತ್ತಿರದಲ್ಲಿ ಹೆಣಗಳನ್ನು ಮಣ್ಣು ಮಾಡುತ್ತಿದ್ದರು. ಮಿರ್ಲೆಯಲ್ಲಿ ಬಾಬಯ್ಯನ ಹಬ್ಬವನ್ನು (ಮೊಹರಂ) ಈಗಲೂ ಹಾಗೆಯೇ ಆಚರಿಸಲಾಗುತ್ತಿದೆಯೆ?




---

**ಈ ಅಧ್ಯಾಯದ *ಪ್ರತಿಕ್ರಿಯೆಗಳು:***

**ಚನ್ನಕೇಶವ/ ಚನ್ನಿಗರಾಯ ದೇವಸ್ಥಾನ**

**ದಿನಕರ:** ಈಗ ಹನುಮಂತರಾಯನ ದೇವಾಲಯಕ್ಕೆ ಗೋಪುರ ಮಾಡಲಾಗಿದೆ.

**ಪ್ರಶಾಂತ್:** ಹೊಯ್ಸಳರು ಕಟ್ಟಿಸಿದ ಚನ್ನಕೇಶವ ದೇವಾಲಯಕ್ಕೆ ಗೋಪುರ ಇದೆ.

**ನಾಗರಾಜರಾವ್**: Nanage thilidahage prathistapane agiddu sumaru 1956ralli.



## ಅಮೃತೇಶ್ವರ ದೇವಸ್ಥಾನ

**ಪ್ರಶಾಂತ್:** ಅಮೃತೇಶ್ವರ ದೇವಸ್ಥಾನಕ್ಕೆ ಹಿಂದೆ ಈ ರೀತಿಯ ಗೋಪುರವಿತ್ತೇ? ಅಥವಾ ಇದು ಬೇರೆ ದೇವಸ್ಥಾನದ ಫೋಟೋ ಆಗಿರಬಹುದೇ? ಇದನ್ನು ಬಲ್ಲವರಷ್ಟೇ ಹೇಳಬೇಕು. ಗೋಪುರ ಹೊರತುಪಡಿಸಿ ಉಳಿದ ದೇವಸ್ಥಾನದ ಶಿಲ್ಪ ಕಲಾ ಮಾದರಿ ಹೋಲಿಕೆ ಯಾಗುತ್ತಿರುವುದು ಅನ್ನುಸುತ್ತಿದೆ.

**ಉ**: ಹೌದೆ? ಪ್ರಶಾಂತ್, ಫೋಟೊ ಸರಿಯಿದ್ದು ಮಾಹಿತಿ ತಪ್ಪಿರಬಹುದೆ? ಈಗ ಇರುವ ದೇವಸ್ಥಾನಕ್ಕೆ ಹೋಲಿಸಿ ಹಿರಿಯರಿಂದ ಧೃಡಪಡಿಸಲು ಸಾಧ್ಯವೆ?

**ಕಿಶೋರ್ ಕುಮಾರ್**: ಶ್ರೀಧರ್ ಸಾರ್ ಮಾದರಿಯಲ್ಲಿ ಸ್ವಲ್ಪ ಸಾಮ್ಯತೆಯಿದೆ, ಆದರೆ ಈ ಚಿತ್ರದಲ್ಲಿರುವ ಆಕೃತಿಯ ವಾಸ್ತುಶಿಲ್ಪ ಹಾಗೂ ಕೆತ್ತನೆಗಳು ಈಗಿರುವ ದೇವಸ್ಥಾನದಲ್ಲಿ ಕಾಣುವುದಿಲ್ಲ ಆದರೂ ಒಂದು ಸಾಧ್ಯತೆಯಿದೆ ದೇವಸ್ಥಾನದ ಸ್ಥಳಾಂತರ ಮಾಡಿ ಹೊಸದಾಗಿ ನಿರ್ಮಿಸುವಾಗ ಸರಿಯಾಗಿ ಹೊಂದಣಿಕೆಯಾಗದೇ ಬೇರೆ ಕಲ್ಲುಗಳನ್ನು ಉಪಯೋಗಿಸಿರಲೂ ಬಹುದು ಹಾಗೆ ಅಂದುಕೊಂಡರೆ ನನ್ನ ಮನದಲ್ಲಿ ಕಾಡುವ ಕೆಲವು ಪ್ರಶ್ನೆ ಮತ್ತು ಅನುಮಾನಗಳು ಹಳೆಯ ಕುರುಹುಗಳನ್ನು ಏನು ಮಾಡಿದರು? ಹಳೆ ದೇವಸ್ಥಾನವನ್ನು ಸ್ಥಳಂತರಿಸುವ ಅವಶ್ಯಕತೆಯೆನಿತ್ತು ಪ್ರಕೃತಿಯ ನಡುವೆ ಸುಂದರವಾದ ತಾಣವಾಗುತ್ತಿತ್ತಲ್ಲವೇ? ನನ್ನ ಪ್ರಕಾರ ದೇವಸ್ಥಾನದಂತ ಸ್ಥಳಗಳು ಊರ ಹೊರಗೆ ಪ್ರಶಾಂತವಾಗಿರಬೇಕು ಸ್ಥಳದ ಒಡೆಯರಿಗೆ ಬೇರೆ ಪರಿಹಾರ ಒದಗಿಸಿ ಮೂಲ ಜಾಗದಲ್ಲೇ ಪುನರ್ ನಿರ್ಮಾಣ ಮಾಡಬಹುದಿತ್ತಲ್ಲವೇ (ಈಗ ಯೋಗನರಸಿಂಹ ದೇವಸ್ಥಾನ ಮಾಡಿರುವ ರೀತಿ) ? ಇದು ಸುಂದರ ವಾಸ್ತುಶಿಲ್ಪ ಹಾಗೂ ಇತಿಹಾಸದ ಕೊಲೆಯಲ್ಲವೇ? ರಾಜರ ಕಾಲದ ದೇವಸ್ಥಾನದ ಸ್ಥಳ ಖಾಸಗಿ ಒಡೆತನಕ್ಕೆ ಸಿಕ್ಕಿದು ಹೇಗೆ? ದಬ್ಬಾಳಿಕೆಯೇ, ಒತ್ತುವರಿಯೇ ಅಥವಾ ದೇವಸ್ಥಾನ ತೆರವುಗೊಳಿಸಿದರೆ ಸಿಗಬಹುದಾದ ನಿಧಿ ಆಸೆಯೇ?

**ಕಿಶೋರ್ ಕುಮಾರ್**: @shridhar sir: ಸಾರ್ ಅಮೃತೇಶ್ವರ ದೇವಸ್ಥಾನದ ಮೂಲ ಸ್ಥಳವನ್ನು ನ್ಯಾಯಾಲಯದ ಮೊರೆ ಹೋಗಿ ಪುನಃ ಸರ್ಕಾರಿ ವಶಕ್ಕೆ ಪಡೆಯಬಹುದೇ? ಕಾರಣ ಇಷ್ಟೇ ಆ ಸ್ಥಳ ಪಡೆಯಬಹುದಾದರೆ ಸರ್ಕಾರ ಹಾಗೂ ಎಲ್ಲರ ಸಹಕಾರದೊಂದಿಗೆ ಆ ಜಾಗದಲ್ಲಿ ಒಂದು ಸುಂದರ ವಸ್ತುಸಂಗ್ರಹಾಲಯ ಹಾಗೂ ಹಿರಿಯರಿಗೆ ವಿಹಾರತಾಣ ನಿರ್ಮಿಸಬಹುದಲ್ಲವೇ? ಇದು ನನ್ನ ಸಲಹೆಯಷ್ಟೇ ಇದು ಸಾಧ್ಯವೇ ತಿಳಿಸಿ..

**ಪ್ರಶಾಂತ್:** ಚಿತ್ರದಲ್ಲಿ ದೇವಸ್ಥಾನದ ಭಾಗವು ವೃತ್ತಾಕಾರದಲ್ಲಿರುವುದು ಹೊರತು ಪಡಿಸಿ ಉಳಿದ ಶಿಲ್ಪ ಕಲೆಗಳನ್ನು ಹೋಲಿಕೆಗೆ ಒಳಪಡಿಸಬಹುದು. ಕಿಶೋರ್ ನಿಮ್ಮ ಮಾತಿನಲ್ಲಿ ಸತ್ಯವಿದೆ. ಈ

ಕುರಿತು ಮೊದಲು ಅದರ ಮಾಹಿತಿ ಕಲೆಹಾಕಬೇಕಾಗಿದೆ.

**ಉ:** ಚಾಮರಾಜ ನಾಲೆ ಬರುವ ಮುನ್ನ ದೇವಸ್ಥಾನ ಸಾರ್ವಜನಿಕ ಸ್ಥಳದಲ್ಲಿದ್ದಿರಬೇಕು ಮತ್ತು ಅದಕ್ಕೊಂದು ಸಾರ್ವಜನಿಕ ರಸ್ತೆಯೂ ಇದ್ದಿರಬೆಕು. ಆದರೆ ಮಿರ್ಲೆ ಪಂಚಾಯಿತಿ ಮತ್ತು ಪುರಾತತ್ವ ಶಾಸ್ತ್ರ ಮತ್ತು ವಸ್ತುಸಂಗ್ರಹಾಲಯ ಇಲಾಖೆ ಸ್ಥಳಾಂತರಿಸುವಾಗಲಾದರೂ ಇವಾವುದನ್ನೂ ಗಮನಿಸಲಿಲ್ಲವೆ? ನೀವು ಮುಂದುವರೆಯುವ ಮುನ್ನ ಇದು ಸುಲಭ ಸಾಧ್ಯವೆ ಮತ್ತು ಆ ಜಾಗದಿಂದ ಲಾಭ ಪಡೆದವರನ್ನು ಎದುರು ಹಾಕಿಕೊಳ್ಳುವ ಅನಿವಾರ್ಯತೆ ಗಮನದಲ್ಲಿಡಿ .

**ಈಶ್ವರ (ವಿರೂಪಾಕ್ಷೇಶ್ವರ/ ಅರ್ಕೇಶ್ವರ) ದೇವಸ್ಥಾನ**

**ಪ್ರಶಾಂತ್:** ಹಾಲಿ **ಸ್ನೇಕ್ ಶ್ಯಾಮ್** ಅವರ ಮುತ್ತಜ್ಜನವರಾದ ಮಿರ್ಲೆ ಅಂಗಡಿ ರಾಮಣ್ಣಯ್ಯನವರು ನಿರ್ಮಿಸಿದ ದೇವಸ್ಥಾನ. ಅಂದಿನ ಜಮಿನ್ದಾರರಾದ ಅವರು ಒಂದೇ ಕಡೆ ನೂರು ಎಕರೆ ಪ್ರದೇಶವನ್ನು ಹೊಂದಿದ್ದರು ಎಂಬುದು ವಿಶೇಷ. ನಂತರದ ದಿನಗಳಲ್ಲಿ ಭೂಸುಧಾರಣಾ ಕಾಯಿದೆಯಡಿ 'ಉಳುವವನೇ ಭೂಮಿಯ ಒಡೆಯ' ನಾಗಿ ತಮ್ಮ ಸ್ವಾಯತ್ತತೆಯನ್ನು ಕಳೆದುಕೊಂಡವರಲ್ಲಿ ಇವರ ಕುಟುಂಬದವರ ಪಾಲು ಹೆಚ್ಚಾಗಿದೆ. ತದನಂತರವೇ, ಇವರ ಕುಟುಂಬದ ಹೆಚ್ಚು ಸದಸ್ಯರು ಬೇರೆ ಪ್ರದೇಶಗಳತ್ತ ವಲಸೆ ಹೊರಟು ಹೋಗಿದ್ದಾರೆ. ಸದ್ಯಕ್ಕೆ ಉಳಿದ ಸದಸ್ಯರು ದೇವಸ್ಥಾನದ ಉಸ್ತುವಾರಿಯನ್ನು ನೋಡಿಕೊಂಡು ಬರುತ್ತಿದ್ದಾರೆ.

**ವಿ. ಸೂ:** ದೇವಸ್ಥಾನ ನಿರ್ಮಿಸಿದವರು M H ರಾಮಣ್ಣನವರ ಅಜ್ಜ, ಅಂಗಡಿ ರಾಮಣ್ಣನವರಲ್ಲ ಎಂದು ರವಿಶಂಕರ್ ತಿಳಿಸಿದ್ದರು.

**ಬಸವಣ್ಣನ ಗುಡಿ**

**ಪ್ರಶಾಂತ್**: His name is Kotanna (Kote Gowda).

ಮಿರ್ಲೆ MPR ಗೌಡ್ರು: ಈ ದೇವಸ್ಥಾನವನ್ನು ಈಗ ಒಡೆದು ಹಾಕಲಾಗಿದೆ ಮತ್ತು ಹೊಸದಾಗಿ ನಿರ್ಮಿಸಿ ಅರ್ಚಕರನ್ನು ನೇಮಿಸುತ್ತಾರೆ ಅಂತೆ

**ಪ್ರಶಾಂತ್**: It's not demolished. idol has been taken out for rejuvenating the temple and once it's completed the idol will be placed

ವಿಷ್ಣು**:** 2015 ralli nane paint madidde ; eevaga hosadaagi archaeology dpt noru kattuttiddare.

**M B ವಾಸುದೇವ**: ಈಗ ಜೋಡಿ ರಸ್ತೆ ಮಾಡಿ ಅರಳಿ ಮರ ಗಳನ್ನು ತೆಗೆದಿದ್ದು, ಬಸವಣ್ಣ ಗುಡಿಯನ್ನು ಉಳಿಸಿದ್ದಾರೆ

## ಆಧುನೀಕರಿಸಿದ ಹುಣಸಮ್ಮ ಮತ್ತು ಮಾರಮ್ಮನ ಗುಡಿಗಳು

**ಪ್ರಶಾಂತ್:** ಹಳೇ ಗೋಡೆ ಎಂಬುದರ ಬಗೆಗೆ ವಿಶೇಷ ಅಭಿರುಚಿಯನ್ನು - ಆಶ್ಚರ್ಯವನ್ನು ಬೇರೊಬ್ಬರು ಹೊಂದಿರಬಹುದಲ್ಲವೆ..... ಯಾವುದೇ ಬದಲಾವಣೆ ಪೂರ್ವಯೋಜಿತವಾಗಿ ನಿಯೋಜಿತವಾದರೆ ಸರ್ವ ಕಾಲಕ್ಕೂ ತನ್ನ ವೈಶಿಷ್ಟತೆಯನ್ನು ಹಿಡಿದಿಟ್ಟುಕೊಳ್ಳುವದರಲ್ಲಿ ಯಶಸ್ವಿಯಾಗುತ್ತದೆ ಎಂಬುದರಲ್ಲಿ ನನ್ನ ನಂಬಿಕೆ.

**Shivuiyer Kumar**: Thanks, 1964 ನಲ್ಲಿ ನಡೆದ ಒಂದು ಘಟನೆ, ಹುಣಸಮ್ಮ ದೇವಸ್ಥಾನದ ಎಡ ಭಾಗದ ಹಿಂದಿನ ಮೂಲೆಯಲ್ಲಿ ಒಂದು ಹುಣಿಸ ಮರವಿತ್ತು, ಅದನ್ನು ಯಾರು ಒಂದು ರಂಬೆ ಕಡಿದಾಗ ದೇವರ ವಿಗ್ರಹದಲ್ಲಿ ಬಿರುಕು ಕಂಡು ಬಂದಿತ್ತು.

## ಪರಂಪರೆಯ (ಹೆರಿಟೇಜ್) ಸಂರಕ್ಷಣೆ

**ಪ್ರಶಾಂತ್:** Agree with you sir and I had discussed on the same with the relevant people before initiating the steps.... As I could say it was only an effort by individual person not as group.

Prashanth Mirle People who want to donate and who wishes to modify the same are in verge to bring new look for the temple.

Prashanth Mirle Sri Rama Temple is in process of losing its originality.... presently it has lost 'Bharathanatya Angala" and completely concretized in middle of temple... presently sad to say it is in depilated condition in one part

**ಕುಮಾರ್ ಭಾರದ್ವಾಜ್:** nimma mahitigagi devastanana punar nirmisilla hale devastanada concrete godege granite hakisiruvudu. devastanada angaldalli gobbali mullu tumba iddiddarinda janarige urulu seve madalu anukulavaguvante cement hakiside. Devastana odedu illa matte kattu illa.

Idarinda parampare nasha agide anta heloke sadhya illa
**ಪ್ರಶಾಂತ್ ಮಿರ್ಲೆ:** ಉರಳು ಸೇವೆಯ ಬಗ್ಗೆ ನಿಮ್ಮ ಕಾಳಜಿ ಪ್ರಶಂಸನೀಯ….. ಅದರೆ ಉರುಳು ಸೇವೆಯ ಕಲ್ಪನೆ ಮತ್ತು ದೇವಸ್ಥಾನದ ಭಕ್ತಿಯ ಪ್ರತೀಕ ಆಚರಣೆಯಲ್ಲಿರುವ ನಂಬಿಕೆಗಳು ಬಹಳ, ಆದರೆ ಇಲ್ಲಿವರೆಗೆ ನಡೆದುಕೊಂಡು ಬಂದ ನಂಬಿಕೆಗಳ ಮಾಹಿತಿಯ ಆಧಾರದ ಮೇಲೆ ದೇವಸ್ಥಾನದ ಅಭಿವೃದ್ಧಿಯ ಬಗ್ಗೆ ಬೇಕು-ಬೇಡಗಳ ಚರ್ಚೆ ಬೇಕಾಗಿತ್ತು ಅಷ್ಟೆ!.
ಈಗಾಗಲೇ ನಡೆದುಹೋದ ವಿಷಯಗಳಲ್ಲಿ ಭವಿಷ್ಯದ ಬುನಾದಿ ಹಾಕುವತ್ತ ನಮ್ಮ ಚರ್ಚೆ ನಡೆಯಲಿ. ದೇವಸ್ಥಾನದ ಭಕ್ತಿಯ ಪ್ರತೀಕ ಆಚರಣೆಯಲ್ಲಿರುವ ಇತರೇ ನಂಬಿಕೆಗಳನ್ನು ಪೂರ್ಣವಾಗಿ ತಿಳಿಸಿದರೆ…. ಇದೇ ವಿಷಯವಾಗಿ ಮಾಹಿತಿಯ ಹಸಿವನ್ನು ನೀಗಿಸಿದಂತೆ ಆಗುತ್ತದೆ ಎಂಬುದು ನನ್ನ ಭಾವನೆ.
ಹಳೇ ಗೋಡೆ ಎಂಬುದರ ಬಗೆಗೆ ವಿಶೇಷ ಅಭಿರುಚಿಯನ್ನು - ಆಶ್ಚರ್ಯವನ್ನು ಬೇರೊಬ್ಬರು ಹೊಂದಿರಬಹುದಲ್ಲವೆ….. ಯಾವುದೇ ಬದಲಾವಣೆ ಪೂರ್ವಯೋಜಿತವಾಗಿ ನಿಯೋಜಿತವಾದರೆ ಸರ್ವ ಕಾಲಕ್ಕೂ ತನ್ನ ವೈಶಿಷ್ಟತೆಯನ್ನು ಹಿಡಿದಿಟ್ಟುಕೊಳ್ಳುವದರಲ್ಲಿ ಯಶಸ್ವಿಯಾಗುತ್ತದೆ ಎಂಬುದರಲ್ಲಿ ನನ್ನ ನಂಬಿಕೆ.

## ಮಿರ್ಲೆಯಲ್ಲಿ ಬಾಬಯ್ಯನ (ಮೊಹರಂ) ಹಬ್ಬದ ಆಚರಣೆಯ ನೆನಪುಗಳು

**ಮಿರ್ಲೆ ಚಂದ್ರಶೇಕರ್:** ಬಷೀರಣ್ಣನವರು ಬಾಪುಸಾಹೇಬರ ಮಗನಲ್ಲ ಅವರ ಬಾವಮಹಿದ, ಅಯೂಭ್ ಖಾನ್ ಅವರ ಮೊದಲ ಮಗ, ನನ್ನ ಸಹಪಾಠಿ, 7ನೇ ತರಗತಿಯವರೆಗೆ ಓದಿ ಈಗ ಮೈಸೂರಿನಲ್ಲಿ ಆಟೋ ಓಡಿಸುತ್ತಿದ್ದಾರೆ, ನನಗೆ ಬಾಲ್ಯದಲ್ಲಿ ಆಪ್ತಸ್ನೇಹಿತನಾಗಿದ್ದ, ಕರೀಕಲ್ಲು ಬೀದಿಯಲ್ಲಿ ನಮ್ಮ ಪಕ್ಕದ ಮನೆಯೇ ಬಾಪುಸಾಹೇಬರ ಮನೆ ಅವರ ಮನೆಯಲ್ಲಿ ಅಯೂಬ್ ಜೊತೆ ಬಹಳಷ್ಟು ಕಾಲ ಕಳೆದಿದ್ದೇನೆ, ಹಬ್ಬದ ದಿನಗಳಂದು ಅವರ ಅಂಗಡಿಯಲ್ಲೇ ಬಟ್ಟೆ ಖರೀದಿಸುತ್ತಿದ್ದೆವು ಉರ್ದು ಶಾಲೆಯ ಮಹಿಳೆ ಟೀಚರ್ ರವರು(ಮೈಸೂರಿನವರು) ಪ್ರಾಥಮಿಕ ಶಾಲಾ ದಿನಗಳಲ್ಲಿ ನನಗೆ ಅವರು ಉಳಿದುಕೊಂಡಿದ್ದ ರೂಮಿನಲ್ಲಿ ಉಚಿತವಾಗಿ ಪಾಠ ಮಾಡುತ್ತಿದ್ದರು, ಅವರಿಗೆ ಧನ್ಯವಾದಗಳು, ಈಗ ಎಲ್ಲಿದ್ದಾರೋ ತಿಳಿಯದು. ಅವರು ಕೊಟ್ಟ ತಳಮಟ್ಟದ ಶಿಕ್ಷಣವೇ ನಾನಿಂದು ಇಂಜಿನಿಯರ್ ಮತ್ತು ಲೇಖಕ ಆಗಿರುವುದಕ್ಕೆ ಕಾರಣ. ಮಿರ್ಲೆಯಲ್ಲಿ ಎಂದಿಗೂ ಜಾತಿಧರ್ಮಗಳ ಜಗಳ ಆಗಿದ್ದು ನಾನು ಕಾಣೆ

**ರವಿಶಂಕರ್:** ಹಬ್ಬ ಮಗಿದ ಮೇಲೆ ಬಾಬಯ್ಯ ನಾ ಹೊಂಡದ ಭೂದಿ ಯನ್ನು ನಮ್ಮಗಳ ಮನೆಗೆ ಬಹು ಗೌರವದಿಂದ ತಲುಪಿಸುತ್ತಲಿದ್ದದ್ದು ನನಗೆ ನೆನಪಿದೆ. ಈ ಆಚರಣೆ ನಂತರ ನಿಂತದ್ದು ಯಾಕೆ ಅಂತ ಗೊತ್ತಾಗಲಿಲ್ಲ. ಅಯೂಬ್ ಖಾನ್ ನನ್ನ ಕ್ಲಾಸ್ ಮೆಟ್ agidda. ಹೊಟ್ಟೆಯನ್ನು ಉಬ್ಬಿಸಿ ನಮಗೆಲ್ಲ ಜಾದು ಮಾಡುತ್ತಲಿದ್ದ

**ದಿನೇಶ್ ಎಂ. ವಿ.** ಈಗಲೂ ಮಿರ್ಲೆಯಲ್ಲಿ ಪೋಸ್ಟ್ ಗಳನ್ನು ತಂದುಕೊಡುತ್ತಿರುವುದು ಸಾಬ್ಜಾನ್ ಅವರ ಮಗ ಪಾಷರವರೇ ಇರಬೇಕು.

---------------------------------------------------------------------------

# 6

# ಸಾಮಾಜಿಕ ಮತ್ತು ಸಾಂಸ್ಕೃತಿಕ ಜನಜೀವನ

## ಜಾತಿ, ಧರ್ಮ ಮತ್ತು ಕಸುಬುಗಳು

ಮಿರ್ಲೆ ಮೂಲತಹ ಕೃಷಿ ಪ್ರದಾನ ಹಿಂದು ಪ್ರದೇಶ. ಸಾವಿರ ವರ್ಷಗಳ ಇತಿಹಾಸದಲ್ಲಿ ಅನ್ಯಧರ್ಮೀಯರ ಮೇಲುಗೈಯಾದ ಸುಳಿವಿಲ್ಲ. ನಾಲ್ಕೈದು ಮುಸಲ್ಮಾನ್ ಬಂಧುಗಳ ಕುಟುಂಬಗಳನ್ನು ಮತ್ತು ಮಿರ್ಲೆಯ ಕರೀಕಲ್ಲು ಬೀದಿಯಲ್ಲಿರುವ ಒಂದು ಮಸೀದಿಯನ್ನು ಹೊರತು ಪಡಿಸಿದರೆ, ಸ್ವಾತಂತ್ರಪೂರ್ವದಲ್ಲಿ ದೇಶದ ಇತರ ಪ್ರದೇಶಗಳಂತೆ ಕ್ರಿಶ್ಚಿಯನ್ ಮಿಶಿನರಿಗಳ ಅಥವ ಮುಸಲ್ಮಾನ್ ಆಳ್ವಿಕೆಯ ಯಾವುದೇ ನೇರ ಪರಿಣಾಮ ಇದ್ದಂತಿಲ್ಲ. ಊರಿನ ಮುಖ್ಯ ಬೀದಿ, 11 ದೇವಸ್ಥಾನಗಳು, ಸಂಧ್ಯಾವಂದನೆ ಮಂಟಪ, ಶಾಸನಗಳು, ಸಾವಿರಾರು ಎಕರೆ ಜಮೀನಿನ ಒಡೆತನವನ್ನು ಗಮನಿಸಿದರೆ ಪರೋಕ್ಷವಾಗಿ ಮೂಲದಲ್ಲಿ ಮಿರ್ಲೆ ಬ್ರಾಹ್ಮಣ ಪ್ರಾಬಲ್ಯದ ಅಗ್ರಾಹಾರವಾಗಿದ್ದಿರಬೇಕು ಎಂದು ಸೂಚಿಸುತ್ತವೆ. ಚಾರಿತ್ರಿಕವಾಗಿ ಗಂಗರಿಂದ ಸಂಸ್ಥಾನದ ಒಡೆಯರ ಕಾಲದವರೆವಿಗೆ ಅಗ್ರಹಾರಗಳನ್ನು ಮತ್ತು ಜಮೀನುಗಳನ್ನು ಬ್ರಾಹ್ಮಣರಿಗೆ ದತ್ತಿ ನೀಡಿರುವುದು ಶಾಸನಗಳಿಂದ ತಿಳಿದುಬರುತ್ತದೆ.  ಮಿರ್ಲೆಯಲ್ಲಿ ಬ್ರಾಹ್ಮಣರನ್ನು ಹೊರತು ಪಡಿಸಿದರೆ ಮೂಲದಲ್ಲಿ ವ್ಯಾಪಾರಸ್ಥ ಬಣಜಿಗ ಶೆಟ್ಟರು ಇದ್ದಿರಬೇಕು. ಇತರ ಶೂದ್ರ ಮತ್ತು ಹರಿಜನರು ಕೃಷಿ ಕೆಲಸಕಾರ್ಯಗಳಿಂದಾಗಿ  ಸೇರಿರಬಹುದು. ತಾಲ್ಲೂಕಿನಲ್ಲಿ ಮರಾಠರು ವಿಶೇಷವಾಗಿ ಇದ್ದದ್ದರಿಂದ ಮಿರ್ಲೆಯಲ್ಲಿಯೂ ಒಂದೆರಡೂ ಮರಾಠ ಸಂಸಾರಗಳು, ವಿಶೇಷವಾಗಿ ಬಟ್ಟೆ ಮಾರುವವರು ಮತ್ತು ದರ್ಜಿಗಳು ಇದ್ದರು.

ಇಂದಿನ ಮಿರ್ಲೆಯಲ್ಲಿ ಬ್ರಾಹ್ಮಣ, ಮುಸ್ಲಿಮರಾದಿಯಾಗಿ ಎಲ್ಲ ಜಾತಿಯವರೂ ಕೃಷಿಕರು.

ಮಿರ್ಲೆಯಲ್ಲಿ ಹಲವಾರು ಜಾತಿಯವರಿದ್ದಾರೆ. ಆದರೆ, ಗಂಗಡಕಾರ ಒಕ್ಕಲಿಗರು (ಗಂಗಡಕಾರ ಎಂದರೆ ಗಂಗಾವಧಿಕಾರ ಅಥವ ಗಂಗರ ಆಳ್ವಿಕೆಯ ದೇಶದ ಪ್ರಜೆ ಎಂದರ್ಥ) ಸಂಖ್ಯೆಯಲ್ಲಿ ಹೆಚ್ಚಿದ್ದಾರೆ. ಸೀಮಿತ ಸಂಖ್ಯೆಯ ಮುಸಲ್ಮಾನರು ಬಹುಷಹ ಹೈದರಾಲಿ-ಟಿಪ್ಪುಸುಲ್ತಾನರ ಆಳ್ವಿಕೆಯಲ್ಲಿ ಸೇರಿರಬಹುದು. ಎಡತೊರೆಯಲ್ಲಿ (ಇಂದಿನ ಕೆ. ಆರ್. ನಗರದಲ್ಲಿ) 1780ರಲ್ಲಿ  ಸೆಂಟ್ ಆಂತೋಣಿ ಚರ್ಚ್ ಎಂಬ ರೋಮನ್ ಕ್ಯಾತೊಲಿಕ್ ಚರ್ಚ್ ಅರಂಭವಾಯಿತಾದರೂ ಮಿರ್ಲೆಯಲ್ಲಿನ ಕ್ರಿಶ್ಚಿಯನ್ನರ ಸಂಪೂರ್ಣ ಗೈರುಹಾಜರಿ ಗಮನಿಸಿದರೆ ಮಿರ್ಲೆಗೆ ಮಿಷನರಿಗಳು ಕಾಲಿಟ್ಟಂತಿಲ್ಲ. ಜೈನ ಅವಶೇಷಗಳು ದೊರೆತಿವೆಯಾದರೂ ಸರಿಯಾದ ಉತ್ಖನನ ಮತ್ತು ಶಂಶೋಧನೆ ನಡೆದಿಲ್ಲವಾಗಿ ನಿಖರ ಮಾಹಿತಿಯ ಕೊರತೆ ಇದೆ.

ಕೃಷಿಕ ಪ್ರಧಾನ ಸಮಾಜದಲ್ಲಿ ವೊಕ್ಕಲಿಗರಷ್ಟೆ ಅಲ್ಲದೆ ಬ್ರಾಹ್ಮಣರು, ಬಣಜಿಗ ಶಟ್ಟರು, ಇತ್ಯಾದಿ ಎಲ್ಲರೂ ವ್ಯವಸಾಯ ಮಾಡುತ್ತಲಿದ್ದರು. ಕೃಷಿಕರಿಗೆ ಒತ್ತಾಸೆಯಗಿದ್ದ ಬಡಗಿ, ಮಡಿವಾಳ, ಬಜ್ರಂತಿ, ಕಮ್ಮಾರ, ಗಾಣಿಗ, ಇತ್ಯಾದಿ ಜನಾಂಗದವರೂ ಕೆಲವರು ಕೃಷಿಯಲ್ಲಿ ತೊಡಗಿದ್ದರು. ಭಂಗಲೀ ಮಠದ ಎದುರಿಗೆ ಪ್ರತ್ಯೇಕ ಹರಿಜನ ಕೇರಿಯಲ್ಲದೆ ಮಾದಿಗರ ಮೂರು ನಾಲ್ಕು ಕುಟುಂಬಗಳು ಕೊಪ್ಪಲಿನಲ್ಲಿ ಸರ್ಕಾರಿ ಪ್ರೌಢ ಶಾಲೆಯಿಂದ ಉತ್ತರಕ್ಕೆ ನೆಲೆಯಾಗಿದ್ದವು. ಅದರ ಮುಖ್ಯಸ್ಥ ಶ್ರೀ ರಂಗ ಮತ್ತು ಆತನ ಮಡದಿ ಶ್ರೀಮತಿ ರಂಗಿ. ಅವರೆಲ್ಲರೂ ಉರಿನ ರಸ್ತೆ ಮತ್ತು ಚರಂಡಿಗಳನ್ನು ಸ್ವಚ್ಛವಾಗಿಡುವುದು, ಕಲುಷಿತವಾಗದಂತೆ ಬೇಸಿಗೆಯಲ್ಲಿ ಕೆರೆ ಕಾಯುವುದು, ಇತ್ಯಾದಿ ಪಂಚಾಯಿತಿಯ ಕೆಲಸಗಳನ್ನಲ್ಲದೆ ಸತ್ತ ದನಗಳನ್ನು ಊರಿಂದ ಹೊರಗೆ ಸಾಗಿಸುತ್ತಿದ್ದರು. ಹಿಂದೆ ಅಮೃತೇಶ್ವರ ದೇವಸ್ಥಾನದ ಮುಂಭಾಗ ಸ್ವಲ್ಪ ದೂರದಲ್ಲಿ ಸಣ್ಣ ಮಠಕ್ಕೆ ಹೋಗುವ ದಾರಿಯಲ್ಲಿ ದನಗಳ ಅಳಿದುಳಿದ ಕಳೇಬರ ಮತ್ತು ರಣ ಹದ್ದುಗಳನ್ನು ಬೇಸಿಗೆಯಲ್ಲಿ ಕಾಣಬಹುದಿತ್ತು.

## ಹಬ್ಬಗಳು

ಹಿಂದು ಪ್ರಧಾನವಾದ ಮಿರ್ಲೆಯಲ್ಲಿ ಜನವರಿಯ ಸಂಕ್ರಾಂತಿಯಿಂದ ಮೊದಲ್ಗೊಂಡು

ದೀಪಾವಳಿಯವರೆಗಿನ ಎಲ್ಲ ಹಬ್ಬಗಳನ್ನೂ ಆಚರಿಸುತ್ತಾರಾದರೂ, ಗೌರಿ ಮತ್ತು ಮಹಾಲಯ ಅಮಾವಾಸ್ಯೆ (ಪಕ್ಷ) ಗತಿಸಿದ ಪೂರ್ವಿಕರಿಗೆ/ ಹಿರಿಯರಿಗೆ ಎಡೆ ಇಡುವ ಮುಖ್ಯ ಹಬ್ಬಗಳು. ಊರಿನ ಕೆಲವು ಕುಟುಂಬಗಳು ಗೌರಿಯಲ್ಲಿ ಎಡೆ ಇಟ್ಟರೆ, ಮಿಕ್ಕವರು ಮಹಾಲಯ ಅಮಾವಾಸ್ಯೆಯಂದು ನಡೆಸುತ್ತಾರೆ. ಈ ಹಬ್ಬಗಳಿಗೆ (ಮತ್ತು ಹುಣಸಮ್ಮನ ಹಬ್ಬಕ್ಕೆ) ನೆಂಟರಿಷ್ಟರನ್ನು ಪರ ಊರಿನಿಂದಲೂ ಆಹ್ವಾನಿಸುತ್ತಾರೆ. ಮನೆಯೊಳಗೆ ಮೀಸಲು ಎಡೆಯಿಟ್ಟು, ಅದರ ಸ್ವಲ್ಪ ಭಾಗವನ್ನು ಮೊರದಲ್ಲಿ ಹಾಕಿ ಮನೆಯ ಮೇಲ್ಭಾಗದ ಚಾವಣಿಲ್ಲಿ ಇಟ್ಟು ಕಾಗೆಗಳು ತಿನ್ನಲಾರಂಭಿಸಿದ ಮೇಲೆ ಎಲ್ಲರೂ ಹಬ್ಬದ ಊಟಮಾಡುತ್ತಾರೆ. ಕಾಗೆ ರೂಪದಲ್ಲಿ ಗತಿಸಿದ ಹಿರಿಯರು ಮತ್ತು ನೆರಯ  ಅಥಿತಿಗಳು ಒಂದಕ್ಕಿಂತ ಹೆಚ್ಚು ಮನೆಗಳಲ್ಲಿ ಒತ್ತಾಯವಾಗಿ ಊಟ ಮಾಡಬೇಕಾಗುವುದರಿಂದ ಅಜೀರ್ಣವಾದರೆ ಆಶ್ಚರ್ಯವಿಲ್ಲ. ಈ ಹಬ್ಬಗಳಲ್ಲಿ ತಯಾರಿಸುವ ಕರಿದ ತಿಂಡಿಗಳು ವಾರಗಟ್ಟಲೆ ಆಟ ಆಡುವ ಮಕ್ಕಳ ಮತ್ತು ಗದ್ದೆ ಕಡೆ ಕೆಲಸಕ್ಕೆ ಹೋಗುವ ಗಂಡಸರ ಜೇಬುಗಳಲ್ಲಿರುತ್ತವೆ. ಗ್ರಾಮದೇವತೆ ಹುಣಸಮ್ಮನ ಹಬ್ಬಕ್ಕೂ (ಜಾತ್ರೆ) ನೆಂಟರಿಷ್ಟರನ್ನು ಕರೆದು ಅದ್ಧೂರಿಯಾಗಿ ಆಚರಿಸುತ್ತಾರೆ. ಈ ಸಂಬಂಧ, ಶ್ರೀ **ಎಂ ಪಿ ಶ್ರೀನಿವಾಸಾ ಚಾರ್ಯ** ಅವರು ಪ್ರತಿಕ್ರಿಯಾ ರೂಪದಲ್ಲಿ ವಿಶ್ವಕರ್ಮ ಜನಾಂಗದವರ ಸಾಂಸ್ಕೃತಿಕ ಮತ್ತು ಸಾಮಾಜಿಕ ಜಗತ್ತನ್ನ ತಮ್ಮ ಮಿರ್ಲೆಯ ನೆನಪುಗಳೊಂದಿಗೆ ಹೀಗೆ ಬಣ್ಣಿಸಿದ್ದಾರೆ.

---

ವಿಶ್ವಕರ್ಮಜನಾಂಗದವರು ಯಾವುದೇ ದುರಭ್ಯಾಸಗಳಿಗೆ ಅಂಟಿಕೊಳ್ಳದೇ ಇದ್ದದ್ದು ಸಹ ಹೆಮ್ಮೆಯ ವಿಷಯವೇ ಸರಿ.ಜೊತೆಗೆ ಮಕ್ಕಳ ಶಿಕ್ಷಣಕ್ಕೂ ಪ್ರಾಮುಖ್ಯತೆ ನೀಡುತ್ತಿ ದ್ದುದು ಹೆಮ್ಮೆಯ ವಿಷಯವಾಗಿತ್ತು. ಹೆಚ್ಚಿನ ಶಿಕ್ಷಣಕ್ಕೆ ಆರ್ಥಿಕವಾಗಿ ಸಬಲರಾಗಿಲ್ಲದಿದ್ದರು. ಉಪಾಕರ್ಮ, ಹರಿಸೇವೆ/ ಪರಗಳನ್ನು ಒಟ್ಟಾಗಿ ಸಂಭ್ರಮಿಸುತ್ತಿದ್ದರು. ನಮ್ಮ ಕುಟುಂಬದವರು ಶ್ರಮಜೀವಿಗಳಾಗಿದ್ದರೂ ಸಹ ಬಿಡುವಿನ ವೇಳೆಯಲ್ಲಿ ಸಾಂಸ್ಕೃತಿಕ,ಸಾಹಿತ್ಯಾತ್ಮಕ ಚಿಂತನೆಗಳು,ಶ್ರಾವಣ,ಕಾರ್ತೀಕ, ಧನುರ್ಮಾಸಗಳಲ್ಲಿ ಮನೆಯ ಜಗುಲಿಯ ಮೇಲೆ ರಾಮಾಯಣ, ಮಹಾಭಾರತ ವಾಚನಗಳು, ಹರೀಕಥೆಗಳು ಜರುಗುತ್ತಿದ್ದದ್ದು ನೆನಪಿವೆ.ಬೊಂಬೆಯಾಟ ಪ್ರದರ್ಶನ ಮಾಡುವವರು ಬಂದರೆ ಪ್ರೋತ್ಸಾಹ ನೀಡುತ್ತಿದ್ದರು. ಹಳಮಕ್ಕಳು, ಇತರ ನೆಂಟರಿಷ್ಟರು ಆಗಮಿಸಿದರೆ ಮನೆಯಲ್ಲಿ ಸಂಭ್ರಮಿಸುತ್ತಿದ್ದರು. ಶನಿದೇವರ ಕಥೆಗಳ ಪ್ರವಚನ ಮಾಡುತ್ತಿದ್ದುದೂ ಹೌದು. ನಮ್ಮ ಚಿಕ್ಕಪ್ಪ

ಹೊನ್ನಾಚಾರ್ ಮಾಸ್ಟರ್ ಹಾಗು ಶಿವರಾಮಯ್ಯನವರು ಪಗಡೆ ಆಡಲು ಕುಳಿತರೆಂದರೆ ಸಮಯದ ಪರಿವೆಯೇ ಇರುತ್ತಿರಲಿಲ್ಲ. ಇಂದಿಗೂ ಆ ಆನೆದಂತದ ಪಗಡೆ ದಾಳಗಳು.ಕಸೂತಿಯ ಪಗಡೆ ಮಣೆ ನಮ್ಮಲ್ಲಿವೆ.ನೆರೆ ಹೊರೆಯ ಹೆಂಗಸರು ನಮ್ಮ ಮನೆಯಲ್ಲಿ ಹಳುಗುಳಿ ಮಣೆ ಆಟ , ಚೌಕಾಬಾರಗಳನ್ನು ಆಡುತ್ತಿದ್ದುದು ನೆನಪಿವೆ. ಒಟ್ಟಾರೆ ಕಷ್ಟಜೀವಿಗಳಾಗಿದ್ದರೂ ಈ ಸಾಂಸ್ಕೃತಿಕ ಸಾಹಿತ್ಯಾತ್ಮಕ ಚಟುವಟಿಕೆಗಳು,ಅಣ್ಣ ತಮ್ಮಂದಿರು ಸೇರಿ ಪಕ್ಷದಲ್ಲಿ ತರ್ಪಣ ಕಾರ್ಯ ನೆರವೇರಿಸುತ್ತಿದ್ದುದು ಅವಿಸ್ಮರಣೀಯ. ಒಟ್ಟಿನಲ್ಲಿ ಮಿರ್ಲೆ ನಮ್ಮಲ್ಲಿ ಸಾಹಿತ್ಯ, ಸಂಸ್ಕೃತಿ, ಸಂಪ್ರದಾಯಗಳನ್ನ ಉಳಿಸಿಕೊಳ್ಳಲು ಸಹಕರಿಸಿದೆ. ಸಣ್ಣಾಮಟ್ಟ, ಕಾವೇರಿ ಹೊಳೆ,ತಾವರೆ ಕೆರೆ, ಪಿಳ್ಳಾಲುವೆ, ದೊಡ್ಡ ನಾಲೆ, ಗದ್ದೆಯಲ್ಲಿ ಹೊಂಗೆ ಮರದ ಮೇಲೆ ,ಮನೆಯಲ್ಲಿ ಸೀಮೆ ಎಣ್ಣೆ ದೀಪದ ಬೆಳಕಿನಲ್ಲಿ ಓದುವ ಪರಿ ,ವ್ಯವಸಾಯ ಸೇವಾ ಸಹಕಾರ ಸಂಘದ ಅಲ್ಪಾವದಿ ಸಾಲ,ಅಂದು ನಾವೆಲ್ಲ ಪದವೀದರರು ಸೇರಿ ಚಿಂತಿಸಿದ ಪದವೀದರರ ಸಹಕಾರ ಸಂಘ, ಮಿಥಿಲಾ ವಿದ್ಯಾ ಸಂಸ್ಥೆ, ಚಾವಡಿ,ಗಣಪತಿ ಉತ್ಸವ ಹಾಗು ಸಾಂಸ್ಕೃತಿಕ ಚಟುವಟಿಕೆಗಳು, ಚಲ್ಲಪ್ಪ ಶೆಟ್ಟರ ಜಗುಲಿ ಮೇಲಿನ ಗಮಕ ವಾಚನಗಳ ಹಿತವಾದ ನೆನಪು, ವಾಲಿಬಾಲ್,ಬಾಲ್ ಬಾಡ್ ಮಿಂಟನ್ ಪಂದ್ಯಾವಳಿಗಳು, ವಾಚನಾಲಯ , ಸೋಮವಾರದ ಸಂತೆ,ಟೆಂಟ್ ಸಿನಿಮಾ ಸವಿವನೆನಪುಗಳು ಕಾಡುತಿರುತ್ವೆ. ಇಂದಿಗೂ ಉತ್ತಮ ಸ್ನೇಹಿತರು ಹಾಗು ಸಹಪಾಟಿಗಳಿದ್ದಾರೆ, ನೆರೆಹೊರೆಯ ವರಿದ್ದಾರೆ.ಬಂಧುಗಳೂ ಹಾಗು ನಮ್ಮ ಮನೆ ವಿರೂಪಾಕ್ಷೇಶ್ವರ ರಸ್ತೆಯಲ್ಲಿದೆ ಎನ್ನುವುದು ಮಿರ್ಲೆಯ ಅವಿನಾಭಾವ ಸಂಬಂದ ಉಳಿಸಿ ಬೆಳಸುತ್ತಿವೆ.ನೆನಪು ಸಾವಿರಾರು.ಅನಂತಾನಂತ ಧನ್ಯವಾದಗಳು."ಜನನೀ ಜನ್ಮ ಭೂಮಿಷ್ಚ ಸ್ವರ್ಗಾದಪೀ ಗರೀಯಸಿ" .

-------------------------------------------------------------------

## ಭಜನಾ ಮಂಡಳಿಗಳು




ಮಿರ್ಲೆಯಲ್ಲಿ ಆ ಕಾಲಕ್ಕೆ ಎರಡು ಬಜನಾ ಮಂಡಳಿಗಳಿದ್ದುವು. ಅವು ಒಂದು ರೀತಿ ಇಂದಿನ ಸತ್ಸಂಗಗಳನ್ನು ಹೋಲುತ್ತಿದ್ದವು. ಒಂದು ಕರಿಕಲ್ಲು ಬೀದಿಯಲ್ಲಿ ಶ್ರೀಮತಿ ವೆಂಕಮ್ಮ ಮತ್ತು ಶ್ರೀಮತಿ ಗೌರಮ್ಮ ಅವರ ಮಹಿಳಾ ಮಂಡಳಿ. ಅಲ್ಲಿ ಶ್ರೀ ತಿಮ್ಮರಾಯಿ ಮತ್ತು ಆಧ್ಯಾತ್ಮಿಕ ಒಲವಿದ್ದ ಶ್ರೀ ಅಪ್ಪಸ್ವಾಮಿಯವರೂ ಸೇರುತ್ತಿದ್ದರು ಎಂದು ತಿಳಿಯಿತು. ಅವರು ಬೀದಿ ಮೇಲೆ ಭಜನೆ ಹಾಡುತ್ತಾ ಬರುತ್ತಿರಲಿಲ್ಲ, ಮನೆಯಲ್ಲಿ ಅಥವ ಕಾವೇರಿ ತೀರದ ಸಣ್ಣ

ಮಠದಲ್ಲಿ ಕಾರ್ಯಕ್ರಮ ನಡೆಸುತ್ತಿದ್ದರು. ಎರಡನೆಯ ಭಜನಾ ಮಂಡಳಿ, ಕಾಲುವೆ ಬೀದಿ ಶ್ರೀ ರಾಚೇಗೌಡರ ಮನೆಯಲ್ಲಿ ನಡೆಯಿತ್ತಿತ್ತು. ಇವರು ಪ್ರತೀ ಶನಿವಾರ ರಾತ್ರಿ ತಪ್ಪಿಸದೆ ಮುಖ್ಯ ಬೀದಿಗಳಲ್ಲಿ ಗುಂಪಿನಲ್ಲಿ ನಿಧಾನವಾಗಿ ಸಂಚರಿಸಿ ಬಜನೆ ಮಾಡುತ್ತಿದ್ದರು. ಮಿರ್ಲೆ ಕಾಲುವೆ ಬೀದಿ ರಾಚಪ್ಪನವರು (***ಶ್ರೀ ರಾಚೇ ಗೌಡ)*** ದಶಕಗಳ ಕಾಲ ಪ್ರತೀ ಶನಿವಾರ ರಾತ್ರಿ ಸಹಪಾಟಿಗಳೊಂದಿಗೆ ಊರಿನ ಮುಖ್ಯ ಬೀದಿಗಳಲ್ಲಿ ಭಜನೆ ಮಾಡುತ್ತಿದ್ದದ್ದು ಜ್ಞಾಪಕಕ್ಕೆ ಬಂತು. ಕಾಲಕ್ರಮೇಣ ಸಾತ್ ಕೊಡುವವರಿಲ್ಲದಾಗಲೂ ಒಂಟಿಯಾಗಿ ಒಂದು ಮಗುವನ್ನು (ಅವರ ಮಗ ಇರಬೇಕು) ಜೊತೆಗೂಡಿಸಿಕೊಂಡು ದೀಪದ ಕಂಬ ಮತ್ತಿತರ ಭಜನೆ ಸಲಕರಣೆಗಳೊಂದಿಗೆ ತಪ್ಪದೆ ನಿಷ್ಠೆ ಮತ್ತು ಸಮರ್ಪಣಾ ಭಾವದಿಂದ ಭಜನೆ ಮುಂದುವರೆಸುತ್ತಿದ್ದರು ಎಂದು ನೆನಪು. ನನಗೆ ಅವರು ಅಷ್ಟು ನಿಕಟವಾಗಿ ಗೊತ್ತಿಲ್ಲದಿದ್ದರೂ ಧಾರ್ಮಿಕ ಮತ್ತು ಸಾತ್ವಿಕ ಮನೋಧರ್ಮದವರು ಎನ್ನಿಸಿತ್ತು. ಮಿರ್ಲೆಯ ವಿಶಿಷ್ಟ ವ್ಯಕ್ತಿಗಳ ನನ್ನ ಪಟ್ಟಿಯಲ್ಲಿ ಭಜನೆ ರಾಚಪ್ಪನವರೂ ಒಬ್ಬರು. ಮಿರ್ಲೆಯಲ್ಲಿ ಭಜನೆ ಸಂಸ್ಕೃತಿ ರಾಚಪ್ಪನವರೊಂದಿಗೆ ಮುಗಿದಿರಬೇಕು. ನಿರಂತರವಾಗಿ, ಕೆಲವೊಮ್ಮೆ ಒಂಟಿಯಾಗಿ, ಊರಿನ ಮುಖ್ಯಬೀದಿಗಳಲ್ಲಿ ತಪ್ಪದೆ ಭಜನೆ ನಡೆಸುತ್ತಿದ್ದ ಒಬ್ಬ ಅಪರೂಪದ ಸಾತ್ವಿಕ ಶ್ರೀಮಾನ್ ರಾಚೇಗೌಡ ಸುಮಾರು 105 ವರ್ಷಕ್ಕೂ ಮಿಗಿಲಾಗಿ ಬದುಕಿದ್ದು ಏಪ್ರಿಲ್ 17, 2010 ರಂದು ದೈವಾಧೀನರಾದರು. ಈ ಧೀರ್ಘಾಯುಷಿ ಮಿರ್ಲೆಯ ಅತ್ಯಂತ ಹೆಚ್ಚು ಕಾಲ ಬದುಕಿದ್ದವರು ಎಂದು ತೋರುತ್ತದೆ.

## ಶತಮಾನದ ಹಿಂದಿನ ಮಿರ್ಲೆ ಮದುವೆ ವೈಭವ

ಮಿರ್ಲೆ ಎಡತೊರೆ ತಾಲ್ಲೂಕಿನ ಭಾರೀ ಗ್ರಾಮ, ಸಂಪತ್ತುಳ್ಳ ಗ್ರಾಮ ಎಂದೆಲ್ಲಾ ಬಣ್ಣಿಸುವ, ೧೧೫ ವರ್ಷ ಹಿಂದಿನ ಅಮುಲ್ದಾರ್ ನವರತ್ನ ರಾಮರಾವ್ ಅವರು, ಪ್ರತ್ಯಕ್ಷ ಸಾಕ್ಷಿಯಾಗಿ ಮಿರ್ಲೆಯ ಶ್ರೀಮಂತ ಗೌಡರೊಬ್ಬರ ಮನೆಯ (1902ರ ಸುಮಾರಿನ) ಮದುವೆಯ ವೈಭವವನ್ನು ಹೀಗೆ ಚಿತ್ರಿಸುತ್ತಾರೆ. ಊರಿನ ದೊಡ್ಡ ಬೀದಿಯೆಲ್ಲಾ ವಸಂತ ಸಂಭ್ರಮ ನೆರೆದಂತೆ ಒಂದೇ ಚಪ್ಪರ ಹಾಕಿ ಕಂಬಗಳಿಗೆ ನಿಬಿಡ ಮಲ್ಲಿಗೆ ಮೊಗ್ಗು ಕಟ್ಟಿ ಚಾವಣಿಗೆ ಕೆಂಪುಮಲ್ಲಿನ ಮೇಲೆ ಗುನ್ನಾಂಪಟ್ಟಿ ಬೇಲು ಅಂಟಿಸಲಾಗಿತ್ತು. ಗರ್ಭಗುಡಿಯೋ

ವಿಮಾನವೋ ಎಂಬಂತಹ ಮುಸಲ್ಮಾನ್ ಕುಶಲರು ತಯಾರಿಸಿದ 'ತಬೂತ್' ತರಹದ ಸುಂದರವಾದ ಒಳಗೂಡಿನಲ್ಲಿ ನವ ದಂಪತಿಗಳು ಕುಳಿತಿದ್ದರು. ಅತಿಥಿ ಸಾಲುಗಳ ಮದ್ಯದಲ್ಲಿ, ಕ್ಲುಪ್ತವಾದ ರಂಗದಲ್ಲಿ, ವೇಶ್ಯೆಯರ ಮೇಳನೃತ್ಯಗಳು ನಡೆಯುತ್ತಿದ್ದವು. ಮಿರ್ಲೆಯವರು ಮೈಸೂರಿನಿಂದ ಮತ್ತು ತಿರುಮಕೂಡಲಿಂದ ಹೆಸರುವಾಸಿಯಾದ ಇಬ್ಬರು ನರ್ತಕಿಯರನ್ನೂ ಅವರ ಪಾರ್ಟಿಗಳನ್ನೂ ಕರೆಸಿದ್ದರು. ಪೈಪೋಟಿಗೆ ಬೀಗರು ತಂಜಾವೂರಿನಿಂದ ಗ್ರಾಮಫೋನ್ ವಿಖ್ಯಾತರಾದ ಇಬ್ಬರು ಸಂಗೀತಗಾರರನ್ನು ಹಿಮ್ಮೇಳ ಸಹಿತ ಕರೆಸಿದ್ದರು. ಮೈಸುರು ನಾಯಕಸಾನಿ ಮತ್ತು ತಂಜಾವೂರು ಅಪ್ಸರೆ ಬೀಗರುಗಳಿಗೆ ಹಾರ ಹಾಕಿ ಸ್ವಾಗತಿಸಿದರು. ಮದುವೆ ಉತ್ಸವಗಳು ಏಳು ದಿನ ಬಹಳ ವಿಜೃಂಬಣೆಯಿಂದ ನಡೆದವು.  ಬೀಗರ ಊರಿಗೆ 50 ಗಾಡಿ ಬಂದಿತ್ತು, ಬೀಗರ ಔತಣಕ್ಕೆ 5 ಪಲ್ಲ ಅಕ್ಕಿ ಬೆಂದಿತು, ಮೆರವಣಿಗೆಯಲ್ಲಿ 10 ಜೊತೆ ಮೇಳ ಇದ್ದವು, ಇತ್ಯಾದಿಯಾಗಿ ವೈಭವವನ್ನು ವರ್ಣಿಸುವ ಪದ್ದತಿಯಿತು ಎನ್ನುತ್ತಾರೆ ನವರತ್ನ ರಾಮರಾವ್.

ಇಂದಿನ ಮದುವೆಗಳ ಅದ್ದೂರಿತನ ಮತ್ತು ವೈಭವಕ್ಕೆ ಹೋಲಿಸಿದರೆ ಅಂದಿನ ವೈಭವ ಕಡಿಮೆ ಎನಿಸಿದರೂ ಆ ಕಾಲಕ್ಕೆ ಅದು ವಿರಳಾತಿವಿರಳ ವೈಭವವೆ ಸರಿ. ನನ್ನ ತಾಯಿ ಅವರ ಬಾಲ್ಯದಲ್ಲಿ, ಅಂದರೆ 1910ರ ಸುಮಾರಿಗೆ, ಮದುವೆಗಳಿಗೆ ಮೈಸೂರಿನಿಂದ ವೇಶ್ಯೆಯರನ್ನು ಕರೆಸುತ್ತಿದ್ದರು ಎನ್ನುತ್ತಿದ್ದಾಗ ನನಗೆ ನಂಬಲಾಗುತ್ತಿರಲಿಲ್ಲ. ಆದು ಸತ್ಯವಿರಬೇಕು ಎಂದು ಈಗ ಅನ್ನಿಸುತ್ತಿದೆ!  ಮೈಸೂರು ಸಂಸ್ಥಾನದ ಮೊದಲ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದ 'ಮಿರ್ಲೆ ರಾಮೇಗೌಡ' ರ ವಂಶಸ್ಥರು ಯಾರು ಎಂದು ತಿಳಿಯಲಾಗದ ನಮಗೆ 115 ವರ್ಷ ಹಿಂದಿನ ಇಂತಹ ವೈಭವದ ಮದುವೆ ಯಾರ ಮನೆಯದ್ದು  ಎಂದು ತಿಳಿಯಲಾದೀತೆ? ಈ ವೈಭವದ ಕುರುಹುಗಳಾಗಿ ಈಗ ಏನೂ ಉಳಿದಂತಿಲ್ಲ. ಶ್ರೀ ರಾಮರಾವ್ ಅವರು ಕೂಡ ಹೆಸರು ಶ್ರೀ ಲಕ್ಷ್ಮೀಗೌಡ ಎಂದು ಇಟ್ಟುಕೊಳ್ಳಿ ಎಂದಿದ್ದಾರೆ. ಈ ರೀತಿ ಅದ್ದೂರಿ ಮದುವೆಗಳಿರಲಿಲ್ಲವಾದರೂ, 50-60 ವರ್ಷಗಳ ನಂತರವೂ  ನನ್ನ ಬಾಲ್ಯದಲ್ಲಿ (1950 ಮತ್ತು 60ರ ದಶಕದಲ್ಲಿ) ಮಿರ್ಲೆ ಶ್ರೀಮಂತರ ಮನೆ ಮದುವೆಗಳಲ್ಲಿ ಬೀದಿಗೆಲ್ಲಾ ಚಪ್ಪರ ಹಾಕುವುದು, ಬಣ್ಣದ ಕಾಗದಗಳಿಂದ

ಅಲಂಕೃತವಾದ ಮುಹೂರ್ತಮಂಟಪ, ಕೊಯಮತ್ತೂರಿನಿಂದ ಓಲಗದವರನ್ನು ಕರೆಯಿಸುವುದು, ಕಾರಿನಲ್ಲಿ ಮೆರವಣಿಗೆ, ಇತ್ಯಾದಿ ಸಾಮಾನ್ಯವಾಗಿತ್ತು. ಅಪರೂಪಕ್ಕೆ ಮದುವಣಿಗನನ್ನು ಸಾಲಂಕೃತವಾದ ಬಲಿಷ್ಠ ಬಿಳಿ ರೇಸ್ ಕುದುರೆ ಮೇಲೆ ಮೆರವಣಿಗೆ ಮಾಡಿ ಕರೆತರುವುದು, ಆರತಕ್ಷತೆಗೆ ಆರ್ಕೆಷ್ಟ್ರಗಳನ್ನು ಏರ್ಪಡಿಸುವುದನ್ನೂ ನೋಡಿದ ನೆನಪು. ಹೀಗೆ ಅದ್ಧೂರಿ ಮದುವೆ ಹಾಗೂ ಹೆಚ್ಚು ವರದಕ್ಷಿಣೆಗಾಗಿ ಹೊರಗಿನವರಿಗೆ ಮಿರ್ಲೆ ಜಮೀನ್ದಾರ್ ಗೌಡರುಗಳ ಮನೆ ಹೆಣ್ಣು ತರಬೇಕು ಎಂಬ ಬಯಕೆಯಿತ್ತು ಎಂದು ಹೇಳಲಾಗುತ್ತಿತ್ತು. ಆಗ ಮುಖ್ಯವಾಗಿ ಇಂದಿನಂತೆ ಛತ್ರ/ ಹಾಸ್ಟೆಲ್ ಅಂಗಳ, ಅಡಿಗೆಯವರು, ಪರಿಕರಗಳು, ಇತ್ಯಾದಿ ಬಾಡಿಗೆಗೆ ತರುವ ಪದ್ಧತಿ ಇರಲಿಲ್ಲ. ಎಲ್ಲವೂ ಸಾಮೂಹಿಕ ಸಹಕಾರದೊಂದಿಗೆ ನಡೆಯುತ್ತಿದ್ದದ್ದು ವಿಶೇಷ. ಅಂತಹ ಮದುವೆಗಳ ಫೋಟೊ ನನ್ನ ಬಳಿ ಇಲ್ಲದ್ದು ಒಂದು ಕೊರತೆ! ಇತ್ತೀನ ವರ್ಷಗಳಲ್ಲಿ ಪ್ರೌಢ ಶಾಲಾ ಹಾಸ್ಟೆಲ್ ಅಂಗಳಲ್ಲಿ ಮದುವೆಗಳು ನಡೆಯುತ್ತಿವೆ.

## ಮಿರ್ಲೆ ಗ್ರಾಮ ದೇವತೆಗಳು ಮತ್ತು ಜಾತ್ರೆಗಳು

ಹಿರಿಯಣ್ಣ, ಮಾರಮ್ಮ ಮತ್ತು ಹುಣಸಮ್ಮ ಮಿರ್ಲೆಯ ಗ್ರಾಮದೇವತೆಗಳು. ಪ್ರಕೃತಿ ವಿಕೋಪ ಮತ್ತು ರೋಗರುಜಿನಗಳಿಂದ ರಕ್ಷಿಸಿಕೊಳ್ಳಲು ಪ್ರತಿ ಗ್ರಾಮ ಸೃಷ್ಟಿಸಿ ಮೊರೆ ಹೋಗುವ ದೇವತೆಗಳು. ಸುಮಾರು ನೂರು ವರ್ಷಗಳ ಹಿಂದೆ ಮಿರ್ಲೆಯಮ್ಮನಾಗಿದ್ದ ಗ್ರಾಮದೇವತೆ ಹುಣಸಮ್ಮನಾದದ್ದು ಯಾವಾಗ ಎಂಬುದೊಂದು ಕುತೂಹಲ. ಈಗ್ಗೆ 50-60 ವರ್ಷಗಳ ಹಿಂದೆ ಮೂಲ ದೆವಸ್ಥಾನಕ್ಕೆ ಸೇರಿದಂತೆಯೆ ಒಂದು ಹಳೇ ಹುಣಸೆಮರವಿತ್ತು. ಅದು ಈ ಹೆಸರಿನ ಬದಲಾವಣೆಗೆ ಕಾರಣವಾಯಿತೆ? ಹುಣಸಮ್ಮನ ಹಬ್ಬದ ತಂಬಿಟ್ಟಿನಾರತಿ ("ರಾವಳಿಗೆ-ದೀವಳಿಗೆ") ಉತ್ಸವದಲ್ಲಾದರೂ ಆರತಿ ಹೊತ್ತ ಹೆಂಗೆಳೆಯರು ಒಂದು ವಿಶೇಷ ಹುಣಸಮ್ಮನ ಪದ ಹಾಡುತ್ತಿದ್ದಿರಬೇಕು. ಜನಪದ ತಜ್ಞರು/ ಸಂಶೋಧಕರು ಹೇಳಬೇಕು. ಚಿತ್ರದಲ್ಲಿರುವುದು ಇತ್ತೀಚಿನ ವರ್ಷಗಳಲ್ಲಿ ಕಾಂಕ್ರೀಟ್ ಬಳಸಿ ಪುನರ್ ನಿರ್ಮಿಸಲಾದ ಹಿರಿಯಣ್ಣನ ದೇವಸ್ಥಾನ. ಇದು ವಿಗ್ರಹ ರಹಿತ ದೇವಸ್ಥಾನ. ಮೃದು ಪಾರಿವಾಳದ ಮರದ ಕಾಂಡದಿಂದ ವಾರ್ಷಿಕ ಜಾತ್ರೆಯ ಹಿಂದಿನ ದಿನ ಬಡಗಿ ನಿರ್ಮಿಸಿದ ವಿಗ್ರಹ ಪ್ರತಿಷ್ಠಾಪಿಸಿ,

ಹುಣಸಮ್ಮನ ಜಾತ್ರೆಗಿಂತ ಮೂರು ದಿನ ಮುಂಚೆ ಜಾತ್ರೆ ನಡೆಸಿ ಅಂದೇ ವಿಸರ್ಜಿಸುವ ಪದ್ದತಿಯ ಹಿಂದಿರುವ ಮೂಲ ಉದ್ದೇಶವೇನು? ಹಿರಿಯಣ್ಣನ ವಾರ್ಷಿಕ ಉತ್ಸವ-ಜಾತ್ರೆ ಬಗ್ಗೆ ಅಧ್ಯಾಯ 5ರಲ್ಲಿ (ಧೇವಸ್ಥಾನಗಳು) ಇಪ್ಪತ್ತನೇ ಶತಮಾನದ ಆದಿಯಲ್ಲಿ ಕೋಣಗಳನ್ನು ಬಲಿ ಕೊಡುತ್ತಿದ್ದದ್ದು, ದೂರದ ಊರುಗಳಿಂದ ಮಾಲೆ ಹಾಕಿ ಹರಕೆ ಹೊತ್ತು ಮುಡಿಪು ಬಿಡುತ್ತಿದ್ದ ಕೋಣಗಳು ಹಿರಿಯಣ್ಣನ ಜಾತ್ರೆ ಸಮಯಕ್ಕೆ ಸರಿಯಾಗಿ ತಾವಾಗಿಯೇ ದೇವಸ್ಥಾನದ ಬಳಿಗೆ ಬರುತ್ತಿದ್ದುದ್ದು, ಇತ್ಯದಿ ತಿಳಿಸಿದ್ದೇನೆ.



ನವಗ್ರಾಮ ದೇವತೆ ಹುಣಸಮ್ಮನ ರಥೋತ್ಸವ ಮತ್ತು ಒಂದು ದಿನದ ಜಾತ್ರೆ ಸುತ್ತಲ ಹತ್ತಾರು ಹಳ್ಳಿಗಳಿಗೂ ಅತೀ ಮುಖ್ಯವಾದ ಹಬ್ಬ, ಉತ್ಸವ ಮತ್ತು ಜಾತ್ರೆ. ಹಿಂದಿನ ದಿನ, ಅಂದರೆ ಶುಕ್ರವಾರ ರಾತ್ರಿಯೆ ಒಂಬತ್ತು ಗ್ರಾಮಗಳ ಸಾಲಂಕೃತ ರಥ ಮತ್ತು ಸಿಡಿಗಳನ್ನ ಎಳೆತಂದು ದೆವಸ್ಥಾನದ ಹೊರ ಬಯಲಿನಲ್ಲಿ ನಿಲ್ಲಿಸಲಾಗುತ್ತದೆ. ಅಂದು ರಾತ್ರಿಯೆ ಹಬ್ಬದ ತಂಬಿಟ್ಟಿನಾರತಿ ("ರಾವಳಿಗೆ-ದೀವಳಿಗೆ") ಹೊತ್ತ ಹೆಂಗೆಳೆಯರು ದೇವಸ್ಥಾನಕ್ಕೆ ಬಂದು ಪೂಜೆಯನ್ನು ಸಲ್ಲಿಸುತ್ತಾರೆ. ಶನಿವಾರ ಹಬ್ಬ ಮತ್ತು ಜಾತ್ರೆ. ದಿನವಿಡೀ ವಿಶೇಷ ಪೂಜೆ ನಡೆದು ಸಂಜೆ ಒಂಬತ್ತು ಊರಿನ ರಥ ಮತ್ತು ಸಿಡಿಗಳನ್ನು ಎಳೆದು ಉತ್ಸವ ಆಚರಿಸಲಾಗುತ್ತದೆ. ಅತ್ಯಂತ ಭಕ್ತಿ, ಮತ್ತು ಉತ್ಸಾಹ ತುಂಬಿದ ಕಾರ್ಯಕ್ರಮವಿದು.

***ನವ ಗ್ರಾಮ ದೇವತೆ ಹುಣಸಮ್ಮನ ಉತ್ಸವಕ್ಕೆ ಆಧುನಿಕತೆಯ ಸ್ಪರ್ಷ:*** ಇತ್ತೀಚಿನ ವರ್ಷಗಳಲ್ಲಿ ಹುಣಸಮ್ಮನ ಗುಡಿಗೆ ಚಿನ್ನದ ಬಣ್ಣ, ಶಾಮಿಯಾನ, ಉರುಳುಸೇವೆ, ಅಧುನಿಕ ತಮಟೆ, ಕುಣಿತ, ಎಲ್ಲೆಡೆ ಡಿಜಿಟಲ್ ಮುದ್ರಿತ ನಾಮಫಲಕಗಳು, ಇತ್ಯಾದಿ ಆಧುನಿಕ ಬದಲಾವಣೆಗಳೊಂದಿಗೆ ಅದ್ದೂರಿ ಉತ್ಸವ-ಜಾತ್ರೆ ನಡೆಯುತ್ತಿದೆ.

***ಗ್ರಾಮದೇವತೆ ಹುಣಸಮ್ಮನ ಪದ:*** "ಸಾವಿರ ವರ್ಷಗಳ ಇತಿಹಾಸವಿರುವ ಮಿರ್ಲೆಯ ಜನಪದ ಸಂಪತ್ತೇನು?" ಎಂದು ಈ ಹಿಂದೆ ಎತ್ತಿದ ಪ್ರಶ್ನೆಯ ಬೆನ್ನಲ್ಲೇ ಗ್ರಾಮದೇವತೆ ಹುಣಸಮ್ಮನ ಬಗ್ಗೆ ಜಾನಪದ ಹಾಡು ಇರಲಿಲ್ಲವೆ ಎಂಬುದೊಂದು ಬಲವಾದ ಅನುಮಾನ. ಹುಣಸಮ್ಮನ ಹಬ್ಬದ ತಂಬಿಟ್ಟಿನಾರತಿ ("ರಾವಳಿಗೆ-ದೀವಳಿಗೆ") ಉತ್ಸವದಲ್ಲಾದರೂ ಆರತಿ ಹೊತ್ತ ಹೆಂಗೆಳೆಯರು ಒಂದು ವಿಶೇಷ ಹುಣಸಮ್ಮನ ಪದ ಹಾಡುತ್ತಿದ್ದಿರಬೇಕು.

*ನೋಡಿ: **ಚುಂಚನಕಟ್ಟೆ ಜಾತ್ರೆಯ ನೆನಪುಗಳು**: "ಅಧ್ಯಾಯ 2 - ಮಿರ್ಲೆ ಹಿನ್ನಲೆ ಮತ್ತು ಹೆಸರು'*

***ಹುಣಸಮ್ಮ ಮತ್ತು ಹಿರಿಯಣ್ಣ ದೇವತೆಗಳ ಬಗೆಗಿನ ಮಾಹಿತಿಗೆ ಪ್ರತಿಕ್ರಿಯೆಗಳನ್ನು ಗಮನಿಸಿ ಎರಡು ಮಾತು:***

**೧. ಕಲ್ಪಿತ ಸ್ಥಳಪುರಾಣವಲ್ಲ, ನಮಗೆ ಸ್ಥಳೀಯ ಇತಿಹಾಸ ಬೇಕು**

ನಾನು ಈ ಹಿಂದೆ ಅಲೆಕ್ಸ್ ಹೆಲೆ (Alex Haley) ಎಂಬ ಅಮೆರಿಕಾದ ಜನಪ್ರಿಯ ಸಾಹಿತಿ ತನ್ನ ಬಾಲ್ಯದಲ್ಲಿ ಅಜ್ಜಿ ಹೇಳಿದ ಕಥೆಯಿಂದ ಪ್ರಭಾವಿತನಾಗಿ ಸುಮಾರು ಆರು ತಲೆಮಾರಿನ ಹಿಂದೆ ಆಫ್ರಿಕಾದಿಂದ ಬಂದ ತನ್ನ ಪೂರ್ವಜರನ್ನು ಹತ್ತು ವರ್ಷಗಳ ಕಾಲ ಮೂರು ಖಂಡಗಳಲ್ಲಿ ೫ ಲಕ್ಷ ಮೈಲಿ ಸಂಚರಿಸಿ ಆಫ್ರಿಕಾದ ಜಪ್ಫುರೆ (Juffure) ಎಂಬ ಹಳ್ಳಿಯಲ್ಲಿ ಪತ್ತೆ ಹಚ್ಚಿದೆ ಬಗ್ಗೆ ಮತ್ತು ಟಿ. ಎಸ್. ಸತ್ಯನ್ ಅವರು ಹೇಳಿದ "ತನ್ನ ಗತಕಾಲವನ್ನು ನೆನೆಸಿಕೊಳ್ಳದ, ಆ ಕಾಲದ ಘಟನೆಗಳನ್ನು ದಾಖಲಿಸಿಡದ ಮನುಷ್ಯ ಜಾತಿ ತನ್ನ ಕುಲಕ್ಕೇ ಹೊರತು" ಬಗ್ಗೆ ಹಾಗೂ ಇಂಗ್ಲೇಂಡಿನಾದ್ಯಂತ ಇರುವ ಸ್ಥಳೀಯ ಇತಿಹಾಸ ಕೇಂದ್ರಗಳ ಮಾದರಿ ಬಗ್ಗೆ ಪೀಠಿಕೆಯಲ್ಲಿ (ಅಧ್ಯಾಯ 1) ತಿಳಿಸಿದ್ದೇನೆ. ಸಾಂಸ್ಕೃತಿಕ ಸಿರಿವಂತಿಕೆ ಅದರ ಸಂರಕ್ಷಣೆಯಲ್ಲಿದೆಯೇ ಹೊರತು, ಸ್ಥಳಪುರಾಣಗಳನ್ನು ಸೃಷ್ಟಿಸಿ, ವೈಭವೀಕರಿಸುವುದರಲ್ಲಿ ಅಲ್ಲ ಎಂಬುದನ್ನು ಮನಗಾಣಬೇಕಾದರೆ ಇಂತಹ ಕೇಂದ್ರಗಳನ್ನು ಸಂದರ್ಶಿಸಿ ಅರಿಯಬೇಕು.

೨. ಕೆ. ಆರ್.ನಗರ ತಾಲ್ಲೂಕು ಆನ್ ಲೈನ್ ಸುದ್ದಿ ಪತ್ರಿಕೆ ನಾನು ಬರೆದ ಗ್ರಾಮ ದೇವತೆಗಳು ಟಿಪ್ಪಣಿಯನ್ನ ಯಥಾವತ್ತಾಗಿ 'ಮಿರ್ಲೆ ಪೀಪಲ್" ಗ್ರೂಪಿನಿಂದ ಪಡೆದು ಫೋಟೊಸಹಿತ ಮರುಪ್ರಕಟಿಸುವಾಗ ಮೂಲದ ಬಗ್ಗೆ ನಮೂದಿಸುವ (ಗ್ರಂಥಋಣ) ಖನಿಷ್ಠ ಸೌಜನ್ಯಾವನ್ನಾದರೂ ತೋರಿಸಬೇಕಿತ್ತು.

## ಮಹಿಳಾ ಶಿಬಿರ ಮತ್ತು ಮಹಿಳಾ ಸಮಾಜ

ಅಧ್ಯಾಯ 3 ರಲ್ಲಿ (ಮಿರ್ಲೆ ಇತಿಹಾಸ) ವಿವರಿಸಿರುವಂತೆ, **ಕಸ್ತೂರ್ ಬಾ ಮಹಿಳಾ ಶಿಬಿರ** ಸ್ವಾತಂತ್ರ್ಯ ಪೂರ್ವದ ಒಂದು ವಿಶೇಷ ಗಾಂಧೀ ಮಾರ್ಗದ ಸಂಘಟನೆ ಮತ್ತು ಸೇವಾ ಕೇಂದ್ರ. ಆದರೆ, ಮಹಿಳಾ ಸಮಾಜ ೬೦ರ ದಶಕದ ಒಂದು ಆಧುನಿಕ ಸಂಘ. ಮಹಿಳಾ ಸಮಾಜ ಒಂದು ಶಿಶುವಿಹಾರವನ್ನು ಆರಂಭಿಸಿತು ಮತ್ತು ಅದಕ್ಕೆ ಒಂದು ಕಟ್ಟಡವನ್ನು ಆಸ್ಪತ್ರೆ ಕಟ್ಟಡ ಕಟ್ಟಿಸಿಕೊಟ್ಟ ಸಾಹುಕಾರ್ ಕೋಟೇಗೌಡರೇ ಹನುಮಂತನ ಗುಡಿ ಆವರಣದಲ್ಲಿ ಕಟ್ಟಿಸಿಕೊಟ್ಟರು. ಮಿರ್ಲೆ ಇತಿಹಾಸದ ಭಾಗದಲ್ಲಿ ನೋಡಿ "ಅಧ್ಯಾಯ 3 – ಮಿರ್ಲೆಯಲ್ಲಿ ಗಾಂಧಿ ಆಶ್ರಮ ಪ್ರಭಾವಿತ ಕಸ್ತೂರ್ ಬಾ ಮಹಿಳಾ ಶಿಬಿರ ಮತ್ತು ಮಹಿಳಾ ಸಮಾಜ"

## ಮಿರ್ಲೆಗೆ ವಿಧ್ಯುಚ್ಛಕ್ತಿ ಬಂದ ಸಂಭ್ರಮ, ಹಿಟ್ಟು ಮತ್ತು ಅಕ್ಕಿ ಗಿರಣಿಗಳ ಆಗಮನ

ಸುಮಾರು 1953 ರಲ್ಲಿ ಮಿರ್ಲೆಗೆ ವಿಧ್ಯುಚ್ಛಕ್ತಿ ಬಂದಿತು. ಕಂಬಗಳನ್ನು ಎತ್ತಿ ನೆಡುವಾಗ ಕೆಲಸಗಾರರು ಗುಂಪಾಗಿ 'ಐಸ" ಎಂದು ತಮಗೆ ಇಷ್ಟವಾದ ನುಡಿಗಟ್ಟನ್ನು ಸೇರಿಸಿ ಹೇಳುತ್ತಿದ್ದದ್ದು ಎಲ್ಲರಿಗೂ, ವಿಶೇಷವಾಗಿ ಮಕ್ಕಳಿಗೆ, ಒಂದು ದೊಡ್ಡ ಸಂಭ್ರಮವಾಗಿತ್ತು. ನಂತರ ಬೀದಿ ದೀಪಗಳು, ನಾಲ್ಕು ಹಿಟ್ಟಿನ ಗಿರಣಿಗಳು ಹಾಗೂ ಮೂರು ಅಕ್ಕಿ ಗಿರಣಿಗಳು ಆರಂಭವಾಗಿ ಅಲ್ಲಿಯವರೆವಿಗೆ ಬಹಳ ಸಾಮಾನ್ಯವಾಗಿದ್ದ ನಸುಕಿನ ಬೀಸುವ ಕಲ್ಲು ಮತ್ತು ಭತ್ತ ಕುಟ್ಟುವ ಒನಕೆ ಶಬ್ಧಗಳು, ಮಹಿಳೆಯರ ಹಾಡುಗಳು ಕ್ರಮೇಣ ಮಾಯವಾದವು. ಇದೇ ಸಂದರ್ಭದಲ್ಲಿ ನಾವು ಅಮೂಲ್ಯವಾದ ಜಾನಪದ ಹಾಡುಗಳನ್ನು ಧಾಖಲಿಸದೆ ಕಳೆದುಕೊಂಡೆವು. ಗದ್ದೆಗಳಲ್ಲಿ ನಾಟಿಮಾಡುವಾಗ ಮತ್ತು ಕುಯಿಲಾದ ಭತ್ತದ

ಹುಲ್ಲೊಕ್ಕುವಾಗಲೂ ವಿಶೇಷವಾದ ಹಾಡುಗಳನ್ನು ಕೇಳಬಹುದಿತ್ತು. ಇದಾದ ಬಹಳ ವರ್ಷಗಳ ತನಕ, ಆದರೆ ಮಿಕ್ಸಿಗಳು ಬರುವವರೆವಿಗೆ ಒಳಕಲ್ಲು ಬಳಕೆ ಬಹಳ ಸಾಮಾನ್ಯವಾಗಿದ್ದಿತು.

## ಕಾಡಿನಿಂದ ಸೌದೆ (ಕಟ್ಟಿಗೆ) ಸಂಗ್ರಹಣೆ ಮತ್ತು ಸಾಗಣೆ:

ಮಿರ್ಲೆಯಲ್ಲಿ ಸುಮಾರು 1970ರ ವರೆವಿಗೂ (ಕೃಷಿಕರ) ಬೇಸಿಗೆಯ ಬಿಡುವಿನಲ್ಲಿ ಎತ್ತಿನಗಾಡಿಯಲ್ಲಿ ಗುಂಪಾಗಿ ರೊಟ್ಟಿಬುತ್ತಿಗಳೊಂದಿಗೆ ಕುಶಾಲನಗರ ಮತ್ತು ಹುಣಸೂರು ಕಾಡುಗಳಿಗೆ ಹೋಗಿ ಒಂದು ವಾರದಲ್ಲಿ ಸೌದೆ ತುಂಬಿ ತರುತ್ತಿದ್ದರು. ಅವರು ಹೇಳುತ್ತಿದ್ದ ರಸವತ್ತಾದ ಕಾಡಿನ ಅನುಭವದ ಪ್ರಸಂಗಗಳು ಮಕ್ಕಳಿಗೆ ಬಹಳ ಆಪ್ತವಾಗಿದ್ದವು.

## ಮನೆ ಮತ್ತಿತರ ಕಟ್ಟಡಗಳ ನಿರ್ಮಾಣ

ಸರಿಸುಮಾರು 1960 ತನಕ ಮಿರ್ಲೆಯಲ್ಲಿ ಕಾಲಿನಿಂದ ತುಳಿದು ಸಿದ್ಧಪಡಿಸಿದ ಮಣ್ಣಿನ ಗೋಡೆ, ಬಿದಿರು ಸೀಳಿ ಮಾಡಿದ ಜಂತಿ, ಕುಂಬಾರ ಮಾಡಿದ ನಾಡ ಹೆಂಚು (ಪಕ್ಕದ ನರಚನ ಹಳ್ಳಿ ಮತ್ತು ಕೊಡೆಯಾಲದಲ್ಲಿ ನಾಡ ಹಂಚನ್ನು ತಯಾರಿಸುತ್ತಿದ್ದರು), ಉಂಡೆ ಬಿದಿರಿನ ಕಂಭ, ಕಾಡು ಮರದ ಕೆತ್ತನೆ-ರಹಿತ ಒರಟು ಬಾಗಿಲು, ಖನಿಷ್ಟ ಅಳತೆಯ ಕಿಟಕಿ, ಸಗಣಿಯಿಂದ ಸಾರಿಸಿದ ನೆಲ, ಮನೆಯ ಒಳ ಅಂಗಳದ ಭಾಗವಾಗಿಯೆ ಒಂದು ಕಡೆ ದನಗಳ ಕೊಟ್ಟಿಗೆ ಸರ್ವೆಸಾಮಾನ್ಯವಾಗಿತ್ತು. ಕೆಲವೇ ಶ್ರೀಮಂತರು ಮಂಗಳೂರು ಹೆಂಚು, ಬಿಳೀ ಗಾರೆ, ಇಟ್ಟಿಗೆ, ಇತ್ಯಾದಿ ಬಳಸಿ ಮನೆ ಕಟ್ಟಿದ್ದರೆ, ಮಹಡಿ ಮನೆ ಬೆರಳೆಣಿಕೆಯಷ್ಟು ಮಾತ್ರ (ಬಹುಶಃ ಚಿಕ್ಕಣ್ಣನ ಸಣ್ಣಪ್ಪಾಜಿ ಗೌಡರದೆ ಮೊದಲ ಮಿರ್ಲೆಯ ಮಹಡಿ ಮನೆ. ಇಲ್ಲಿಯೇ ಕೆಲ ಕಾಲ ಮಹಡಿಯಮೇಲೆ ಸಬ್ ರಿಜಿಸ್ಟ್ರಾರ್ ಕಚೇರಿಯಿತ್ತು). ಸುಣ್ಣ, ಮರಳು ಬಳಸಿ ಬಿಳಿ ಗಾರೆಯನ್ನು ಕಡಿಮೆ ಪ್ರಮಾಣದಲ್ಲಾದರೆ ಒಳಕಲ್ಲಿನಲ್ಲಿಯೇ ರುಬ್ಬಿ ತಯಾರಿಸಿಕೊಳ್ಳುತ್ತಿದ್ದರು. ಹೆಚ್ಚಿನ ಪ್ರಮಾಣದಲ್ಲಿ ಬೇಕಾದಾಗ (ಗಾಣದ ಮಾದರಿಯಂತೆ) ಒಂದು ವೃತ್ತಾಕಾರದ ಗುಂಡಿ ಮಾಡಿ ರೋಣ ಕಲ್ಲನ್ನು ಎತ್ತುಗಳಿಂದ ಎಳೆದು ರುಬ್ಬಿಸುವ ಪದ್ಧತಿ ಇತ್ತು. ಕೊಪ್ಪಲಿನಲ್ಲಿ ಕಾಲುವೆಯ ಹೊಸ ಸೇತುವೆ ಪಕ್ಕದಲ್ಲಿ ಶ್ರೀ ಕರೀಗೌಡರು ಮನೆ

ಕಟ್ಟುವಾಗ  ಮತ್ತು ಮಾಧ್ಯಮಿಕ ಶಾಲಾ ಕಟ್ಟಡ ಕಟ್ಟುವಾಗ ಇಂತಹ ರೋಣಗಲ್ಲು ಮತ್ತು ಭಾವಿಯನ್ನು ನಿರ್ಮಿಸಿದ್ದು ನೋಡಿದ್ದೆ.  ಶಾಲಾ ಕಟ್ಟಡಕ್ಕಾಗಿ ನಿರ್ಮಿಸಿದ್ದ ಭಾವಿ ಬಹಳ ದೊಡ್ಡದಾಗಿತ್ತು. ಬಹಳ ಕಾಲದ ವರೆವಿಗೆ ಮರದ ದಿಮ್ಮಿ ಕೊಯ್ಯುವ ಹಳ್ಳ ಚಾಮರಾಜ ಕಾಲುವೆಯ ಹೊಸ ಸೇತುವೆಯ ಪಕ್ಕದಲ್ಲಿಯೇ ಶ್ರೀ ಕರೀಗೌಡರ ಮನೆ ಮುಂದೆ ಇತ್ತು. ಈ ಮಹಡಿ ಮನೆಗಳೆಲ್ಲವೂ ಮದರಾಸು ತಾರಿಸಿ ಮಾದರಿಯವುಗಳು. ಕಾಂಕ್ರೀಟ್ ತಾರಸಿಯ ಮನೆಗಳು ಮತ್ತು ಮಹಡಿಮನೆಗಳು 70ರ ದಶಕದಲ್ಲಿ ಆರಂಭವಾದುವು.

## *ಸ್ಮಶಾಣ - ಶವ ಸಂಸ್ಕಾರ*

ಕೆರೆಯಕೆಳಗಣ ಸಾರ್ವಜನಿಕ ಸ್ಥಳ, ಹುಣಸಮ್ಮನ ದೇವಸ್ಥಾನಕ್ಕೆ ಹೋಗುವ ದಾರಿಯ ರಸ್ಥೆಯ ಎಡಭಾಗದ ಸಾರ್ವಜನಿಕ ಸ್ಥಳ, ಹೊಳೆ ದಂಡೆ ಮತ್ತು ನಾಲಾ ಏರಿಗಳಲ್ಲದೆ ಖಾಸಗಿ ಹೊಲ ಗದ್ದೆಗಳಲ್ಲಿ ಶವ ಸಂಸ್ಕಾರ ಮಾಡಲಾಗುತ್ತಿತ್ತು.

**ಮೌಢ್ಯಾಚರಣೆ:** ಈ ಸಂಧರ್ಬದಲ್ಲಿಯೇ ಇಂದಿಗೂ ನಡೆಯುತ್ತಿರುವ ಮೌಢ್ಯಾಚರಣೆ ಬಗ್ಗೆ ಹೇಲಬೇಕೆನ್ನಿಸುತ್ತದೆ. ಈಗಲೂ ಮೌಢ್ಯಾರಾಧಕರು ಹೇರಳವಾಗಿದ್ದು ಮೌಢ್ಯೋತ್ಪಾಕದರು ತಮ್ಮ ಉದ್ಧೇಶವನ್ನು ಸತತ ನಿರಾತಂಕವಾಗಿ ಸಾಧಿಸಿಕೊಳ್ಳುತ್ತಿದ್ದಾರೆ ಎನ್ನಬಹುದು. ವ್ಯಕ್ತಿಗತವಾದ/ ವೈಯಕ್ತಿಕ ಮೌಢ್ಯಾಚರಣೆಯಿಂದ ಹಾನಿಯಿಲ್ಲ. ಆದರೆ ಸಾಮಾಜಿಕವಾಗಿ ಆಚರಿಸಿ ಅದೊಂದು ಅಂಟುಜಾಡ್ಯವಾಗಿದೆ. ಮೂರು ತಿಂಗಳ ಹಿಂದೆ ಮಿರ್ಲೆಯಲ್ಲಿ ಸತ್ತ ಗಂಡನ ಹೆಣದ ಪಕ್ಕದಲ್ಲಿ ಬದುಕಿರುವ ಹೆಂಡತಿಯನ್ನು ಸತತ ಒಂದು ಘಂಟೆಗೂ ಮಿಗಿಲಾಗಿ ಕುಳ್ಳಿರಿಸಿ ಪೂಜೆ ನಡೆಸುತ್ತಿದ್ದದ್ದು ನೋಡಿ ವಿಷಾದ-ಬೇಸರವಾಯಿತು.

***ಜೀತ ಪದ್ಧತಿ:*** ಇತರ ಕಡೆಗಳಂತೆ ಮಿರ್ಲೆಯಲ್ಲಿಯೂ ಜೀತ ಪದ್ಧತಿ ವ್ಯಾಪಕವಾಗಿ ಇದ್ದಿತು ಮತ್ತು ನಿಷೇದ ಕಾನೂನು ಬಂದ ಹಲವಾರು ವರ್ಷಗಳ ವರೆವಿಗೂ ನಡೆದೇ ಇತ್ತು.

ಹೋಟೆಲ್ ಉದ್ಯಮದ ಬಗ್ಗೆ ಅಧ್ಯಾಯ ೮ರಲ್ಲಿ ಬರೆಯಲಾಗಿದ್ದರೂ ಇಲ್ಲಿ  ಐಯ್ಯರ್

ಹೋಟೆಲ್ ಮಿರ್ಲೆಯಲ್ಲಿ ಹೇಗೆ ಸಂಸ್ಕೃತಿ ಮತ್ತು ಸಮಾಜದ ಮೇಲೆ ಪ್ರಭಾವ ಬೀರಿತು ತಿಳಿಸುವ ಪ್ರಯತ್ನ ಮಾಡಿದ್ದೇನೆ.

## *ಐಯ್ಯರ್ ಹೋಟೆಲ್, ಟಿ. ಎಮ್. ಸೌಂದರ್ ರಾಜನ್ ಮತ್ತು ಹಾಲು ಉತ್ಪಾದಕರ ಸಂಘಟನೆ:*



ಇಂದಿನ (6-7-2013) "ಸಾಹಿತ್ಯ ಸಂಜೆ" ಯಲ್ಲಿ ಜೀವನೋಪಾಯಕ್ಕಾಗಿ ನೂರು ವರ್ಷಗಳ ಹಿಂದೆ ಬೆಂಗಳೂರಿಗೆ ಬಂದು ಚಾಮರಾಜಪೇಟೆಯಲ್ಲಿ ಹೋಟೆಲ್ ಆರಂಭಿಸಿದ ಕೆ. ವಿ. ಅಯ್ಯರ್ ಮುಂದೆ ಸಮಾಜಕ್ಕೆ, ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗೆ ನೀಡಿದ ಕೊಡುಗೆ ಸ್ಮರಿಸಿಕೊಳ್ಳುತ್ತಿರುವಾಗ ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮೂರಿಗೆ ವಲಸೆ ಬಂದ ಹೋಟೆಲ್ ಅಯ್ಯರ್ ಜ್ಞಾಪಕಕ್ಕೆ ಬಾರದಿರಲಿಲ್ಲ. ಕಾವೇರಿ ತೀರದ ಪ್ರವಾಸೋದ್ಯಮ ಸಾಧ್ಯತೆ ಚರ್ಚಿಸುವಾಗ ಕಾಂತರಾಜು "ತಮಿಳಿನ ಐಯ್ಯರ್ ಎಂಬುವವರೊಬ್ಬರು ಅನೇಕ ವರ್ಷಗಳು ಮಿರ್ಲೆಯಲ್ಲಿ ಯಶಸ್ವಿಯಾಗಿ ಹೋಟೆಲೊಂದನ್ನು ನಡೆಸಿ ಅವರ ದೊಡ್ಡಸಂಸಾರವನ್ನೇ ಸಾಕಿಬೆಳೆಸಿದರು. ತಮಿಳಿನವರಾದ್ದರಿಂದ ಅವರ ಭಾಷೆಯನ್ನೂ ಮಿರ್ಲೆಯಲ್ಲಿ ಮೆರೆಸಿ ಅದರ ಬೀಜ ಬಿತ್ತಿಹೋದರು" ಎಂದಿದ್ದರು.

ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮೂರಿಗೆ ವಲಸೆ ಬಂದ ಅಯ್ಯರ್, ಪ್ರಾರಂಭದಲ್ಲಿ ಗೌಡಯ್ಯನವರ ಹೋಟೆಲ್ ನಲ್ಲಿ ಅಡಿಗೆಯವರಾಗಿ ಸೇರಿ, ಕಾಲಾನಂತರ ಹಿರಿಯಣ್ಣನ ಗುಡಿ ಪಕ್ಕದ ಆರಳೀ ಕಟ್ಟೆ ಎದುರಿಗಿದ್ದ ಮನೆಯೊಂದರಲ್ಲಿ ಸ್ವಂತ 'ಅಯ್ಯರ್ ಹೋಟೆಲ್' ಆರಂಭಿಸಿದರು. ಅದು ಯಾವಾಗ ಪ್ರಾರಂಭವಾಯಿತು ತಿಳಿಯದಾದರೂ 50-60ರ ದಶಕದಲ್ಲಿ ಒಂದು ಪ್ರಧಾನ ತಮಿಳು ಪ್ರಸಾರ ಕೇಂದ್ರವಾಗಿದ್ದದ್ದು ನಿಜ. ಮಿರ್ಲೆಯಲ್ಲಿ ರೇಡಿಯೋಗಳೇ ದುರ್ಲಭವಾಗಿ ಕನ್ನಡ ಚಿತ್ರಗೀತೆಗಳು ವಾರಕ್ಕೆ 15 ನಿಮಿಷ ಮಾತ್ರ ಬಿತ್ತರಗೊಳ್ಳುತ್ತಿದ್ದ ಕಾಲದಲ್ಲಿ ರೇಡಿಯೊ ಸಿಲೋನ್ ಕೇಂದ್ರ ಬಿತ್ತರಿಸುತ್ತಿದ್ದ ತಮಿಳು ಸಿನಿಮಾ ಹಾಡುಗಳನ್ನು ಐಯ್ಯರ್ ಹೋಟೆಲ್ ದಿನವಿಡೀ ಅರ್ಧ ಊರಿಗೆ ಕೇಳಿಸುವಂತೆ

ಮಾಡಿತ್ತು. ಪಕ್ಕದ ಮನೆಯಲ್ಲಿಯೇ ವಾಸಿಸುತ್ತಿದ್ದ ರೇಡಿಯೊ ಸೌಲಭ್ಯವಿಲ್ಲದ ನನಗೆ ಈಗಲೂ ಟಿ ಎಮ್ ಸೌಂದರರಾಜನ್ ತಮಿಳು ಹಾಡುಗಳು ಆಪ್ಯಾಯಮಾನ ಮತ್ತು ನೆನಪುಗಳನ್ನು ಮರುಕಳಿಸುತ್ತವೆ. ತಮಿಳು ಚಲನಚಿತ್ರಗಳೇ ಪ್ರಧಾನವಾಗಿದ್ದ ಆ ಕಾಲದಲ್ಲಿ ಸ್ವಲ್ಪ ತಮಿಳು ಕಲಿತುಕೊಳ್ಳಲು ತಮಿಳು ಚಿತ್ರಗಳು ಮತ್ತು ಅಯ್ಯರ್ ಹೋಟೆಲ್ ರೇಡಿಯೊ ನೆರವಾದವು. ಹೆಚ್ಚು ಬಾಷೆ ಕಲಿತವರಿಗೆ ಜ್ಞಾನಾಭಿವೃದ್ಧಿಗೆ ಹೆಚ್ಚಿನ ಅವಕಾಶವಿರುತ್ತದೆ ಎನ್ನುತ್ತಾರೆ. ಆದರೆ ತಮಿಳಿನಿಂದ ನನಗೆ ಇನ್ನಾವ ಪ್ರಯೋಜನವೂ ಆದಂತೆ ಕಾಣೆ. ಹೆಚ್ಚು ತಮಿಳರೇ ಇದ್ದ ಕೇಂದ್ರ ಸರ್ಕಾರದ ಉದ್ಯೋಗಗಳಲ್ಲಿ  ತಮಿಳು ಬರುತ್ತದೆ ಎಂದು ಗೊತ್ತಾದರೆ ಪೂರ್ಣ ತಮಿಳಿನಲ್ಲೇ ವ್ಯವಹರಿಸುವುದು ವಾಡಿಕೆಯಾಗಿ ನಾನು ಗೊತ್ತಿದ್ದ ತಮಿಳನ್ನು ಹೆಚ್ಚು ಬಳಸಲಿಲ್ಲ. ಅಯ್ಯರ್ ಕುಟುಂಬಕ್ಕೆ ಕನ್ನಡ ಚನ್ನಾಗಿ ಬರುತ್ತಿದ್ದರೂ ಮತ್ತು ಅವರ ಮಕ್ಕಳೆಲ್ಲಾ ಕನ್ನಡ ಶಾಲೆಗಳಲ್ಲೇ ವಿದ್ಯಾಭ್ಯಾಸ ಮಾಡುತ್ತಿದ್ದರೂ ಅವರೊಟ್ಟಿಗೆ ತಮಿಳಿನಲ್ಲೇ ವ್ಯವಹರಿಸಿ ಮಾತನಾಡಲು ಹಾತೊರೆದು ಪೈಪೋಟಿ ನಡೆಸುತ್ತಿದ್ದ ಅಂದಿನ ಮಿರ್ಲೆಯ ನವನಾಗರೀಕ ವರ್ಗವೊಂದಿತ್ತೆನಿಸುತ್ತದೆ. ಅಯ್ಯರ್ ಕುಟುಂಬದ ಸದಸ್ಯರ ಸಂಖ್ಯೆ ಹೆಚ್ಚು. ಊರಿನಲ್ಲಿ ಎಲ್ಲಕಡೆಯಿಂದ ಹಾಲು ಸಂಗ್ರಹಿಸುವುದು ಮತ್ತು ಸುಗ್ಗಿ ದಿನಗಳಂದು ಕಣಗಳಿಗೆ ಹೋಗಿ ಬತ್ತ ಸಂಗ್ರಹಿಸುವುದು ನಡೆದಿತ್ತು. ವಿಚಿತ್ರವೆಂದರೆ ಅಗಸ, ಬಡಗಿ, ಕ್ಷೌರಿಕರಿಗೆ ಅವರ ಸೇವೆಗೆ ಸುಗ್ಗಿಯಲ್ಲಿ ವಾರ್ಷಿಕ ಪಾವತಿಯಾಗಿ ಬತ್ತ ಕೋಡುವುದು ಕ್ರಮ ಮತ್ತು ರೂಢಿ. ಮಿಕ್ಕವರೆಲ್ಲಾ, ಅಂದರೆ ದಾಸಯ್ಯ, ಸನ್ಯಾಸಿ, ಇತ್ಯಾದಿ  ಸುಗ್ಗಿ ಕಣಗಳಲ್ಲಿ ಭಿಕ್ಷೆ ಪಡೆಯುತ್ತಿದ್ದರು.  ಅಯ್ಯರ್ ಕುಟುಂಬಕ್ಕೆ ನೀಡುತ್ತಿದ್ದದ್ದು ಮಾತ್ರ ಭಿಕ್ಷೆಯೂ ಅಲ್ಲದೆ ಸೇವಾ ಪಾವತಿಯೂ ಆಗದೆ ಒಂದು ರೀತಿ ಮುಲಾಜಿನ ದಂಡದಂತಿತ್ತು. ಏಕೆಂದರೆ ಹೋಟೆಲ್ ನಲ್ಲಿ ಕಾಫೀ ತಿಂಡಿ ತಿಂದದ್ದಕ್ಕೆ ಹಣ ಪಾವತಿಸ ಬೇಕಿತ್ತು. ಆದರೆ ಕಾಲಕ್ರಮೇಣ ಅಯ್ಯರ್ ಕುಟುಂಬದ ಆರ್ಥಿಕ ಅಭಿವೃದ್ಧಿಗೆ ಅವರನ್ನು ಊರಿಗೆ ಕರೆತಂದವರು, ನೆಲೆಯೂರಲು ನೆರವಾದವರು ಮತ್ತು ಪ್ರೋತ್ಸಾಹಿಸಿದವರೇ ಅಸೂಯೆಗೊಂಡು ಪೈಪೋಟಿಗೆ ಇತರ ಹೋಟೆಲ್ ಗಳನ್ನು ಆರಂಬಿಸಿ ಕಿರುಕುಳಕೊಟ್ಟು ಅವರನ್ನು ಊರುಬಿಟ್ಟು ಕೆ ಆರ್ ನಗರ ಸೇರುವಂತೆ ಮಾಡಿದರೆಂದು ಕೇಳಿದ್ದೇನೆ. ಐಯ್ಯರ್ ಅವರ ಸಂಸಾರ

ಮಿರ್ಲೆ ಬಿಟ್ಟು ಹೊರಟಿದ್ದೂ ಒಂದು ಕಹಿ ಸನ್ನಿವೇಷದಲ್ಲಿ ಎಂದು ಕೇಳಿದೆ. ಮಿರ್ಲೆ ಬಿಟ್ಟು ಕೆ ಆರ್ ನಗರಕ್ಕೆ ಹೊರಡುವ 3 ದಿನ ಮುಂಚೆ ಡಂಗುರ ಸಾರಿಸಿ "ನಾವು ಊರು ಬಿಟ್ಟು ಹೋಗುತ್ತಿದ್ದೇವೆ ಯಾರಿಗಾದರೂ ನಾವು ಹಣ ಕೊಡಬೇಕಾಗಿದ್ದರೆ ಬಂದು ನಿಮ್ಮ ಹಣ ಪಡೆಯಿರಿ, ಹೋದ ಮೇಲೆ ಯಾರು ತಪ್ಪಾಗಿ ಮಾತನಾಡಬಾರದು" ಎಂದಿದ್ದರಂತೆ. ಇಂದು ಹಿನ್ನೋಟದಲ್ಲಿ ಇದು ಮಿರ್ಲೆ ಇತಿಹಾಸದಲ್ಲಿನ ಒಂದು ಸ್ವಂತಿಕೆಯ ಶೂನ್ಯತೆಯ ಅಧ್ಯಾಯದಂತೆಯೂ ಮತ್ತು ಈರ್ಷ್ಯೆಯ ಧ್ಯೋತಕದಂತೆಯೂ ಭಾಸವಾಗುತ್ತದೆ. ಹೋಟೆಲ್ ಫ್ಹೋಟೊ ದೊರೆಯಲಿಲ್ಲ, ಬದಲಿಗೆ ಐಯ್ಯಾರ್ ದಂಪತಿಗಳ ಫೋಟೊ ಸಿಕ್ಕಿತು.

ಅಯ್ಯರ್ ಹೋಟೆಲ್ ಬರುವಷ್ಟರಲ್ಲೇ ಮಿರ್ಲೆಯಲ್ಲಿ ಕೆಲ ಹೋಟೆಲಗಳಿದ್ದವು - ಗೌಡಯ್ಯನ ಹೋಟೆಲ್, ರಾಮಣ್ಣನ ಹೋಟೆಲ್, ಬಸ್ ಸ್ಟ್ಯಾಂಡ ಹೋಟೆಲ್, ಕೊಪ್ಪಲಿನಲ್ಲಿ ಒಂದೆರಡು ಟೀ ಅಂಗಡಿ (ಶ್ರೀ ಕಾಫ್ರಿ ರಾಮಣ್ಣ ಮತ್ತು ಶ್ರೀ ಕುಳ್ಳಯ್ಯ). ನಂತರದ ವರ್ಷಗಳಲ್ಲಿ ಕೊಪ್ಪಲಿನಲ್ಲಿ ಶ್ರೀ ಅಣ್ಣಾತಿ (ತಮಿಳುನಾಡಿನವರು) ಮತ್ತು ಶ್ರೀ ಮುದ್ದಪ್ಪ ಅವರುಗಳ ಹೋಟೇಲ್ಗಳು ಮತ್ತು 1970 ಸುಮಾರಿಗೆ ಚೌಡೀ ಮಾಳದಲ್ಲಿ ಪೂರ್ಣಪ್ರಮಾಣದ ಎಂ. ಸಿ. ರಾಮಲಿಂಗಯ್ಯನವರ 'ಶ್ರೀ ಮಾರುತಿ ಹೋಟೆಲ್" ಆರಂಭವಾದುವು. ಮಿರ್ಲೆಯಲ್ಲಿ ಮುಂದೆ ಸಾಲು ಸಾಲಾಗಿ ಹಲವಾರು ಹೋಟೆಲ್ ಗಳು ಆರಂಭವಾದುವು. ಇದರಲ್ಲಿ ಮಿಲಿಟರಿ, ಎತ್ತಿನಗಾಡಿಯಲ್ಲೇ ಕುಳಿತು ಕಾಫಿ ಕುಡಿಯುವ ಡ್ರೈವ್ ಇನ್ ಹಾಗೂ ಗುಡಸಿಲು ಹೋಟೆಲ್ ಗಳೂ ಸೇರಿದ್ದವು. ಬಹುಶಃ ಹಾಲು ಉತ್ಪಾದಕರ ಸಂಘಟನೆಯಾಗುವವರೆವಿಗೆ ಮಕ್ಕಳಿಗೆ ಹಾಲು ಕಡಿಮೆ ಮಾಡಿಯಾದರೂ ಹೊಟೆಲ್ಗೆ ಹಾಲು ಮಾರಬಯಸುವವರನ್ನ ಈ ಹೋಟೆಲ್ ಗಳು ಚನ್ನಾಗಿ ಎಕ್ಸ್ ಪ್ಲಾಯಿಟ್ ಮಾಡುತ್ತಿದ್ದಿರಬೇಕು. ಒಂದು ಕಾಲದಲ್ಲಿ ಮಿರ್ಲೆಯವರು ಮಕ್ಕಳಿಗೆ ಬೆಣ್ಣೆ ತಿನ್ನಿಸದಿದ್ದರೂ ಅವರ ಪ್ರೀತಿಯ ಹೋರಿಗಳಿಗೆ (ಎತ್ತುಗಳಿಗೆ) ತಿನ್ನಿಸುತ್ತಾರೆ ಎಂಬ ಮಾತೊಂದಿತ್ತು.



## ಕೆಲವು ಸಹಕಾರ ಸಂಘಟನೆಗಳು

ಮುಂದಿನ ದಶಕಗಳಲ್ಲಿ (ಅಂದರೆ 70ರ ದಶಕದ

ನಂತರ) ಮುಂದಿನ ದಶಕಗಳಲ್ಲಿ (ಅಂದರೆ 70ರ ದಶಕದ ನಂತರ) ಮಿರ್ಲೆಯಲ್ಲಿ ಈ ಕೆಲವು ಸಂಘಟನೆಗಳು 20ನೇ ಶತಮಾನದ ಅಂತ್ಯದಲ್ಲಿ ಆರಂಭವಾದವು:



- ಮಿರ್ಲೆ ಹಾಲು ಉತ್ಪಾಧಕರ ಸಹಕಾರ ಸಂಘ
- ಮಿರ್ಲೆ ಪದವೀಧರರ ಸಹಕಾರ ಸಂಘ
- ಮಿರ್ಲೆ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್
- ಅಂಬೇಡ್ಕರ್ ಯುವಕರ ಸಂಘ/ ಹರಿಜನ ಸಾಮೂಹಿಕ ಮಂದಿರ (1982)

## ಹತ್ತೊಂಬತ್ತನೇ ಶತಮಾನದಲ್ಲಿ ಜನಿಸಿದ ಮಿರ್ಲೆಯ ಹಲವು ಹಿರಿಯರ ನೆನಪುಗಳು:

ಸುಮಾರು 1960ರಷ್ಟರಲ್ಲೇ ಮಿರ್ಲೆಯಲ್ಲಿ ಕಾಣುತ್ತಿದ್ದ ಹಲವು ವಯೋವೃದ್ಧರ ಬಗ್ಗೆ ಹೆಚ್ಚು ತಿಳಿಯದಾದರೂ, ಅಂತಹವರು ಎಲ್ಲ ಬೀದಿಗಳಲ್ಲಿದ್ದರೂ, ನಾನು ಗಮನಿಸಿದ ಕೆಲವರ ಬಗ್ಗೆ ಹೇಳಬಹುದಷ್ಟೆ.

1. ಮಿರ್ಲೆ ಕೋದಂಡರಾಮ ದೇವಸ್ಥಾನದ ಧರ್ಮದರ್ಶಿಯಾಗಿ ಪೂಜಾಮಹೋತ್ಸವ-ರಥೋತ್ಸವದ ಮೇಲ್ವಿಚಾರಣೆ ನಡೆಸುತ್ತಿದ್ದ, ಕೋಟು ಪೇಟಗಳಲ್ಲಿ ಬಹಳ ಆಕರ್ಷಕ ಹಾಗೂ ಸ್ವಲ್ಪ ಎತ್ತರದ ಸಧೃಡಕ್ಕಿಂತ ಹೆಚ್ಚು ಸ್ಥೂಲ ಎನ್ನಬಹುದಾದ ದೇಹದ ಶ್ರೀ **ಸಾಹುಕಾರ್ ಕೋಟೇಗೌಡರು** ಊರಿನ ಪ್ರಮುಖರು. ಶ್ರೀ ಪ್ರಶಾಂತ್ ತಿಳಿಸಿದಂತೆ ಇವರು 29 ವರ್ಷ ಚುಂಚನಕಟ್ಟೆಯ ಶ್ರೀ ಕೋದಂಡರಾಮ ದೇವಸ್ಥಾನದ ಧರ್ಮದರ್ಶಿಗಳೂ ಆಗಿದ್ದರು, ಮಿರ್ಲೆಯಲ್ಲಿ ಆಸ್ಪತ್ರೆ ಮತ್ತು ಶಿಶುವಿಹಾರ ಕಟ್ಟಡಗಳ ಧಾನಿ, ಮತ್ತು ಇವರ ಬಗ್ಗೆ ಕನ್ನಡ ವಿಕೀಪೀಡಿಯಾದಲ್ಲಿ ಒಂದು ಟಿಪ್ಪಣಿ ಇದೆ. ಇವರ ಬಾಲ್ಯದ ಗೆಳೆಯ/ ಸಹಪಾಟಿ ಮಿರ್ಲೆ ಮೂಲದ ಮೈಸೂರಿನಲ್ಲಿ ನೆಲಸಿದ್ದ **ಶ್ರೀ ಕೇಸರಯ್ಯನವರು** ಸುಗ್ಗಿಯಲ್ಲಿ ಮಿರ್ಲೆಗೆ ಬಂದು ಅವರ ಜಮೀನಿನ ಗುತ್ತಿಗೆ ಪಡೆಯಲು ಕೋದಂಡರಾಮನ ಗುಡಿ ಬಳಿಯ ಬಾಲಕಿಯರ ಪ್ರಾಥಮಿಕ ಶಾಲೆಯ ಬ್ರಾಹ್ಮಣ ಮೇಷ್ಟ್ರರೊಬ್ಬರ (ಬಹಳವಾಗಿ ನಶ್ಯೆ ಹಾಕುವದರಿಂದ

ಮೂಗಮೇಷ್ಟ್ರು ಎನ್ನುತ್ತಿದ್ದೆವು) ಮನೆಯಲ್ಲಿ ಉಳಿದಾಗ ಅವರಿಬ್ಬರ ನಡುವಿನ ಸಂಜೆಯ ಹಾಸ್ಯಭರಿತ ಸರಸ ಸಂಭಾಷಣೆ ನನ್ನ ನೆನಪಿನಲ್ಲಿದೆ. ವಿಕೀಪೀಡಿಯದಲ್ಲಿ (https://kn.wikipedia.org/s/p2y) ಇವರ ಬಗ್ಗೆ ಹೀಗಿದೆ:

***ಮಿರ್ಲೆ ಸಾಹುಕರ್ ಕೊಟೇಗೌಡರು*** *- ಸಾಹುಕಾರ್ ಕೋಟೆಗೌಡರು ಮಿರ್ಲೆ ಅಭಿವೃದ್ಧಿಗೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಮಿರ್ಲೆಯಲ್ಲಿರುವ ಸರ್ಕಾರಿ ಆಸ್ಪತ್ರೆಯನ್ನು ೨೮.೮.೧೯೪೧ ರಲ್ಲಿ (ಹೆರಿಗೆ ಆಸ್ಪತ್ರೆಯನ್ನು ಹೊರತುಪಡಿಸಿದಂತೆ) ಮತ್ತು ಶ್ರೀ ಶಾರದ ಶಿಶುವಿಹಾರವನ್ನು ದಾನವಾಗಿ ಕಟ್ಟಿಸಿ ಕೊಟ್ಟಿದ್ದರು. ಚುಂಚನಕಟ್ಟೆ ಶ್ರೀ ಕೊದಂಡ ರಾಮ ದೇವಾಲಯದ ಧರ್ಮಧರ್ಶೀಯಾಗಿ ೨೯ ವರ್ಷ (೧೯೨೯-೧೯೫೮) ಸೆವೇಸಲ್ಲಿಸಿದ್ದರು, ಇವರ ಸೇವೆಯನ್ನು ಮನಗಂಡು ಇಂದಿನ ಚುಂಚನಕಟ್ಟೆಯ ಮುಖ್ಯ ವೃತ್ತದಲ್ಲಿರುವ ಬಸವನ ಪ್ರತಿಮೆಯ ಬದಲು ಇವರ ಪುತ್ಥಳಿಯನ್ನು ಪ್ರತಿಷ್ಠಾಪಿಸಲು ತೀರ್ಮಾನವಾಗಿತ್ತು. ಆದರೆ ಅಂದಿನ ಹಲವು ಭಿನ್ನಪರಿಸ್ಥಿತಿಯಲ್ಲಿ ತೀರ್ಮಾನ ಬದಲಿಸಿ ಬಸವನ ಪುತ್ಥಳಿಯನ್ನು ಪ್ರತಿಷ್ಠಾಪಿಸಲಾಯಿತು.ಇಷ್ಟಾದರೂ, ಮೈಸೂರು ಸಂಸ್ಥಾನವು ಇವರ ಕಾರ್ಯ ವೈಖರಿ ಮತ್ತು ಸೇವೆಗಳನ್ನು ಗುರ್ತಿಸಿ ಇವರಿಗೆ ಸಾಹುಕರ, ದಾನಶೂರ ಎಂಬ ಭಿನ್ನವತ್ತಳೆಯನ್ನು ನೀಡಿ ಗೌರವಿಸಿತ್ತು. ಇದರಿಂದಲೇ ಇವರಿಗೆ ಕೋಟೆಗೌಡ ಎಂಬ ಹೆಸರ ಬದಲಾಗಿ ಸಾಹುಕಾರ್ ಕೋಟೆಗೌಡ ಎಂಬ ಹೆಸರು ಇಂದಿಗೂ ಚಾಲ್ತಿಯಲ್ಲಿದೆ. ಇದೊಂದು ತುಣುಕು ಲೇಖನ. ನೀವು ಇದನ್ನು ವಿಸ್ತರಿಸಲು ವಿಕಿಪೀಡಿಯಾಗೆ ಸಹಕರಿಸಬಹುದು. ಈ ಪುಟವನ್ನು ೧೧ ನವೆಂಬರ್ ೨೦೧೫, ೦೬:೩೧ ರಂದು ಕೊನೆಯಾಗಿ ಸಂಪಾದಿಸಲಾಯಿತು.*

2. ಮುಂಜಾನೆ ಅರುಣೋದಯಕ್ಕೆ ಮುಂಚೆ ಕೋಲು ಹಿಡಿದು ಕೆರೆಕಡೆ ಹೋಗಿ ಬಂದು ಅಯ್ಯರ್ ಹೋಟ್ಲಿನಲ್ಲಿ ಬಹುಷಃ ದಿನದ ಮೊದಲ ಕಾಫಿ ಸವಿಯುತ್ತಿದ್ದ ಶ್ರೀ **ಸರಾಫ್ ಲಕ್ಷ್ಮಯ್ಯನವರು**. ಚಿನ್ನಬೆಳ್ಳಿ ಅಂಗಡಿಕಾರರಿಗೆ ಮತ್ತು ನಗದು ಹಣ ನೀಡುವ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಸರಾಫ್ ಪದ ಬಳಸುತ್ತಾರೆ. ಇವರದು ಮಿರ್ಲೆಯಲ್ಲಿ (?) ಚಿನ್ನಬೆಳ್ಳಿ ಅಂಗಡಿ ಇತ್ತೆಂದು ಕೇಳಿದ ನೆನಪು.

3. ಸ್ವಾತಂತ್ರ್ಯ ಪೂರ್ವದಲ್ಲಿ ಇಂಟರ್ ಮೀಡಿಯೇಟ್ ಓದಿ ಊರಿಗೆ Readers Digest ತರಿಸಿ ಓದುತ್ತಿದ್ದ ಅಷ್ಟಾಗಿ ಊರಿನೊಳಗೆ ಓಡಾಡದ ಯಾರ ಕಣ್ಣಿಗೂ ಬೀಳದ ಶ್ರೀ **ಕಿವಿಡು**

**ಲಕ್ಷ್ಮಪ್ಪನವರು**. ಇವರ ತಂದೆ ಶ್ರೀ ಸಣ್ಣರಾಮೇ ಗೌಡರು ಒಳ್ಳೆಯ ಗಮಕಿಯಾಗಿ ಕಾವ್ಯವಾಚನ ಮಾಡುತ್ತಿದ್ದರು ಎಂದು ಕೇಳಿದ್ದೆ.

4. ಸ್ವಾತಂತ್ರ್ಯಪೂರ್ವದಲ್ಲೇ (1930-1935) ಪಂಚಾಯಿತಿ ಅಧ್ಯಕ್ಷರಾಗಿದ್ದ ವಿಚಾರವಂತ, ಸರಳ, ಸೌಮ್ಯ ಮತ್ತು ಮೌನಿ ಕೊಪ್ಪಲಿನ **ಗಿರಿಯಮ್ಮನ ಸಿದ್ದಯ್ಯನವರು** (1894-1981) ಅಂದಿನ ಮಿರ್ಲೆಯ ಕೆಲವೇ ಬುದ್ಧಿಜೀವಿಗಳಲ್ಲಿ ಪ್ರಮುಖರು ಮತ್ತು ಅಮರಕೋಶ ಪ್ರಖರ ಪಂಡಿತರು. ಇವರ ಪೂರ್ವಿಕರು (ಮುತ್ತಾತ) ಕನ್ನಂಬಾಡಿ ಬಳಿಯ ಕಠೇರಿಯವರು ಮತ್ತು ಟಿಪ್ಪು ಸುಲ್ತಾನನ ಸೈನ್ಯದಲ್ಲಿ ಸೇವೆ ಸಲ್ಲಿಸಿದ್ದವರು. ಆವರ ಮನೆಯಲ್ಲಿ ಸೈನ್ಯದಲ್ಲಿ ಬಳಸುತ್ತಿದ್ದ ಕತ್ತಿಯಿದೆ ಎಂದು ಕೇಳಿದ್ದೆ.

5. ಕರೀಕಲ್ಲು ಬೀದಿಯ ಪಶ್ಚಿಮದ ತುದಿಯಲ್ಲಿ ಮನೆಗೆ ಸೇರಿದಂತಿದ್ದ ಸಣ್ಣ ಅಂಗಡಿಯಲ್ಲಿ ಕುಕ್ಕುರು ಕಾಲಿನಲ್ಲಿ ಕುಳಿತೇ ವ್ಯಾಪಾರ ಮಾಡುತ್ತಲಿದ್ದ ಕೃಷ ದೇಹದ ವೃದ್ಧ ಶ್ರೀ **ದೊಡ್ಡಣ್ಣ** ಮಾತಿನಲ್ಲಿ ಸ್ವಲ್ಪ ವಯೊಸಹಜ ಸಿಡುಕಿದ್ದರೂ ಬಹಳ ನ್ಯಾಯಯುತ ವ್ಯಾಪಾರಿ. ಆ ವಯಸ್ಸಿನಲ್ಲಿ ಮೈಸೂರಿಗೆ ಹೋಗಿ ಒಳ್ಳೆಯ ಸರಕು-ಸಾಮಾನುಗಳನ್ನು ತಂದು ವ್ಯವಹರಿಸುತ್ತಿದ್ದದ್ದು ಒಂದು ಸೋಜಿಗ. ಅವರ ಆಪ್ತ ಮತ್ತೊಬ್ಬ ವೃದ್ಧ ಮಾರಿಗುಡಿ ಬೀಧಿಯ ಶ್ರೀ **ನೀಲೇಗೌಡರು** ಹೆಚ್ಚಿನಕಾಲ ಅಂಗಡಿಯ ಮುಂದೆ ಪಕ್ಕಕ್ಕೆ ಸ್ಟೂಲ್ ಮೇಲೆ ಕುಳಿತಿರುತ್ತಿದ್ದರು. ಮಕ್ಕಳಿಗೆ ದೊಡ್ಡಣ್ಣನವರ ಅಂಗಡಿ ಬಹಳ ಅಚ್ಚುಮೆಚ್ಚು, ಕಾರಣ ಮೂರು ಕಾಸಿಗೆ ಅವರು ಧಾರಾಳವಾಗಿ ಒಂದು ಮುಷ್ಟಿಪೂರ್ತಿ ಹುರಿಕಡಲೆ ಕೊಡುತ್ತಿದ್ದರು. ದೊಡ್ಡಣ್ಣನವರ ಅಂಗಡಿಯ ವಿಶೇಷ ತುಪ್ಪ-ಗುಲ್ಕನ್. ಅದನ್ನು ಅಗಾಗ್ಯೆ ದೊಡ್ಡಣ್ಣ ಮತ್ತು ನೀಲಯ್ಯನವರೂ ಸವಿಯುತ್ತಿದ್ದು, ಅಂಗೈಯಲ್ಲಿ/ ಎಲೆಯಲ್ಲಿ ಉಳಿದಿದ್ದನ್ನ ಇಬ್ಬರೂ ಕೂದಲು ತೆಗಿಸಿದ ಮಂಡೆಗೆ ತಿಕ್ಕುತ್ತಿದ್ದರು.

ಗಿರಿಯಮ್ಮನ ಸಿದ್ದಯ್ಯನವರ ಹೊರತಾಗಿ ಇವರುಗಳ ಫೋಟೊ ಹಾಕಲಾಗದ್ದಕ್ಕೆ ಮತ್ತು ಹೀಗೆ ಅಂದಿನ ಮಿರ್ಲೆಯಲ್ಲಿ ಬಹಳಷ್ಟು ಮಂದಿ ಬಗ್ಗೆ ಬರೆಯಲಾಗದ್ದಕ್ಕೆ ವಿಷಾದಿಸುತ್ತೇನೆ.

## ಮಿರ್ಲೆಯ ಜನಪದ ಸಂಪತ್ತು

ಇತರ ಗ್ರಾಮೀಣ ಪ್ರದೇಶದಂತೆ ಮಿರ್ಲೆಯಲ್ಲಿಯೂ ಕೋಲಾಟ, ಹುಲಿ ವೇಷ, ಮರಕಾಲು ಕುಣಿತ ಇದ್ದವು. ಆದರೆ ಸಾವಿರ ವರ್ಷಗಳ ಇತಿಹಾಸವಿರುವ ಮಿರ್ಲೆಯ ಜನಪದ ಸಂಪತ್ತೇನು? ಮಿರ್ಲೆ ಜನಪದ ತಜ್ಞರ ಅಧ್ಯಯನಕ್ಕೆ ಒಳಪಟ್ಟಿದೆಯೆ? ಕಳೆದ ಕೆಲವು ದಶಕಗಳಿಂದ ನಾಡಿನಾದ್ಯಂತ ಜನಪದ ಅಧ್ಯಯನ ಮತ್ತು ಸಂಗ್ರಹ ಕಾರ್ಯ ವಿಪುಲವಾಗಿ ನಡೆದಿದೆ. ಬಹಳ ಹಿಂದೆ ೬೦ರ ದಶಕದಲ್ಲಿ ಹೊರಗಿನವರೊಬ್ಬರು (ವಿದೇಶಿಯರು?) ಮಿರ್ಲೆ ಪ್ರವಾಸಿ ಮಂದಿರದಲ್ಲಿ ತಂಗಿದ್ದು ಮಿರ್ಲೆಯವರೆ ಆದ ಪ್ರೊ. ರಾಮುಸ್ವಮಿಗೌಡರ ಬಾಷಾ ವ್ಯಾಖ್ಯಾನದ / ಅರ್ಥ ವಿವರಣೆ ನೆರವು ಪಡೆದು ಒಂದು ಜನಪದ ಅಥವ ಸಾಂಸ್ಕೃತಿ ಅಧ್ಯಯನ ನಡೆಸಿದಂತೆ ನೆನಪು. ಇಂತಹ ಮತ್ತಷ್ಟು ಅಧ್ಯಯನಗಳು ನಡೆದಿವೆ ಎಂದು ಕೇಳಿದ್ದೇನೆ, ಆದರೆ ಪಲಿತಾಂಶಗಳ ಬಗ್ಗೆ ತಿಳಿಯದಾಗಿದೆ. ನಾಗರೀಕತೆಯ ಗಾಳಿಯಲ್ಲಿ ಹಳೆಯ ಹಲವಾರು ವೈಶಿಷ್ಟ್ಯಗಳು ಈಗಾಗಲೇ ಮರೆಯಾಗಿವೆ. ಚಿತ್ರ, ಮಾಹಿತಿ, ಧ್ವನಿ ಮುದ್ರಣ, ವೀಡಿಯೋಗಳ ಮೂಲಕ ಈಗಲಾದರೂ ಉಳಿದ ಸ್ವಲ್ಪವನ್ನಾದರು ಸಂಗ್ರಹಿಸದಿದ್ದರೆ ಮುಂದಿನ ತಲೆಮಾರಿಗೆ ಅದು ಇದ್ದದ್ದರ ಯಾವ ಕುರುಹೂ ಸಿಕ್ಕದೇಹೋಗಬಹುದು. ಹಿರಿಯಣ್ಣನಿಗೆ ಕೊಡುತ್ತಿದ್ದ ಕೋಣನ ಬಲಿ ಕೇಳಿದ್ದೇವಷ್ಟೆ, ಹುಣಸಮ್ಮನ ಮೂಲ ದೇವಸ್ಥಾನದ ಮಾದರಿ ನೋಡಿದ್ದೆವಷ್ಟೆ, ಹಲವಾರು ಸ್ಥಳ (ಕುಪ್ಪೆ ಬಾರೆ, ಹುಲ್ಲೆ ಬಾರೆ) ಮತ್ತು ವಂಶ ನಾಮಗಳ ಹಿನ್ನೆಲೆಗಳು ತಿಳಿಯದು, ಇನ್ನು ಈಗಲೂ ನಡೆಯುತ್ತಿರಬಹುದಾದ ಹುಣಸಮ್ಮನ ಹಬ್ಬದ ತಂಬಿಟ್ಟಿನಾರತಿ, ಮಾರ್ನವಮಿ ಹಬ್ಬದ ಎಡೆ, ಮದುವೆಯಲ್ಲಿ ದಾಸಯ್ಯ, ಇತ್ಯಾದಿ ಮುಂದೆ ಇಲ್ಲವಾಗಲೂ ಬಹುದು. ಹೀಗೆ ಹಲವಾರು ಪರಂಪರಾಗತ ಪದ್ದಿತಿಗಳು ಈಗಾಗಲೆ ಕಲಬೆರಕೆಯಾಗಿರುವ/ ವಿಕೃತಗೊಂಡಿರುವ ಅಥವ ನಶಿಸಿರುವ ಸಾದ್ಯತೆಗಳಿವೆ. ಗ್ರಾಮದೇವತೆಗಳಾದ ಹುಣಸಮ್ಮ, ಹಿರಿಯಣ್ಣ ಮತ್ತು ಮಾರಮ್ಮ ಸೊದರ-ಸೋದರಿಯರೆಂದೂ ಅವರ ಬಗೆಗಿನ ಕಥೆಗಳು ಮತ್ತು ಹಾಡುಗಳಿವೆಯೆಂದೂ ಕೇಳಿದ್ದೆ.

ಪೀಠಿಕೆಯಲ್ಲಿ (ಆಧ್ಯಾಯ 1) ಬ್ರಿಟೀಷರು ಸಣ್ಣ ಸಣ್ಣ ಗ್ರಾಮಗಳಲ್ಲಿಯೂ

ಸಂಗ್ರಹಾಲಯಗಳನ್ನು ನಿರ್ಮಿಸಿ ಅಲ್ಲಿನ ಸಮಗ್ರ ಇತಿಹಾಸ, ಘಟನಾವಳಿಗಳು, ಪ್ರಾಣಿ, ಪಕ್ಷಿ, ಕ್ರಿಮಿಕೀಟಗಳಾದಿಯಾಗಿ ಎಲ್ಲವನ್ನೂ ಎಲ್ಲದರಬಗೆಗಿನ ಮಾಹಿತಿಯನ್ನೂ ಸಂಗ್ರಸಿ ಸಂರಕ್ಷಿಸುವ ರೀತಿ ಅನನ್ಯವಾದುದು. ಇತ್ತೀಚೆಗೆ ಖಾಸಗಿಯಾಗಿ (ಸರ್ಕಾರದ ಯಾವ ನೆರವೂ ಇಲ್ಲದೆ) ಕೋಲಾರ ಜಿಲ್ಲೆಯ ಹಳ್ಳಿ ಹಳ್ಳಿ ತಿರುಗಿ ಸುಮಾರು 300 ಘಂಟೆಗೂ ಹೆಚ್ಚಿನ ಜನಪದ ಗೀತಗಾಯನವನ್ನು ಧ್ವನಿಮುದ್ರಿಸಿ, ಅವುಗಳನ್ನು ಜನಪ್ರಿಯ ಗೊಳಿಸಲು ಆಯ್ದ 11 ಗೀತೆಗಳನ್ನು ಖ್ಯಾತ ಸಂಗೀತ ನಿರ್ಧೇಶಕರ ಸಂಯೋಜನೆಯಲ್ಲಿ ರಾಷ್ಟ್ರ ಮಟ್ಟದ ಜನಪ್ರಿಯ ಗಾಯಕರಿಂದ ಹಾಡಿಸಿದ ಅಪರೂಪದ ಸಿಡಿ *"ಕೋಲಾರ್ ದೇಸಿ ಗೋಲ್ಡ್ ಸಾಂಗ್ಸ"* ಬಿಡುಗಡೆ ಮಾಡಿದ್ದು ಒಂದು ಅನುಕರಣೀಯ ಮಾಡೆಲ್.

ಮಿರ್ಲೆಯವರೇ ಆದ ಜನಪದ ಮತ್ತು ಇತಿಹಾಸದ ವಿಧ್ಯಾರ್ಥಿಗಳು/ ತಜ್ಞರು ಇದ್ದರೆ, ಅಂತಹವರ ಮಾರ್ಗದರ್ಶನದಲ್ಲಿ ಮಿರ್ಲೆಯಲ್ಲಿ ಈ ನಿಟ್ಟಿನಲ್ಲಿ ಒಂದು ಕಿರು ವಸ್ತು ಸಂಗ್ರಹಾಲಯ ಆರಂಭಿಸುವಂತಿದ್ದರೆ ಎಷ್ಟು ಚೆನ್ನ. ಆದರೆ ಜಾನಪದ ತಜ್ಞರಿಗೆ ಕುವೆಂಪು ಅವರ ಎಚ್ಚರಿಕೆಯ ಮಾತನ್ನು ಇಲ್ಲಿ ಸ್ಮರಿಸುವುದು ಸೂಕ್ತ: ಜಾನಪದ ಸಾಹಿತ್ಯ ಸಂಗ್ರಹದಲ್ಲಿ ಮತ ಮೌಢ್ಯ ಮತ್ತು ಅವಿಚಾರಗಳು ಹೇರಳವಾಗಿರುವುದರಿಂದ ಅದನ್ನು ಒಂದು ಸಂಗ್ರಹ ಕಲೆಯನ್ನಾಗಿ ನೋಡಬೇಕೆ ಹೊರತು ಪರಂಪರಾಗತವಾದುದನ್ನು ಯತಾವಥ್ ಆಗಿ ಆಚರಣೆಯಲ್ಲಿ ಮುಂದುವರೆಸಬಾರದು. ಈ ಕಾರ್ಯದಲ್ಲಿ ಒಬ್ಬ ಸಂಶೋಧಕನ ಶ್ರದ್ಧೆ, ವಸ್ತುನಿಷ್ಟೆ, ಕುತೂಹಲ, ಬದ್ಧತೆ, ನಿರ್ಮಮಕಾರ ಅವಶ್ಯಕ.

***ಜಾನಪದ ಸಂಗ್ರಹಯೋಗ್ಯ ಕೋದಂಡರಾಮ ರಥ:***




ಜಾನಪದ ಸಂಗ್ರಹಾಲಯದಲ್ಲಿರಬೇಕಾದ ಈ ಕೋದಂಡರಾಮ ದೇವರ ರಥ ಬೀದಿಯಲ್ಲಿ ಹೀಗೆ ನಶಿಸುತ್ತಿದೆ! ಒಂದು ಕಾಲಕ್ಕೆ ವೈಭವಯುತ ವಾರ್ಷಿಕ ರಥೋತ್ಸವದಲ್ಲಿ ಭಾಗಿಯಾದ ಈ ರಥ ಜನಪದ ಮತ್ತು ಇತಿಹಾಸ ತಜ್ಞರ/ ವಿಧ್ಯಾರ್ಥಿಗಳ ಅಧ್ಯಯನಕ್ಕೆ ಯೋಗ್ಯವಾದದ್ದಾಗಿತ್ತಲ್ಲವೆ?

---

**ಪ್ರತಿಕ್ರಿಯೆಗಳು:**

**ಪ್ರಶಾಂತ್**: Please advise on how to safe gaurd this?

**ಪ್ರಶಾಂತ್,** ನಾನು ಈ ವಿಷಯದಲ್ಲಿ ತಜ್ಞನಲ್ಲ. ಅದರೂ ನನ್ನ ತಿಳುವಳಿಕೆ ಹೀಗಿದೆ. ಈ ತೇರು ಈಗಾಗಲೆ ಮುಕ್ಕಾಲು ಭಾಗ ನಶಿಸಿ, ಮೇಲಿನ ಕಾಲು ಭಾಗ ಮಾತ್ರ ಉಳಿದಿದೆ. ಅದನ್ನು ಅದಕ್ಕಾಗಿಯೆ ನಿರ್ಮಿಸಿದ್ದ ಶೆಡ್ ನಲ್ಲಿ ಬಿಟ್ಟಿದ್ದರೆ ಅದರ ಸಂರಕ್ಷಣೆ ಸುಲಭ ಮತ್ತು ಅರ್ಥಪೂರ್ಣವಾಗುತ್ತಿತ್ತು. ಈಗ ಉಳಿದ ಭಾಗವನ್ನ/ ಪಳಯುಳಿಕೆಯನ್ನ ಮೈಸೂರು ಅಥವ ರಾಮನಗರದ ಜಾನಪದ ಸಂಗ್ರಹಾಲಯಕ್ಕೆ ಅವರು ಒಪ್ಪುವುದಾದರೆ ತಲುಪಿಸುವುದು ಅಥವ ಶಕ್ತಿ, ಶ್ರದ್ಧೆ, ಆಸಕ್ತಿಗಳಿದ್ದರೆ ಮಿರ್ಲೆಯಲ್ಲಿಯೇ ಒಂದು ಕಿರು ವಸ್ತು ಸಂಗ್ರಹಾಲಯ ಆರಂಭಿಸುವುದು ಉಳಿದಿರುವ ಮಾರ್ಗಗಳು.

**ಕಿಶೋರ್ ಕುಮಾರ್**: ಊರ ಜನರೆಲ್ಲಾ ಇಂಥ ವಿಷಯದಲ್ಲದರೂ ಒಂದಾಗಿ ಸೇರಿ, ಆ ರಥದ ಪುನಶ್ಚೇತನ ಹಾಗೂ ನಿಲ್ಲಿಸಲು ಒಂದು ಜಾಗವನ್ನು ನಿರ್ಮಿಸಿದರೆ ಮುಂದಿನ ಪೀಳಿಗೆಗೆ ಇತಿಹಾಸದ ಒಂದು ಕುರುಹನ್ನು ಉಳಿಸಿದಂತಾಗುತ್ತದೆ.

---

## *ಪರಂಪರಾಗತ ಮೌಖಿಕ ಕಥೆಗಳು:*

ಹಲವಾರು ಕಥೆಗಳು ಮೌಖಿಕ ಪರಂಪರೆಯಲ್ಲಿ ತಲೆಮಾರುಗಳ ಕಾಲ ಪ್ರಚಲಿತವಿದ್ದು ಅನಕ್ಷರಸ್ಥ ಮಿರ್ಲೆ ತಂದೆತಾಯಿಗಳು ಮಕ್ಕಳಿಗೆ ಹೇಳುತ್ತಿದ್ದರು. ನನ್ನ ತಾಯಿ ಹೇಳುತ್ತಿದ್ದ ಜಾನಪದ ಎನ್ನಬಹುದಾದಂತಹ ಕಥೆಗಳಲ್ಲಿ ಈ ಮೂರು ಕಥೆಗಳು ಸ್ಥೂಲವಾಗಿ ನನ್ನ ನೆನಪಿನಲ್ಲಿವೆ. ಇವೇ ಕಥೆಗಳು ಇತರರಿಗೂ ಬಾಲ್ಯದಲ್ಲಿ ಊರಿನಲ್ಲಿ ಕೇಳಿಸಿರಬುಹುದಾದುವು.

೧ ಇರುಳು ಕುರುಡಿನ ಅಳಿಯನ ಕಥೆ: ಇತ್ತಿಚಿನ ಸಿನೆಮಾಗಳಲ್ಲಿ ಈ ಹಾಸ್ಯಪ್ರಸಂಗಗಳನ್ನು ಅಳವಡಿಸಿಕೊಂಡಿರುವುದನ್ನು ಗಮನಿಸಿದ್ದೇನೆ.

೨. ಚಿಕ್ಕಹೊನ್ನಿ-ದೊಡ್ಡಹೊನ್ನಿ ಕಥೆ: ತಬ್ಬಲಿ ಸಹೋದರಿಯರ ಕಥೆ

೩. ಕುಂಟ ಸಹೋದರನ ಕಥೆ: ಹಾಸ್ಯ ಪ್ರಧಾನವದ ಕಥೆ

## ಸುಮಾರು 70 ವರ್ಷ ಹಳೆಯ ಮಿರ್ಲೆಯ ಮೂರು ಮಹಡಿ ಮನೆಗಳು



---

**ಪ್ರತಿಕ್ರಿಯಗಳು:**

**ಪ್ರಶಾಂತ್**: ಒಂದರ ಹಿಂದೆ ಒಂದರಂತೆ ಅವಾಸನದ ಹಾದಿ ತುಳಿದಿರುವುದು ದುಃಖಕರ ವಿಚಾರ.

**ನಿತಿನ್ ಕುಮಾರ್:** my grand pa told me tat they started its (3rd house) construction in de year 1930 n finished in 1931...so now it s 83 YEARS old baby..:);) still de stronger wen compared to de houses built in 1980's..!!! means 50 yrs later...n other two are still older but they r gettin deteriorated every year coz of de lack of care taken by de ppl who lives der..(1st two houses)

---




### *"ಮುಯ್ಯಾರು" ಸಂಸ್ಕೃತಿ ಸಹಬಾಳ್ವೆಯ ಪ್ರತೀಕ*

ಮಿರ್ಲೆಯಲ್ಲಿನ "ಮುಯ್ಯಾರು" ಸಂಸ್ಕೃತಿ ಅಪರೂಪದ ಸಹಬಾಳ್ವೆಯ ಸಂಸ್ಕೃತಿಯನ್ನು ಬಿಂಬಿಸುತ್ತಿತ್ತು. ಮುಯ್ಯಾರಿನಂತೆ ಉಳುವವರು ಅದು ತನ್ನ ಸ್ವಂತ ಜಮೀನು ಎನ್ನುವಷ್ಟರ ಮಟ್ಟಿಗೆ ಭಾಗಿಯಾಗುತ್ತಿದ್ದರು. ಮುಂದಿನ ದಿನಗಳಲ್ಲಿ ಬಂದ ದುಡ್ಡಿಗಾಗಿ ಬುಂಡೆ ನೇಗಿಲಲ್ಲಿ ನೆಪಮಾತ್ರಕ್ಕೆ ಉಳುವ "ಹಣೆನಾರು" ಒಂದು ಪಕ್ಕಾ ವ್ಯವಹಾರಿಕ/ ವ್ಯಾಪಾರ ಸಂಸ್ಕೃತಿಯನ್ನು ನೆಲೆಮಾಡಿತು. ನಂತರದ ಬಾಡಿಗೆ ಟಿಲ್ಲರ್ ಯಂತ್ರ/ ಟ್ರ್ಯಾಕ್ಟರ್ ಗಳ

ಬಳಕೆ ಕೃಷಿಯಲ್ಲಿ ವ್ಯವಹಾರ ಮತ್ತು ವ್ಯಾಪಾರ ಸಂಸ್ಕೃತಿಯನ್ನ ಮತ್ತಷ್ಟು ಪ್ರಧಾನವಾಗಿಸಿತು. ಜಾಗತಿಕ ಮಟ್ಟದ ಸಂಶೋಧನೆಗಳಲ್ಲಿ ಬತ್ತ ಬೆಳೆವ ಭಾರತ, ಚೀನ, ಜಪಾನ ಮತ್ತು ಇತರ ಏಶಿಯಾ ದೇಶಗಳಲ್ಲಿ ಗೋದಿ, ಮೆಕ್ಕೆ ಜೋಳ ಬೆಳೆವ ದೇಶಗಳಿಗಿಂತ ಹೆಚ್ಚಿನ ಸಹಬಾಳ್ವೆಯ ಸಂಸ್ಕೃತಿ ಬತ್ತದಿಂದಾಗಿಯೇ ಇತ್ತೆಂಬುದನ್ನು ಗುರುತಿಸಲಾಗಿದೆ. ಇಪ್ಪತ್ತನೇ ಶತಮಾನದ ಮಧ್ಯದವರೆವಿಗೆ ಬತ್ತ ಬೆಳೆವ ಪ್ರದೇಶಗಳಲ್ಲಿ ಚಾಲ್ತಿಯಲ್ಲಿದ್ದ "ಮುಯ್ಯಾರು" ಒಂದು ಆತ್ಮತೃಪ್ತಿ ಮತ್ತು ಉತ್ಸಾಹದಿಂದ ಪರಸ್ಪರ ವಿನಿಮಯಿಸುವ ದೈಹಿಕ ಶ್ರಮ ಹಲವಾರು ಮದುವೆ ಮತ್ತಿತರ ಸಮಾರಂಭಗಳಲ್ಲಿಯೂ ಗಂಡು ಹೆಣ್ಣೆಂಬ ಭೇಧವಿಲ್ಲದೆ ವ್ಯಕ್ತವಾಗುತ್ತಿದ್ದ ಕಾಲವದು. ಮುಯ್ಯಾರು ಸಹಕಾರ ಈಗಲೂ ಇದೆ ಎನ್ನುತ್ತಾರೆ ಪ್ರಶಾಂತ್.

## *ಮಿನಿ ಸಾಂಸ್ಕೃತಿಕ ಕೇಂದ್ರವೆನಿಸಿದ್ದ ಚಲುವಯ್ಯನವರ ಮನೆ ಜಗುಲಿ*

ಬಂಗಲೀಮಠದ (ಸರ್ಕಾರಿ ಮಾಧ್ಯಮಿಕ ಶಾಲೆಯ) ಎದುರಿಗಿನ ಮನೆಯ ಜಗುಲಿ ಸದಾ ಹಾರ್ಮೋನಿಯಮ್ ಜೊತೆಗಿನ ಹಾಡು, ನಾಟಕಾಭ್ಯಾಸ, ಇತ್ಯಾದಿ ಚಟುವಟಿಕೆಗಳಿಂದ ಕೂಡಿದ್ದು ಒಂದು ಮಿನಿ ಸಾಂಸ್ಕೃತಿಕ ಕೇಂದ್ರವೆನಿಸಿತ್ತು. ಇದಕ್ಕೆ ಮೂಲ ಕಾರಣ ವೃತ್ತಿಯಲ್ಲಿ ಪೋಲೀಸ್ ಕಾನ್ಸ್ಟೇಬಲ್ ಆಗಿದ್ದ ಅಂದಿನ (ಸುಮಾರು 1958-59) ಯುವಕ ಚಲುವಯ್ಯನವರು. ಚಿತ್ರದಲ್ಲಿ ಎಡಪಕ್ಕದಲ್ಲಿರುವ ಅಂಬೇಡಕರ್ ಸಮುದಾಯ ಭವನವಿರುವ ಕಡೆ (ಇತ್ತೀಚಿನ ವರೆವಿಗೆ ಅಂಬೇಡಕರ್ ಯುವಕರ ಸಂಘ) ಒಂದು ಪುಟ್ಟ ಮನೆ ಇತ್ತು. ಅದು



ರಾತ್ರಿವೇಳೆಯ ರಂಗತಾಲೀಮು (ನಾಟಕಾಭ್ಯಾಸ) ಮಂದಿರವಾಗಿತ್ತು. ಮಿರ್ಲೆಯಲ್ಲಿ "ಶನಿ ಮಹಾತ್ಮೆ" ನಾಟಕವನ್ನು ಪ್ರಸ್ತುತ ಪಡಿಸುತ್ತಿದ್ದ ಮೂರು ಪ್ರತ್ಯೇಕ ತಂಡಗಳಲ್ಲಿ ಚಲುವಯ್ಯನವರ ತಂಡವೂ ಒಂದು. ಚಲುವಯ್ಯನವರು ಸ್ವತಃ ನಟ-ಗಾಯಕನಾಗಿ ವಿಕ್ರಮನ ಪಾತ್ರ ಅಭಿನಯಿಸುತ್ತಿದ್ದರು ಮತ್ತು ಸದಾ ಚಟುವಟಿಕೆಗಳಲ್ಲಿ ತೊಡಗಿದ್ದ ಉತ್ಸಾಹಿ ಆಕರ್ಷಕ ವಿದ್ಯಾವಂತ ನಾಗರೀಕ ಯುವಕ.

## *ಸಾಹಿತ್ಯ ಮತ್ತು ಮಿರ್ಲೆ ಯಲ್ಲಿ ಗುರುತಿಸಿರುವ ಸಾಹಿತಿಗಳು*

ಕನ್ನಡ ಪ್ರಾಧ್ಯಪಕ ಹಾಗೂ ಕನ್ನಡ ಸಾಹಿತ್ಯ ವಿಮರ್ಶಕ ಪ್ರೊ. ಎಮ್. ವಿ. ಶ್ರೀನಿವಾಸ ಮೂರ್ತಿ, ಇತಿಹಾಸಜ್ಞ / ಇತಿಹಾಸ ಪ್ರಾಧ್ಯಾಪಕ ಪ್ರೊ. ಜಿ. ಆರ್. ಕುಪ್ಪುಸ್ವಾಮಿ, ಪುರಾತತ್ವ ಶಾಸ್ತ್ರಜ್ಞ ಡಾ. ಎಮ್. ಎಸ್. ನಾಗರಾಜರಾವ್ ಅವರುಗಳಲ್ಲದೆ ಮಿರ್ಲೆಯ ಕೆಲವು ಸಾಹಿತಿಗಳನ್ನು ಗುರುತಿಸಿ ಗೆಜೆಟಿಯರ್ ನಲ್ಲಿ ಧಾಖಲಿಸಲಾಗಿದೆ



೧. ಲೀಲ ಮಿರ್ಲೆ (ಖ್ಯಾತ ಹಾಸ್ಯ ಲೇಖಕಿ)

೨. ಎಂ. ಆರ್. ಗಿರಿಧರ ಸ್ಥಪತಿ (ಕಥೆಗಾರರು)

೩. ಕಾಂತರಾಜು ಮಿರ್ಲೆ ('ಪ್ರೇಮದರ್ಶನ' ಪ್ರಬಂಧ)

೪. ಮಿ. ರಾ. ಲಿಂಗರಾಜು (ಕವಿ)

೫. ಮಿರ್ಲೆ ಗಜೇಂದ್ರ (ಆಧುನಿಕ ವಚನಕಾರ)

ಇವರುಗಳಲ್ಲದೆ ಸಮಕಾಲೀನ ಕವಯತ್ರಿ ಶ್ರೀಮತಿ ಗಿರಿಜ ರಾಜ್ (ಮಿರ್ಲೆಯ ಪ್ರೊ. ರಾಜೇಗೌಡರ ಪತ್ನಿ) ಮತ್ತು ಪತ್ರಿಕಾ ಲೇಖನಗಳನ್ನು ಬರೆಯುತ್ತಿರುವ ಶ್ರೀ ಚಂದ್ರಶೇಕರ್ ಮಿರ್ಲೆ (ಹಾಲಿ ಮಿರ್ಲೆ ಪೀಪಲ್ ಗ್ರೂಪ್ ಸದಸ್ಯರು), ಇತ್ಯಾದಿ ಇದ್ದಾರೆ. ತಾಲ್ಲೂಕಿನಿಂದ ಸಾಕಷ್ಟು ಪತ್ರಿಕೆಗಳು ಪ್ರಕಟವಾಗಿದ್ದು ಮತ್ತು ಈಗಲೂ ಆಗುತ್ತಿದ್ದು ಹಲವಾರು ಪತ್ರಿಕೋಧ್ಯಮಿಗಳನ್ನು ಗುರುತಿಸಿದ್ದರೂ ಮಿರ್ಲೆಯಿಂದ ಪತ್ರಿಕೋಧ್ಯಮಿಗಳಿದ್ದಂತಿಲ್ಲ.

ಸಾದಾರಣವಾಗಿ ಸಾಹಿತಿಗಳ ಮೂಲ ಧ್ರವ್ಯ ಅವರ ಅನುಭವಕ್ಕೆ ಬಂದ ಸ್ಥಳ, ವ್ಯಕ್ತಿ, ಘಟನೆಯಾಗಿರುತ್ತದೆ ಎನ್ನುತ್ತಾರೆ. ಇಂತಿದ್ದರೆ ಮಿರ್ಲೆ ಸಾಹಿತಿಗಳ ಕೃತಿಗಳಲ್ಲಿ ಮಿರ್ಲೆ ಬಗೆಗೆ ಗತಕಾಲದ ಕುರುಹುಗಳು ದೊರಕಬಹುದೆ?

## ರಂಗಭೂಮಿ, ನಾಟಕಗಳು ಮತ್ತು ಮಿರ್ಲೆಯ ಕಲಾವಿದರು

ಮಿರ್ಲೆ ಹೆಸರಾಂತ ಕಲಾವಿದರನ್ನು ಕೊಡಲಿಲ್ಲ ಎಂಬ ಕೊರಗನ್ನು ನೀಗಿಸಿದವರು ಗುಬ್ಬಿ ಕಂಪನಿಯ ಖ್ಯಾತ ನಟ **ಆಂಜನೇಯ ಸೀನಪ್ಪ**, ಅಂದರೆ 'ಮಿರ್ಲೆ ಶ್ರೀನಿವಾಸರಾಯರು''

(1897-1955). ಇವರು ಪುರಾತತ್ವ ಶಾಸ್ತ್ರ ಮತ್ತು ವಸ್ತು ಸಂಗ್ರಹಾಲಯಗಳ ಇಲಾಖೆಯ ನಿರ್ಧೇಶಕರಾಗಿದ್ದ ಡಾ. ಎಮ್. ಎಸ್. ನಾಗರಾಜರಾವ್ ಅವರ ತಂದೆ. ಮಿರ್ಲೆಯಲ್ಲಿಯೂ ಸಾಕಷ್ಟು/ ವಿವಿಧ ನಾಟಕಗಳನ್ನು ಪ್ರದರ್ಶಿಸಿದ್ದು, ನಟನೆಯನ್ನು ವೃತ್ತಿಯಾಗಿ ಸ್ವೀಕರಿಸದೆಯೂ ಸಾಕಷ್ಟು ಸ್ಥಳೀಯ ಹವ್ಯಾಸಿ ನಟರು ಮಿರ್ಲೆಯಲ್ಲಿದ್ದರು. ಅಂತಹವರಲ್ಲಿ ಸಾಧಾರಣಕ್ಕಿಂತ ಎತ್ತರವಾದ, ಸಧೃಡ ಮೈಕಟ್ಟಿನ ನಟ ಶ್ರೀಮಾನ್ ಈರೇಗೌಡ ಒಬ್ಬರು. ಮಿರ್ಲೆಯಲ್ಲಿ ಶನಿ ಮಹಾತ್ಮೆ ನಾಟಕವನ್ನು ಆಗಾಗ್ಯೆ ಪ್ರಸ್ತುತಪಡಿಸುತ್ತಿದ್ದ ಮೂರು ತಂಡಗಳ ಪೈಕಿ ಕೊಪ್ಪಲಿನ ಈರೇಗೌಡರ ತಂಡವೂ ಒಂದು. ಹವ್ಯಾಸಿ ಕಲಾವಿದರು ಮತ್ತು ಅವರು ಪ್ರಸ್ತುತ ಪಡಿಸಿದ ನಾಟಕಗಳ ಪಟ್ಟಿ ದೊಡ್ಡದು. ಶಾಲಾ ನಾಟಕಗಳಲ್ಲದೆ ನಾನು 50 ಮತ್ತು ೬೦ರ ದಶಕಗಳಲ್ಲಿ ನೋಡಿದ ನಾಟಕಗಳಲ್ಲಿ ಮುಖ್ಯವಾಗಿ ನೆನಪಿನಲ್ಲಿರುವವು **ಶನಿ ಮಹಾತ್ಮೆ, ದಾನಶೂರ ಕರ್ಣ, ಸಂಪೂರ್ಣ ರಾಮಾಯಣ, ಲವ-ಕುಶ ಯಕ್ಷಗಾನ** ಮತ್ತು **ಏಚ್ಚಮ ನಾಯಕ.**

೧. **ಶನಿ ಮಹಾತ್ಮೆ** ನಾಟಕವನ್ನು ಆಗಾಗ್ಯೆ ಮೂರು ತಂಡಗಳೂ ಪ್ರಸ್ತುತಪಡಿಸುತ್ತಿದ್ದವು - ಮಾರೀಗುಡಿ ಬೀದಿ ಬಜ್ರಂತಿಗಳ ತಂಡ, ಹರಿಜನ ಕೇರಿಯ ಚಲುವಯ್ಯನವರ ತಂಡ ಮತ್ತು ಕೊಪ್ಪಲಿನ ಈರೇಗೌಡರ ತಂಡ. ಬಜ್ರಂತಿಗಳ ತಂಡದ ರಂಗ ತಾಲೀಮು ಮಾರೀ ಗುಡಿಯಲ್ಲೇ ನಡೆಯುತ್ತಿತ್ತು ಮತ್ತು ಈ ತಂದದ ಮುಖ್ಯ ರಜಾ ವಿಕ್ರಮನ ಪಾತ್ರಧಾರಿ ಶ್ರೀ ರಾಜ, ಈಶ್ವರನ ಪಾತ್ರಧರಿ ಮಾರೀ ಗುಡಿ ಎದುರಿನ ಮನೆಯ ಶ್ರೀ ಶಿವನಂಜ ಮತ್ತು ಹಾಸ್ಯಪಾತ್ರ ಬಜ್ರಂತಿ ಶ್ರೀ ಗೋಪಾಲಿ ನಿರ್ವಹಿಸುತ್ತಿದರು. ಆಶ್ಚರ್ಯದ ಸಂಗತಿ ಎಂದರೆ ಒಂದು ಕಣ್ಣಿನ ತೊಂದರೆ ಇದ್ದ ವಿಕ್ರಮಪಾತ್ರಧಾರಿ ಕಪ್ಪು ಕನ್ನಡಕ ಧರಿಸಿಯೆ ಅಧ್ಭುತವಾಗಿ ನಟಿಸುತ್ತಿದ್ದರು. ಹಗಲಲ್ಲಿ ಇವರಿಗೆ ಕಾಲಿನಲ್ಲಿ ಕಲ್ಲತ್ತಿನ ತೊಂದರೆಯಿಂದ ಕಾಲನ್ನು ಎಳೆದಂತೆ ನಡೆಯುತ್ತಿದ್ದರು.

೨. **ದಾನಶೂರ ಕರ್ಣ** ನಾಟಕವನ್ನು ಕಾಲಾನುಕ್ರಮದಲ್ಲಿ ಎರಡು ತಂಡಗಳು ಪ್ರಸ್ತುತಪಡಿಸಿದ್ದವು - ಒಂದು ಕರಿಕಲ್ಲಬೀದಿಯ ಶ್ರೀ ಸಣ್ಣಸ್ವಾಮಣ್ಣ ಎಂಬುವರು ಕರ್ಣನಾಗಿದ್ದದ್ದು (ಇವರು ಬೆಂಗಳೂರು ಕೃಷಿ ವಿ.ವಿ. ಪ್ರೊ. ರಾಜೇಗೌಡ ಅವರ ತಂದೆ), ಮತ್ತೊಬ್ಬರು ಕಾಲುವೆ ಬೀದಿಯ ಬಸವಣ್ಣ/ ಬಸವೇಗೌಡ (ನಂತರದ ವರ್ಷಗಳಲ್ಲಿ ಪ್ರದರ್ಶಿಸಿದ್ದು). ಈ ಇಬ್ಬರೂ ನಟರು ವೃತ್ತಿ ರಂಗಭೂಮಿ ನಟರಿಗಿಂತ ಕಡಿಮೆ ಕಂಠಶ್ರೀ

ಮತ್ತು ಪ್ರತಿಭೆಯಿದ್ದವರೇನಾಗಿರಲಿಲ್ಲ





೩. **ಸಂಪೂರ್ಣ ರಾಮಾಯಣ** ನಾಟಕದಲ್ಲಿ ಕೊಪ್ಪಲಿನ ಕಾಲುವೇ ಪಕ್ಕದ ಮನೆಯವರಾದ ಶ್ರೀ ಕೆ. ತಮ್ಮಪ್ಪ ಎಂಬುವರು ರಾಮನಾಗಿ, ಶ್ರಿ ಲಾಯರ್ ಸುಬ್ಬಣ್ಣ ಎಂಬುವರು ಲಕ್ಷ್ಮಣನಾಗಿ, ಶ್ರೀ ಸೇಂದಿ ಬಸವಯ್ಯ ಅವರು ರಾವಣನಾಗಿ, ಕೊಪ್ಪಲ ಶ್ರೀ ಮಾಯಪ್ಪ (ಶ್ರೀ ಅಶ್ವಥ್ಥ ಅವರ ತಂದೆ) ಆಂಜನೇಯನಾಗಿ ಅಧ್ಭುತವಾಗಿ ನಟಿಸಿದ್ದಂತೆ ನೆನಪು. ಈ ನಾಟಕವನ್ನೂ ಎರಡು ಭಾರಿ ಪ್ರದರ್ಶಿಸಿದರು.

೪. ***ಮಿರ್ಲೆಯಲ್ಲಿ ಯಕ್ಷಗಾನ?*** ಹೌದು, ಯಕ್ಷಗಾನ ಮೇಷ್ಟ್ರೊಬ್ಬರು ಸ್ವಲ್ಪಕಾಲ ಮಿರ್ಲೆಯಲ್ಲಿ ನೆಲೆಸಿದ್ದರ ಪರಿಣಾಮ, ೬೦ರ ದಶಕದಲ್ಲಿ "**ಲವ-ಕುಶ**" ಯಕ್ಷಗಾನವನ್ನು ಎರಡುಭಾರಿ ಪ್ರದರ್ಶಿಸಲಾಯಿತು. ಈ ಆಟ ಉತ್ತರ ಮತ್ತು ದಕ್ಷಿಣ ಕನ್ನಡ ಯಕ್ಷಗಾನಕ್ಕಿಂತ ಸ್ವಲ್ಪ ಭಿನ್ನವಾಗಿತ್ತು. ಅದಕ್ಕೆ ಹಿಂದೆಯೂ ಮಿರ್ಲೆಯಲ್ಲಿ ಯಕ್ಷಗಾನ ಆಟಗಳು ನಡೆದಿದ್ದವೆಂದು ಹಿರಿಯರಿಂದ ಕೇಳಿದ್ದೆ. ಅಂತೆಯೇ ಬೇಸಿಗೆಯಲ್ಲಿ ರಾತ್ರಿವೇಳೆ ಕೋಲಾಟ ಸತತ ನಡೆದಿತ್ತು.




೫. **ಎಚ್ಚಮ ನಾಯಕ** ನಾಟಕವನ್ನು 60-70ರ ದಶಕದಲ್ಲಿ ಎರಡು ಬಾರಿ ಪ್ರದರ್ಶಿಸಿದ್ದರು. ಮಿರ್ಲೆಯವರೇ ಆದ ಹೆಡ್ ಮಾಸ್ಟರ್ ಶ್ರೀ ನಂಜುಡ ಶೆಟ್ಟರು  ಊರಿನ ಆಸ್ಪತ್ರೆಯ ಡಾಕ್ಟರ್ ಶ್ರೀ ನಾರಾಯಣ ಶಟ್ಟರು ಮತ್ತು ಸಬ್ ರಿಜಿಸ್ಟ್ರಾರ್ ಶ್ರೀ ತಿಮ್ಮಯ್ಯ ಅವರುಗಳನ್ನ ಸೇರಿಸಿಕೊಂಡು ಕಟ್ಟಿದ ತಂಡದೊಟ್ಟಿಗೆ ಎರಡು ಭಾರಿ ಎಚ್ಚಮನಾಯಕ

ನಾಟಕವಾಡಿಸಿದ್ದಲ್ಲದೆ ತಾವೇ ಸುಲ್ತಾನನ ಪಾತ್ರಮಾಡಿ ಆಸ್ಥಾನದ ನರ್ತಕಿ ನರ್ತಿಸುವ ಧೃಶ್ಯದಲ್ಲಿ ಎರಡು ಹೆಜ್ಜೆ ಜೊತೆಗೆ ಕುಣಿದು ಎಲ್ಲರ ಮೆಚ್ಚುಗೆ, ಚಪ್ಪಾಳೆ ಪಡೆದವರು. ಎಚ್ಚಮನಾಯಕನಾಗಿ ಸಬ್ ರಿಜಿಸ್ಟ್ರಾರ್ ಶ್ರೀ ತಿಮ್ಮಯ್ಯ, ಚಾಂದ್ ಖಾನ್ ಆಗಿ ಡಾ. ನಾರಾಯಣ ಶಟ್ಟರು, ಎರಡು ಹಾಸ್ಯ ಪಾತ್ರಗಳಲ್ಲಿ ಮೇಷ್ಟು ಎ. ರಾಮಣ್ಣನವರ ಮಗ ಶ್ರೀ ರಾಮಕೃಷ್ಣ ಮತ್ತು M S ವೆಂಕಟಾಚಲ ನಟಿಸಿದ್ದರಲ್ಲದೆ ಸ್ತ್ರೀ ಪಾತ್ರಗಳಿಗೆ ಮೈಸೂರಿನಿಂದ ನಟಿಯರನ್ನು ಕರೆಯಿಸಿ ಪ್ರದರ್ಶಿಸಿದ ಈ ನಾಟಕ ಒಂದು ಕಂಪನಿ ನಾಟಕದಷ್ಟೇ ಪರಿಣಾಮಕಾರಿಯಾಗಿತ್ತು.

---------------------------------------------------------------------------

*ಪ್ರತಿಕ್ರಿಯೆ:*

ಎಂ ಪಿ ಶ್ರೀನಿವಾಸಾಚಾರ್ಯ: **ಕುರುಕ್ಷೇತ್ರ** ನಾಟಕದಲ್ಲಿ ನಮ್ಮ ತಂದೆ ಬೃಹನ್ನಳೆ ಪಾತ್ರ ಮಾಡಿದ್ದರು. ನಮ್ಮ ಚಿಕ್ಕಪ್ಪ ಮಂಚಾಚಾರ್ಯರು **ಭೀಷ್ಮ ಪ್ರತಿಜ್ಞೆ** ನಾಟಕದಲ್ಲಿ ಭೀಷ್ಮನ ಪಾತ್ರ ವಹಿಸುತ್ತಿದ್ದರು

---------------------------------------------------------------------------

ಎಂ ಪಿ ಶ್ರೀನಿವಾಸಾಚಾರ್ಯರು ಹೆಸರಿಸುವ **ಕುರುಕ್ಷೇತ್ರ** ಮತ್ತು **ಭೀಷ್ಮ ಪ್ರತಿಜ್ಞೆ** ನಾಟಕಗಳು ಬಹುಶಹ ೬೦ರ ದಶಕದ ನಂತರ ನಡೆದಿರಬೇಕು.

## *ಸಂಗೀತ ಮತ್ತು ವಾಧ್ಯಗಾರರು*

ಮದುವೆ ಸಮಾರಂಭಗಳಿಗೆ ಹಣವಂತರು ಅಪರೂಪಕ್ಕೆ ಹೊರಗಿನಿಂದ, ಅಂದರೆ, ಮೈಸೂರು ಮತ್ತು ಕೊಯಮತ್ತೂರಿನಿಂದ ವಾಧ್ಯಗಾರರ ತಂಡವನ್ನು ಕರೆಸುತ್ತಿದ್ದರು. ಮಿರ್ಲೆಯವರೇ ಆದ (ಬಜ್ರಂತಿ) ಶ್ರೀ ಲಕ್ಷ್ಮಯ್ಯ ಅವರ ಓಲಗ, ಶ್ರೀ ಗೋಪಾಲ ಅವರ ಡೋಲು ಇದ್ದ ತಂಡ ಪ್ರಸಿದ್ಧಿಯಲ್ಲಿತ್ತು.

## *ಕಾವ್ಯ ವಾಚನ, ಪುರಾಣ ಪ್ರವಚನ ಮತ್ತು ಕೀರ್ತನೆ*

ಮಿರ್ಲೆಯಲ್ಲಿ ಕಾವ್ಯ ವಾಚನ ಸಾರ್ವಜನಿಕವಾಗಿ ಬಹಳ ಹಿಂದಿನಿಂದ ನಡೆಯುತ್ತಿತ್ತೆಂದು ತೋರುತ್ತದೆ. ಚಾವಡಿ ಹತ್ತಿರದ ಶ್ರೀ ಸಣ್ಣಪ್ಪಾಜಿ ಗೌಡರ ಮನೆಯ ಮಹಡಿ ಮೇಲೆ,

ಕೋಟೇಗೌಡರ ಶ್ರೀ ಚಿಕ್ಕಣ್ಣನವರ ವಿಶಾಲವಾದ ಹಾಗೂ ಎತ್ತರದ ಕೆಂಪು ಗಾರೆಯ ಜಗಲಿ ಮೇಲೆ ಮತ್ತು ಕರಿಕಲ್ಲು ಬೀದಿಯ ಶ್ರೀ ಸಿದ್ದಲಿಂಗಯ್ಯ (ಮರಿ) ಅವರ ಜಗುಲಿ ಮೇಲೆ ನಡೆಯುತ್ತಿತ್ತು. ಗಮಕಿ ಮತ್ತು ವಿದ್ವಾಂಸರನ್ನು ಹೊರಗಿನಿಂದಲೂ (ರುದ್ರಪಟ್ಟಣ) ಕರೆಯಿಸುತ್ತಿದ್ದರು. ಮಿರ್ಲೆಯವರೇ ಆದ ಮೇಷ್ಟ್ರು ಶ್ರೀ ಎ. ರಾಮೇಗೌಡರು, ಶ್ರೀ ಕಿವುಡು ಲಕ್ಷ್ಮಪ್ಪನವರ ತಂದೆ ಶ್ರಿ ಸಣ್ಣಲಕ್ಷ್ಮೇಗೌಡರು (ಇವರು ಗಮಕಿ ಹಾಗೂ ಅಗಾಧ ಪಾಂಡಿತ್ಯ ಹೊಂದಿದ್ದವರು), ಶ್ಯಾನುಭೋಗ ಶ್ರೀ ವೇಣುಗೋಪಾಲ ಅವರು, ಶ್ರೀ ಮಂಡ ಬೋರೇಗೌಡರು, ಇತ್ಯಾದಿ ಗಮಕಿಗಳೂ ವಾಚನ ಮಾಡುತ್ತಿದ್ದರು.  ಚಲಪ್ಪನ ಶ್ರೀ ಪಾಪ ಶೆಟ್ಟರು ಅರ್ಥೈಸಿ ಪ್ರವಚನ ನೀಡುವುದರಲ್ಲಿ ಬಹಳ ಸಮರ್ಥರೆನಿಸಿದ್ದರು. ಒಂದು ವಿಶಿಷ್ಟ ಎಂದರೆ ಕೊಪ್ಪಲಿನ ಆಸ್ಪತ್ರೆ ಎದುರಿನ ಮನೆಯ ಶ್ರೀ ರಾಮಶಟ್ಟರ ಮೊಮ್ಮಗ ಕುಮಾರ ಪ್ರದೀಪ್ ಸುಮಾರು 13 ವರ್ಷದವನಿದ್ದಾಗಲೆ (1973?) ಹರಿಹಥೆ ಮಾಡಿ ಒಬ್ಬ ಒಳ್ಳೆಯ ಬಾಲ ಕಲಾವಿದನೆನಿಸಿದ್ದ ಎಂದು ಕೇಳಿದೆ. ಕುತೂಹಲದ ಸಂಗತಿ ಎಂದರೆ ತಾಲ್ಲೂಕಿನಲ್ಲಿ ಒಂದು ಕೀರ್ತನ ಕಲಾ ಸಂಘವಿದ್ದು, 1981ರಲ್ಲಿ ಗಮಕ ಕಲೆ ಸ್ಪರ್ಧೆ ಮತ್ತು 1983ರಲ್ಲಿ ಅಖಿಲಭಾರತ ಕೀರ್ತನಕಾರರ ಸಮ್ಮೇಳನ ಏರ್ಪಡಿಸಿತ್ತು.

(ಕಂದಾಯ ಬಾಕಿ ವಸೂಲಿಯ ಘಟನೆಯಲ್ಲಿ **"ಮೊಂಡ"** ಎಂಬ ಬಿರುದು ಕೊಟ್ಟಿದ್ದನ್ನು ತಾರಿ ತಿಳಿಸಿದ್ದರು. ಈ ಅಡ್ಡ ಹೆಸರು ಮಿರ್ಲೆಯ ಆ ವಂಶಸ್ತರಲ್ಲಿ ಇದ್ದು, ಪುರಾಣ ಕಾವ್ಯಗಳನ್ನು ಹಾಡುತ್ತಿದ್ದ ಗಮಕಿ  **ಮಂಡ ಬೋರೇಗೌಡ**ರೂ ಒಬ್ಬರು. ಇವರು ಪ್ರಾಥಮಿಕ ಶಾಲೆಯಾಗಿದ್ದ ಹೆಡ್ ಮುನ್ಷಿ ಮನೆಯ ಎದುರಿನ ಮನೆಯವರು ಎಂದು ನನ್ನ ನೆನಪು).

ಕಾವ್ಯವಾಚನ ಮತ್ತು ಪುರಾಣ ಪ್ರವಚನಗಳು ಕಡಿಮೆಯಾದ ಮೇಲೆ ಸುಮಾರು ಒಂದು ದಶಕಕ್ಕೂ ಹೆಚ್ಚು ಕಾಲ ವಿಜೃಂಬಣೆಯ ಗಣೇಶೋತ್ಸವದ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗಿ ಹರಿಕಥೆ, ಸಂಗೀತ, ನೃತ್ಯ, ನಾಟಕಗಳನ್ನು ಸುಮಾರು ಒಂದು ತಿಂಗಳ ಕಾಲ ನಡೆಸಲಾಗುತ್ತಿತ್ತು. ವಿಶೇಷವೆಂದರೆ ಅಕ್ಕಸಾಲಿಗ ಶ್ರೀ ಕೃಷ್ಣಾಚಾರಿಯವರ ಮಗ ಶ್ರೀ ವೆಂಕಟಾಚಾರಿ ವೃತ್ತಿಯಲ್ಲಿ ಉಪಾಧ್ಯಾಯರಾಗಿ 1970ರ ದಶಕದ ಅದ್ಧೂರಿ ಗಣೇಶೋತ್ಸವ

ಸಾಂಸ್ಕೃತಿಕ ಕಾರ್ಯಕ್ರಮಗಳ ಯಶಸ್ವೀ ನಿರೂಪಕರಾಗಿದ್ದರು. ಅದೇ ಉತ್ಸವದಲ್ಲಿ ಕೊಡೆಯಾಲದವರು ಮನಮೋಹಕ ಆಕಾಶದೀಪಗಳನ್ನು ತಯಾರಿಸಿ ಹಾರಿಬಿಡುತ್ತಿದ್ದರು.

ಮಿರ್ಲೆಯಲ್ಲಿ ಒಂದು ಬಹು ದೊಡ್ಡ **ಬೀದಿಬಸವ** ಇದ್ದಿತು. ಅದು ಎಂದೂ ಯಾರಿಗೂ, (ಮಕ್ಕಳಿಗೂ ಸಹ) ತೊಂದರೆ ಕೊಟ್ಟಿದ್ದಿಲ್ಲ. ಅದು ವಯಸ್ಸಾಗಿ ಸತ್ತಾಗ ಶ್ರೀ ರಾಮಶೆಟ್ಟರು (ಚೊತ್ತರಾಮ ಎಂದೂ ಕರೆಯುತ್ತಿದ್ದರು) ಅದರ ಕಳೇಬರದ ಅದ್ದೂರಿ ಮೆರವಣಿಗೆ ಮಾಡಿ ಅಂತ್ಯ ಸಂಸ್ಕಾರ ನಡೆಸಿದರೆಂದು ಕೇಳಿದ್ದೆ.

## ಕ್ರೀಡೆ

ಇತ್ತೀಚಿನ ವರ್ಷಗಳಲ್ಲಿ ಗ್ರಾಮೀಣ ಕ್ರೀಡೆಗಳನ್ನು, ಎಲ್ಲ ಸಂಸ್ಕೃತಿಕ-ಸಾಮಾಜಿಕ ಬದಲಾವಣೆಗಳಂತೆ, ನಗರ ಕ್ರೀಡೆಗಳಿಗೆ ಆದ್ಯತೆ ಇಲ್ಲವಾಗಿಸಿವೆ. ಬೇರೆ ಗ್ರಾಮಗಳಂತೆಯೇ ಮನೆಯ ಒಳಗಿನ, ಆಟದ ಮೈದಾನದ (ಹೊರಗಿನ), ಗಂಡಸರ ಮತ್ತು ಹೆಂಗಸರ ವಿವಿಧ ಕ್ರೀಡೆಗಳು ಮಿರ್ಲೆಯಲ್ಲಿಯೂ ಇದ್ದುವು.

***ಮಿರ್ಲೆ ವಾಲೀಬಾಲ್ ತಂಡ:*** ಮಿರ್ಲೆಯಲ್ಲಿ 50ರ ದಶಕದಲ್ಲಿ ವಾಲಿಬಾಲ್ ಕ್ರೀಡೆ ಉತ್ತುಂಗದಲ್ಲಿ ಇದ್ದು ೬೦ರ ದಶಕದ ಅಂತ್ಯದಷ್ಟರಲ್ಲಿ ಒಂದು ಅಪ್ಪಟ ಜೂಜಾಗಿ ಪರಿವರ್ತಿತವಾದದ್ದು ದುರಂತ. ದೂರದ ಊರುಗಳಲ್ಲಿ ಹಲವಾರು ಮ್ಯಾಚ್ ಆಡಿ ಗೆದ್ದು ಹೆಸರುಗಳಿಸಿದ್ದ ಮಿರ್ಲೆಯ ಉತ್ತಮ ವಾಲೀಬಾಲ್ ತಂಡ ಒಂದಿತ್ತು. ಮುಂದಿನ ಪೀಳೀಗೆಯಲ್ಲಿ ಈ ಪರಂಪರೆ ಮುಂದುವರೆಯಲಿಲ್ಲ. ಬದಲಾಗಿ ಮುಂದಿನ ಪೀಳಿಗೆ ವಾಲೀಬಾಲ್ ಆಟವನ್ನು ಒಂದು ಜೂಜಿಗೆ ಬಳಸಿ ಅದು disintegrate ಆಗಲು ಕಾರಣವಾಯಿತು. ಇಸ್ಪೀಟ್ ಆಟ ಒಂದು ಪೂರ್ಣಪ್ರಮಾಣದ ಜೂಜಾದರೆ, ಕೇರಮ್ ಆಟ ಬೆಟ್ ನಿಂದಾಗಿ ಬಾಗಶಹ ಜೂಜಾಗಿತ್ತು. ಮಿರ್ಲೆಯಲ್ಲಿ ಬಹಳ ಒಳ್ಳೆಯ ಕೇರಂ ಆಟಗಾರರಿದ್ದರು. ಆದರೂ ಆರಂಭದ ವರ್ಷಗಳಲ್ಲಿ ವಾಲೀಬಾಲ್ ಆಟದಲ್ಲಿ ಕ್ರೀಡಾಮನೋಭಾವ ಪ್ರಧಾನವಾಗಿದ್ದು ಬೆಟ್ಟಿಂಗ್ ನಗಣ್ಯವಾಗಿತ್ತು. ಮುಂದೆ ಬೆಟ್ಟಿಂಗ್ ಪ್ರಧಾನವಾಗಿ ಹೀಗಾಯಿತು ಎನ್ನಿಸುತ್ತದೆ. ಐಪಿಎಲ್ ನಂತೆ ಕ್ರೀಡೆಯಲ್ಲಿ ಗುಪ್ತವಾಗಿ

ಅಡಗಿರಬಹುದಾದ ಜೂಜಿನ ಸಾಧ್ಯತೆಗಳಿಂದಾಗುವ ಅನಾಹುತದ ನಿದರ್ಶನವಿದು. ಇದೇ ಕಾಲದಲ್ಲಿ ಬ್ಯಾಡ್ಮೆಂಟನ್ ಆಟವನ್ನೂ ಬಹಳ ಕಾಲ ಆಡಲಾಗುತ್ತಿತ್ತು.

-----------------------------------------------------------------------

**ಪ್ರತಿಕ್ರಿಯೆ:**

**ಕಾಂತರಾಜು:** ಆ ದಿನಗಳಲ್ಲಿ. ಸಾಯಂಕಾಲ ಸುಮಾರು ನಾಲ್ಕು/ಐದು ಗಂಟೆಯಾಯಿತೆಂದರೆ ಎಲ್ಲಿದ್ದರೂ " ಬಂಗಲೆಮಠ "ದ ( ಮಿಡ್ಲ್ ಸ್ಕೂಲ್ ನ / ಈಗಿನ ಸರ್ಕಾರಿ ಪಾಲಿಟೆಕ್ನಿಕ್ ಬಿಲ್ಡಿಂಗ್ ನ ) ಆಟದ ಮೈದಾನಕ್ಕೆ ವಾಲಿಬಾಲ್ ಆಟ ನೋಡಲು ಓಡಿ ಬರುತ್ತಿದ್ದುದುಂಟು. ಬಾಲ್ ದೂರ ಹೋದಾಗ ನಾವು ಹುಡುಗರು ಓಡಿ ಹೋಗಿ ತಂದುಕೊಡುತ್ತಿದ್ದೆವು. ನಾವೂ ಮೂರು ಕಾಸು / ಆರು ಕಾಸು ಪಂದ್ಯ ಕಟ್ಟಿಕೊಳ್ಳುತ್ತಿದ್ದುದುಂಟು . ಈಗ ಮಿರ್ಲೆಯಲ್ಲಿ ಅಷ್ಟು ಉತ್ಸಾಹದ ಆಟಗಳು ನಡೆಯುತ್ತಿಲ್ಲ ಎನ್ನಿಸುತ್ತಿದೆ. ನಂತರದ ದಿನಗಳಲ್ಲಿ ನಾನೂ ನನ್ನ ಸಮಕಾಲೀನರೊಡನೆ ಆಡಿದ್ದೇನೆ. ಅಂತೆಯೇ ಕೇರಂ ಆಟ ! ನೋಡಿದ್ದೇವೆ . ಪಂದ್ಯ ಕಟ್ಟಿ ಆಡಿದ್ದೇವೆ . ಆ ದಿನಗಳ ಕೇರಂ ಆಟಗಾರರಲ್ಲಿ ಇಬ್ಬರ ಹೆಸರುಗಳನ್ನಾದರೂ ಹೇಳಲಿಚ್ಚಿಸುತ್ತೇನೆ . ನನ್ನ ಸಹಪಾಠಿ ( ಹೈಸ್ಕೂಲ್ ಕ್ಲಾಸ್ ಮೇಟ್ - ಮಿತ್ರ ) ವೆಂಕಟಾಚಾರಿ ಮತ್ತು ನನಗಿಂತ ಹಿರಿಯರಾದ ಗೌಡಣ್ಣ. ಇಬ್ಬರೂ ಈಗ ನೋಡಲು ಸಿಗುವುದಿಲ್ಲ . ನೆನಪಿನಲ್ಲಿ ಸದಾ ಇರುತ್ತಾರೆ . ಈಗಿನ ನಮ್ಮ ಪ್ರೀತಿಯ ಮಿರ್ಲೆ ಮಕ್ಕಳಿಗೆ / ಯುವಕರಿಗೆ ( ಯುವತಿಯರಿಗೂ! ) ನಾವು ಆ ಆಟಗಳಿಂದ ಪಡೆದ ಆನಂದ, ಆರೋಗ್ಯ ದೊರಕುವಂತಾಗಬೇಕು . ಅಂತಹ ಚಂದದ ಮಿರ್ಲೆ, ಮಿರ್ಲೆಮಕ್ಕಳು / ಜನರನ್ನು ನೋಡುವ ಭಾಗ್ಯ ನಮ್ಮದಾಗಬೇಕು .

**ಕಿಶೋರ್ ಕುಮಾರ್**: (ಮಿರ್ಲೆಯಲ್ಲಿ ಈ ತಲೆಮಾರಿನಲ್ಲಿ ಕ್ರೀಡಾಸಕ್ತಿ ಹೇಗಿದೆ? ಮುಂದಿನ ಪೀಳಿಗೆಗಳಲ್ಲಿ ಕ್ರೀಡಾಪಟುಗಳುದಯಿಸಿದ್ದಾರೆಯೆ? ಎಂಬ ಪ್ರಶ್ನೆಗೆ) ಇತ್ತೀಚೆಗೆ ಸುರೇಶ್ ಎಂಬುವವರ ಮಗ ಅಭಿಷೇಕ್ ಗೆ ಕ್ರೀಡಾವಸತಿ ನಿಲಯದಲ್ಲಿ ಪ್ರವೇಶ ದೊರಕಿದೆ ಎಂಬ ಮಾಹಿತಿಯಿದೆ ಆದರೆ ಯಾವ ಕ್ರೀಡೆ ಎಂದು ತಿಳಿದಿಲ್ಲ.

**ಪ್ರಶಾಂತ್:** ಅಭಿಷೇಕ್ ಒಬ್ಬ ಉತ್ತಮ ವಾಲಿಬಾಲ್ ಕ್ರೀಡಾಪಟು, ಪ್ರಸ್ತುತ 19ರ ವಯೋಮಿತಿಯೊಳಗಿನ ರಾಜ್ಯ ವಾಲಿಬಾಲ್ ತಂಡವನ್ನು ಪ್ರತಿನಿಧಿಸುತ್ತಿದ್ದಾನೆ ಹಾಗೂ ಬೆಂಗಳೂರಿನ ಕ್ರಿಡಾವಸತಿ ನಿಲಯದಲ್ಲಿ ದ್ವಿತೀಯ ಪಿಯುಸಿ ಓದುತ್ತಿದ್ದಾನೆ.

---

***ಗರಡಿ ಮನೆ ಮತ್ತು ಕುಸ್ತಿ ಪ್ರದರ್ಶನ:*** ಗರಡಿ ಮನೆಗಳು ಶತಮಾನಗಳಿಂದ ಎಲ್ಲ ಗ್ರಾಮೀಣ ಪ್ರದೇಶದಂತೆ ಮಿರ್ಲೆಯಲ್ಲಿಯೂ ಇದ್ದವು. ನಾನು ಕೇಳಿ ತಿಳಿದಂತೆ ಕೊಪ್ಪಲಿನ ಪೈಲ್ವಾನ್

ಶ್ರೀನಿವಾಸ್ ಎಂಬುವರು (ಶ್ರೀ ಎ. ರಾಮೇಗೌಡ, Document writer ಅವರ ತಂದೆ) ಮಿರ್ಲೆಯಲ್ಲಿ ಮೊಕ್ಕಾಂ ಹಾಕುತ್ತಿದ್ದ ಸರ್ಕಸ್ ನಲ್ಲಿ ಒಂದು ದೊಡ್ಡ ಗುಂಡು ಕಲ್ಲನ್ನು ಎತ್ತಿ ಎಸೆಯುವ ಪ್ರದರ್ಶನ ನೀಡುತ್ತಿದ್ದರು. ಮಾರೀಗುಡಿ ಎದುರಿನ ಮನೆಯ ಶ್ರೀ ಮಹಾಲಿಂಗಯ್ಯ ಮತ್ತೊಬ್ಬ ಪ್ರಖ್ಯಾತಿ ಪಡೆದ ಪೈಲ್ವಾನ್ ಎಂದು ಕೇಳಿದ್ದೇನೆ. ಇವರು ಪ್ರಾಥಮಿಕ ಶಾಲಾ ಟೀಚರ್ ಶ್ರೀಮತಿ ಜಯಮ್ಮ ಎಂಬುವರ ತಂದೆ. ಉತ್ತರ ಕೃಷ್ಣ ಎಂಬುವರು ಕರಡಿ ಮೇಲೆ ಕುಸ್ತಿ ಮಾಡುವುದರ ಬಗ್ಗೆ ಪ್ರಚಾರ ನಡೆದಿತ್ತು. ಅವರು ಬಾಬಯ್ಯನ ಹಬ್ಬದ (ಮೊಹರಮ್) ಉತ್ಸವದಲ್ಲಿ ಬಹಳ ಕಾಲ
ಹುಲಿ ವೇಷ ಹಾಕುತ್ತಿದ್ದರು. ಹುಣಸಮ್ಮನ ಜಾತ್ರೆಯಲ್ಲಿ ಕುಸ್ತಿಗಳ ಒಂದು ಪ್ರಮುಖ ಪ್ರದರ್ಶನ ವಿರುತ್ತಿದ್ದು, ಜಾತ್ರೆಯಲ್ಲಿ ಪಾಲುಗೊಳ್ಳುತ್ತಿದ್ದ 9 ಗ್ರಾಮದವರೂ ಭಾಗವಹಿಸುತ್ತಿದ್ದರು.

-------------------------------------------------------------------

**ಪ್ರತಿಕ್ರಿಯೆ:**

**ಕಿಶೋರ್ ಕುಮಾರ್:** ನಾನು ಕಂಡ ಹಾಗೆ 2000 ಇಸವಿಯ ತನಕ ಕುಸ್ತಿ ಹಾಗೂ ಗರಡಿಮನೆಗಳು ಉತ್ತುಂಗ ಸ್ಥಿತಿಯಲ್ಲಿದವು. ಇದ್ದಕ್ಕಿದ ಹಾಗೆ ಕಣ್ಮರೆಯಾದ ಗರಡಿಮನೆಗಳ ಬಗ್ಗೆ ಈಗಲೂ ಬೇಸರವಿದೆ. ಗರಡಿಮನೆಗಳಿದ್ದ ಸಮಯದಲ್ಲಿ ಯುವಕರಲ್ಲಿ ಗುರುಭಕ್ತಿ, ಸದೃಢ ಮೈಕಟ್ಟು, ಉತ್ತಮ ಆರೋಗ್ಯವಿತ್ತು. ಈಗ ಯುವಕರಿಗೆ ಶ್ರದ್ದೆ, ಆಸಕ್ತಿ, ಜೀವನೋತ್ಸಹ ಇಲ್ಲ ಮಾದಕವ್ಯಸನಿಗಳಾಗಿ ಗುರು ಹಾಗೂ ಗುರಿಯಿಲ್ಲದೆ ಸಾಗುತ್ತಿದ್ದರೆ ಇದು ನಮ್ಮೂರಿನ ಸದ್ಯದ ವಿಷಾದನಿಯ ಪರಿಸ್ಥಿತಿ.

-------------------------------------------------------------------

## *ಮಿರ್ಲೆಯ ಅಂದಿನ ವಿಶಿಷ್ಟರು, ಕೌತುಕಮಯ ವ್ಯಕ್ತಿಗಳು*

ಮಿರ್ಲೆಯಲ್ಲಿ ಆಗ ನನ್ನ ಮನಸ್ಸಿನ ಮೇಲೆ ಪ್ರಭಾವ ಬೀರಿದ ಹಲವಾರು *ವಿಶಿಷ್ಟರು, ಕೌತುಕಮಯ ವ್ಯಕ್ತಿಗಳು ಇದ್ದಾರೆ. ಅವರಲ್ಲಿ ಕೆಲವರನ್ನ ಇಲ್ಲಿ ಹೆಸರಿಸುತ್ತೇನೆ. ಕೇವಲ ಎರಡು-ಮೂರು ವ್ಯಕ್ತಿಗಳ ಬಗ್ಗೆ ವಿವರಿಸುತ್ತೇನೆ.* ಶ್ರೀ ಕೋದಂಡರಾಮ ಗುಡಿಯ ಅರ್ಚಕ ಶ್ರೀ ಅನಂತರಾಮಭಟ್ಟರಂತೆ ಮಕ್ಕಳ ಮನಸ್ಸಿನ ವಯೋವೃದ್ಧ ಕೊಪ್ಪಲ ಶ್ರೀ **ಲಕ್ಷ್ಮಣ ಗೌಡ,** ಶ್ರೀ **ಮೇಷ್ಟ್ರು ಬೋರಯ್ಯ,** ದಲಿತ ಲೈನ್ ಮನ್ ಶ್ರೀ **ಪಾಪಯ್ಯ,** ಶ್ರೀ **ದೊಡ್ಡಲಕ್ಕ,** ಹಾಸ್ಯ ನಟ ಶ್ರೀ **ಬಜ್ರಂತಿ ಗೋಪಾಲಿ,** ಶನಿದೇವರು ಮೈಮೇಲೆ ಬರುತ್ತಿದ್ದ **ಮರಿಸಿದ್ದಮ್ಮನ** ಶ್ರೀ **ಚಲುವೇ**

**ಗೌಡ,** ಯಾರಿಗೂ ಹಾನಿಮಾಡದ ಆದರೆ ಮಕ್ಕಳಲ್ಲಿ ಭಯ ಹುಟ್ಟಿಸುವ ವಿರಕ್ತ, ಹುಚ್ಚ; ತನ್ನ ಜೀವನೋಪಾಯಕ್ಕಾಗಿ ಸೌದೆ, ಹಣ್ಣು, ಏಡಿ, ಮೀನು ಸಂಗ್ರಹಿಸಿ ಮಾರುತ್ತಿದ್ದ ಶ್ರೀ **ನಡಕೇರಿ,** ನಿರುಪ್ರದವಿ, ಆದರೆ ತನ್ನಷ್ಟಕ್ಕೆ ತಾನೇ ಬೀದಿಯಲ್ಲಿ ಯಾರಿಗೋ ಗಟ್ಟಿಯಾಗಿ ಶಪಿಸುತ್ತಿದ್ದ ಶ್ರೀ **ಕಂಠಿ ಅಯ್ಯನೋರು,** ಸತತ ದಿನವಿಡೀ ಅಡ್ಡೆಯಲ್ಲಿ ಕೆರೆಯಿಂದ ಬ್ರಾಹ್ಮಣರ ಮನೆಗೆ ನೀರು ಹೊರುತ್ತಿದ್ದ ಶ್ರೀ **ಸುಬ್ಬರಾಮಯ್ಯ, ಕುಂಡಮ್ಮ,** ಸೊಂಪಲುಗಳಲ್ಲಿ ಮಲದಮೇಲೆ ಪುಟ್ಟ ಮಕ್ಕಳಿಗೂ ಹೆದರಿ ನಡುಗುತ್ತಿದ್ದ ಎತ್ತರದ ಸುಂದರ ಯುವಕ ಅಂಕನಹಳ್ಳಿ ಮೂಲದ **ಶ್ರೀಕಂಠ**, ಕಿಲಾಡಿ ಧೀರ KD **'ತಂದ್ರೆ ಲಿಂಗ', "ಬಳ್ಳಕ್ಕಿ" ಸೀನ ,** ಇತ್ಯಾದಿ. *ಐತಿಹಾಸಿಕ ವ್ಯಕ್ತಿ ಅಬೂಮಹಮದ್ ಮಿರ್ಲೆ ಶೋಧಸಿದ ಬಗ್ಗೆ* ಅನುಬಂಧ 6 ನೋಡಿ.

## *ವಿಶಿಷ್ಟ ವಿಕಲ ಚೇತನ ಮಿರ್ಲೆ ಕುಂಡಮ್ಮನ ಕಥೆ*

ತೀವ್ರ ನಿರುತ್ಸಾಹ, ಬೇಸರ, ಖಿನ್ನತೆ ಆವರಿಸಿದಾಗ ತಟ್ಟನೆ ನೆನಪಾಗಿ ಜೀವನೋತ್ಸಾಹದ ಪ್ರತೀಕವಾಗಿ ನನ್ನನ್ನು ಮತ್ತೆ ಮತ್ತೆ ಕಾಡುವ ಮಿರ್ಲೆಯ ವ್ಯಕ್ತಿ ಸುಮಾರು 35 ವರ್ಷಗಳ ಹಿಂದೆ ತೀರಿಕೊಂಡ ಹುಟ್ಟಿನಿಂದಲೇ ಎರಡೂ ಕಣ್ಣು ಮತ್ತು ಎರಡೂ ಕಾಲುಗಳನ್ನೂ ಕಳೆದುಕೊಂಡು ತನ್ನವರಾರೂ ಇಲ್ಲದೆ ಬಡತನದಲ್ಲಿ ನಗುತ್ತಾ, ನಗಿಸುತ್ತಾ ಧೀರಳಾಗಿ 70-80 ವರ್ಷ ಬದುಕಿದ್ದ ಮಿರ್ಲೆ ಕುಂಡಮ್ಮ. ಈ ವ್ಯಕ್ತಿಯ ಹೆಸರು ಯಾರಿಗೂ ತಿಳಿಯದು. ಹುಟ್ಟು ಕುಂಟಿ ಮತ್ತು ಕುರುಡಿಯಾದ್ದರಿಂದ ಎಲ್ಲರೂ 'ಕುಂಡಮ್ಮ' ಎಂದು ಕರೆಯುತ್ತಿದ್ದರು. ನನಗೆ ತಿಳಿದಂತೆ ಈಕೆ ಮಿರ್ಲೆಯಲ್ಲಿ ಇದ್ದ ಏಕೈಕ ವೀರಶೈವ ಮಹಿಳೆ. ನನ್ನ ಬಾಲ್ಯದ ದಿನಗಳಲ್ಲಿ ಇವಳಿಗಾಗಾಲೇ ನಲವತ್ತು-ನಲವತ್ತೈದು ವರ್ಷಗಳಿದ್ದಿರಬೇಕು. ಅವಳ ಸೊರಗಿ ಪೀಚಾದ ದೇಹ ಇನ್ನೂ ಹೆಚ್ಚು ವಯಸ್ಸಾದಂತೆ ಕಾಣುತ್ತಿತ್ತು. ಇವಳು ಎರಡು ಉದ್ದವಾದ ದೊಣ್ಣೆಗಳನ್ನು ಎರಡೂ ಕೈಯಿಂದ ಮಧ್ಯಭಾಗದಲ್ಲಿ ಹಿಡಿದು ನೆಲಕ್ಕೆ ಊರಿ ಮುಂಡವನ್ನು ಬೀದಿಯಲ್ಲಿ ತೆವಳಿ ಸಾಗಿದರೆ, ಮಕ್ಕಳು ತೆಂಗಿನ ಮಟ್ಟೆಯ ಮೇಲೆ ಕುಳಿತು ಆಟವಾಡುತ್ತಾ ಎಳೆದಾಗ ಆಗುವ ರೀತಿಯ ಗುರುತು ಮಣ್ಣಿನ ಬೀದಿಯಲ್ಲಿ ಮೂಡುತ್ತಿತ್ತು. ದಿನವೆಲ್ಲ ತೆವಳಿದರೆ ಒಂದು ಮೈಲು ಸಾಗುತ್ತಿದ್ದುದು ದುಸ್ತರ. ಬೆಳಿಗ್ಗೆ ಮತ್ತು ಸಂಜೆ ಕುರಿ, ದನ, ಎಮ್ಮೆಗಳ ಹಿಂಡು ಕಾಡಿಗೆ ಹೋಗುವಾಗ, ಮತ್ತೆ ಊರಿಗೆ ಹಿಂತಿರುಗುವಾಗ ಕಿರಿದಾದ

ಬೀದಿಗಳಲ್ಲಿ ಹಠಾತ್ತನೆ ದಾರಿಯಲ್ಲಿ ನುಗ್ಗುವ ದನಗಳ ಹಿಂಡನ್ನು ಈ ಕುಂಡಮ್ಮ ಒಮ್ಮೊಮ್ಮೆ ಏಕಾಂಗಿಯಾಗಿ ದಂಡಗಳನ್ನೇ ಅಡ್ಡಡ್ಡವಾಗಿ ತನ್ನ ಸುತ್ತಲೂ ಬೀಸಿ, ಬಾಯಿಂದ ಗದರಿಸಿ ಪೋಲಿ ದನಗಳ ಹಿಂಡಿನಿಂದ ತನ್ನನ್ನ ರಕ್ಷಿಸಿಕೊಳ್ಳುತ್ತಿದ್ದುದು ಒಂದು ಕೌತುಕಮಯ ಸಾಹಸ. ಶಾಲೆಗೆ ಹೋಗುವಾಗ ಮತ್ತು ಬರುವಾಗ ಮಕ್ಕಳು ಇವಳ ಆಮೆ ನಡಿಗೆಯ ದಾರಿ ಸವೆಸಲು ಜೊತೆಯಾಗುತ್ತಿದ್ದುದೂ ಉಂಟು. ತನ್ನ ಆಕರ್ಷಕ ಮಾತು, ಹಾಡು ಮತ್ತು ಹಾಸ್ಯಗಳಿಂದ ಮಕ್ಕಳು ಮತ್ತು ದಾರಿಯಲ್ಲಿ ಹೋಗುವವರನ್ನು ನಗಿಸಿ, ರಂಜಿಸಿ ತನ್ನ ಜೊತೆ ಹೆಚ್ಚು ಕಾಲ ಕಳೆಯುವಂತೆ ಮಾಡುತ್ತಿದ್ದಳು ಎನ್ನಿಸುತ್ತದೆ. ಕನಿಕರಕ್ಕಿಂತ ಇವಳ ಒಡನಾಟದ ಖುಷಿ ಕೆಲವರನ್ನು ಇವಳ ಜೊತೆ ನಿಧಾನವಾಗಿ ಸಾಗಲು ಮತ್ತು ಇವಳಿಗೆ ಸಣ್ಣ ಪುಟ್ಟ ಸಹಾಯ ಮಾಡಲು ಕಾರಣವಾಗಿತ್ತು. ತಮ್ಮ ಕೆಲಸ ಕಾರ್ಯ ಬಿಟ್ಟು ಘಂಟೆಗಟ್ಟಲೆ ಇವಳೊಂದಿಗಿದ್ದವರು ಕೆಲವರೇ ಆದರೂ ಇವಳು ಹೆಚ್ಚಿನವರಿಗೆ, ವಿಶೇಷವಾಗಿ ಮಕ್ಕಳಿಗೆ ಇಷ್ಟವಾದ ವ್ಯಕ್ತಿ. ತುಂಟ ಮಕ್ಕಳು ಅವಳ ದೊಣ್ಣೆ ಕಿತ್ತುಕೊಳ್ಳುವುದು, ಹಿಂದಿನಿಂದ ಬಂದು ಬೆನ್ನು ಅಥವ ತಲೆ ಮೇಲೆ ತಟ್ಟಿ ನಿಶ್ಯಬ್ದವಾಗಿ ನಿಲ್ಲುವುದು, ಇತ್ಯಾದಿ ಚೇಷ್ಟೆ ಮಾಡಿ ಕುಂಡಮ್ಮನನ್ನು ಪೀಡಿಸುತ್ತಿದ್ದರು. ದೊಡ್ಡವರು ಅವಳಿಗೆ ಒಂದು ಹಾಗೂ ಎರಡು ರೂಪಾಯಿಗಳ ನೋಟುಗಳನ್ನು ಕೊಟ್ಟು ಅವಳು ಅದನ್ನು ಸರಿಯಾಗಿ ಗುರುತಿಸಿದಾಗ ಬೆರಗಾಗುತ್ತಿದ್ದರು. ದಾರಿಯಲ್ಲಿ ಸಿಕ್ಕಿದ ಅಥವ ಯಾರಾದರೂ ಕೊಟ್ಟ ಕಡ್ಡಿ ಸೌದೆಯನ್ನೇ ಉಪಯೋಗಿಸಿ ಮೂರು ಕಲ್ಲುಗಳ ಮೇಲೆ ಅಲ್ಯೂಮಿನಿಯಂ ಪಾತ್ರೆಯಲ್ಲಿ ನೀರು ಬಿಸಿ ಮಾಡಿ ತನ್ನ ಸೀರೆಯೊಂದನ್ನೇ ಹಿರಿಯಣ್ಣನ ಪುಟ್ಟ ಗುಡಿಯ ಬಾಗಿಲು, ಬಲಿಕಂಭ (ಸ್ವಾತಂತ್ರ್ಯ ಪೂರ್ವದಲ್ಲಿ ಈ ಕಂಭದ ಮೇಲೆ ವಾರ್ಷಿಕ ಜಾತ್ರೆಯಂದು ಕೋಣಗಳ ಬಲಿ ಕೊಡುತ್ತಿದ್ದರು) ಮತ್ತು ಅರಳೀಕಟ್ಟೆಯತುದಿಯಲ್ಲಿದ್ದ ಒಂದು ಪಾರಿವಾಳದ ಮರಕ್ಕೆ ತ್ರಿಕೋಣಾಕಾರದಲ್ಲಿ ಕಟ್ಟಿ ಪರದೆಯಾಗಿಸಿ ಸ್ನಾನ ಮಾಡುತ್ತಿದ್ದಳು. ತುಂಟ ಹುಡುಗರು ಆ ಪರದೆ ಸರಿಯಾಗಿಲ್ಲ ಎಂದು ಕೂಗಿ ಅವಳನ್ನು ಚುಡಾಯಿಸಿ, ನಾಚಿಸಿ, ಚೇಷ್ಟೆ ಮಾಡಿ ಕೆಟ್ಟದಾಗಿ ಬಯ್ಯಿಸಿಕೊಂಡು 'ಖುಷಿ' ಪಡುತ್ತಿದ್ದರು. ಕುಂಡಮ್ಮ ಶುಚಿಯಾಗಿದ್ದವಳು. ಸ್ನಾನ ಮಾಡುವುದು, ಮಡಿ ಬಟ್ಟೆ ಧರಿಸುವುದು, ಎದ್ದು ಕಾಣುವಂತೆ ಹಣೆಗೆ ವಿಬೂತಿ ಮತ್ತು ಕುಂಕುಮ ಧರಿಸುವುದು ಎಲ್ಲರನ್ನೂ ಬೆರಗುಗೊಳಿಸುತ್ತಿತ್ತು. ಆಕೆ ಧರಿಸಿದ್ದ ಬೆಳ್ಳಿ ಲಿಂಗವನ್ನು

ಸದಾ ಸ್ವಚ್ಛವಾಗಿ ಹೊಳೆಯುವಂತೆ ಇಟ್ಟುಕೊಂಡಿದ್ದು ದಿನ ನಿತ್ಯ ಪೂಜಿಸುತ್ತಿದ್ದಳು. ಒಮ್ಮೆ ಊರಿಗೆ ಬಂದಿದ್ದ ಟೆಂಟ್ ಸಿನಿಮಾದಲ್ಲಿ ಕುಂಡಮ್ಮ 'ಮಾಯಾಬಜಾರ" ಚಲನಚಿತ್ರ ನಡೆಯುತ್ತಿದ್ದಾಗ ಚಿತ್ರಮಂದಿರದ ಗೇಟ್ ಬಳಿಗೆ ಹೋಗಿ ಎರಡೂ ಆಟಗಳನ್ನು 'ಕೇಳಿ' ಬಂದು ಮರುದಿನದಿಂದ ಮಕ್ಕಳಿಗೆ ಚಿತ್ರದ ಸಂಭಾಷಣೆ ಹೇಳಿ ಹಾಡುಗಳನ್ನು ಹಾಡುತ್ತಿದ್ದಳು.

'ಕುಂಡಮ್ಮ' 1910ರ ಸುಮಾರಿಗೆ ಕೊಡೆಯಾಲದ ಅನುಕೂಲಸ್ಥ ಸಾಂಪ್ರದಾಯಿಕ ಕುಟುಂಬದಲ್ಲಿ ನಾಲ್ಕಾರು ಮಕ್ಕಳಾದ ಮೇಲೆ ಕೊನೆಯ ಮಗಳಾಗಿ ಜನಿಸಿದ್ದಳು. ಸುಮಾರು ಇಪ್ಪತ್ತೈದು ಮೂವತ್ತು ವರ್ಷಗಳಾಗುವವರೆಗೆ ತಂದೆ ತಾಯಿಯರ ಆಸರೆಯಲ್ಲಿ ಅಷ್ಟೇನೂ ಕಷ್ಟ ಅರಿಯದೆ ಬೆಳೆದಳು. ತಂದೆ ತಾಯಿಯ ಮರಣಾನಂತರ ಈಕೆ ಒಡಹುಟ್ಟಿದವರಿಗೆ ಭಾರವಾಗಿ ಕಂಡಿರಬೇಕು. ತಮ್ಮ ಹೊಣೆಗಾರಿಕೆ ತಪ್ಪಿಸಿಕೊಳ್ಳಲೋ ಅಥವ ಸ್ವಲ್ಪ ಹೆಚ್ಚು ಜನಸಂಖ್ಯೆಯಿರುವ ಊರಿನಲ್ಲಿ ಇವಳಿಗೆ ಜೀವನ ಸಾಗಿಸುವುದು ಸುಲಭವೆಂದೋ ಅಥವ ಗೃಹಕಲಹದಿಂದಲೋ ಒಂದು ನಡುರಾತ್ರಿ ಎತ್ತಿನ ಗಾಡಿಯಲ್ಲಿ ಕುಂಡಮ್ಮನನ್ನು ಕರೆತಂದು ಮಿರ್ಲೆಯಲ್ಲಿ ಅವಳಿಗೆ ತಿಳಿಸಿಯೋ ಅಥವಾ ಇಲ್ಲದೆಯೋ ಬಿಟ್ಟು ಹೋದರು. ಅಂದಿನಿಂದ ತಾನು ಸಾಯುವವರೆಗೂ ಕುಂಡಮ್ಮ ಮಿರ್ಲೆಯಲ್ಲಿಯೇ ಇದ್ದಳು. ಕುಂಡಮ್ಮ ಮುಂದೆ ಸುಮಾರು 45-50 ವರ್ಷ ದುಡಿದು, ಭಿಕ್ಷೆ ಮಾಡಿ ನಗುನಗುತ್ತಲೇ ಬದುಕಿದಳು ಎಂಬುದೇ ಒಂದು ಅದ್ಭುತ. ಮಿರ್ಲೆಗೆ ಬಂದ ಕೆಲವೇ ದಿನಗಳಲ್ಲಿ ಕುಂಡಮ್ಮ ಸ್ವಲ್ಪ ಅನುಕೂಲಸ್ಥೆಯಾದ ಮಕ್ಕಳಿಲ್ಲದ ಏಕಾಂಗಿ ವೃದ್ಧ ವಿಧವೆ ಶ್ರೀಮತಿ ತಿಮ್ಮಾಜಮ್ಮನಿಗೆ (ದೊಡ್ಡ ಹಟ್ಟಿಯ ಮುಂಭಾಗದ ಮನೆ) ಒಳ್ಳೆ ಜೊತೆಗಾತಿಯಾಗಿ ಅವಳ ಮನೆಯ ಕೊಟ್ಟಿಗೆ,


ಹಿರಿಯಣ್ಣನ ಗುಡಿ

ಪಡಸಾಲೆ ಮತ್ತು ಜಗಲಿಯನ್ನೇ ಆಶ್ರಯಿಸಿದಳು. ಹತ್ತಿರದ ಮನೆಗಳಲ್ಲಿ ಭತ್ತ ಕುಟ್ಟುವುದು, ರಾಗಿ ಬೀಸುವುದು, ಕಾಳು ತೆನೆ ಬಿಡಿಸುವುದು ಇತ್ಯಾದಿ ಕೆಲಸ ಮಾಡಿಕೊಟ್ಟು ಜೀವನ ಸಾಗಿಸುತ್ತಿದ್ದಳು. ತಿಮ್ಮಾಜಮ್ಮನ ಮರಣಾನಂತರ ತನ್ನ ವಾರಿಗೆಯ ಅಥವ ಹಿರಿಯ ಮಹಿಳೆಯರ

ಸಹಾಯದಿಂದ ಬೇರೆ ಮನೆಗಳ ಜಗಲಿಗಳ ಮೇಲೆ ವಾಸಿಸತೊಡಗಿದಳು. ನಂತರ ಬೀದಿಪಾಲಾದ ಕುಂಡಮ್ಮ ಮಳೆ, ಗಾಳಿ, ಛಳಿಯಲ್ಲಿ ಸಣ್ಣದಾದ ಹಿಯಣ್ಣನ ಗುಡಿ, ಪಾಳು ಮನೆ, ಹುಣಸಮ್ಮನ ಸಿಡಿಗಾಲಿ, ರಾಮದೇವರ ರಥದ ನೆರಳು ಇತ್ಯಾದಿಗಳನ್ನು ಆಶ್ರಯಿಸುವಂತಾಯಿತು. ಕುಂಡಮ್ಮನಿಗೆ ವಯಸ್ಸಾದಂತೆ ಭತ್ತಕುಟ್ಟುವ, ರಾಗಿ ಬೀಸುವ ಕೆಲಸಗಳು ಅವಳ ಪಾಲಿಗೆ ಇಲ್ಲವಾದವು ಅಥವ ಅವಳಿಂದ ಆಗಲಿಲ್ಲವೇನೊ. ಅವಳಿಗೆ ಭಿಕ್ಷೆ ಮತ್ತು ಇತರರ ಕರುಣಾಪೂರಿತ ಅಶ್ರಯ ಅನಿವಾರ್ಯವಾದರೂ ಅವು ದುರ್ಲಭ ವಿರಳವಾದುವು. ತನ್ನ ಕೊನೆಯ ದಿನಗಳನ್ನು ಕುಂಡಮ್ಮ ಬಹಳ ಸಂಕಟ ನೋವಿನಿಂದ ಕಳೆದಿರಬೇಕು. ಅವಳು ಸತ್ತ ಎಷ್ಟೋ ಘಂಟೆಗಳ ಮೇಲೆ ವಿಷಯ ತಿಳಿದ ಊರಿನ ಅವಳ ಓರಗೆಯ ವೃದ್ಧ ಮಹಿಳೆಯರು ಅವಳ ಅಂತ್ಯಕ್ರಿಯೆಯನ್ನು ಬಹಳ ಆಸ್ಥೆಯಿಂದಲೇ ನೆರವೇರಿಸಿದರು. ಅಂಗವಿಕಲರ ಕಲ್ಯಾಣಕ್ಕೆ ನಮ್ಮಲ್ಲಿ ಕಾಯಿದೆ ಇದ್ದರೂ ಬದಲಾದ ಸಾಮಾಜಿಕ ಮೌಲ್ಯ ಮತ್ತು ವ್ಯವಸ್ಥೆಯಲ್ಲಿ ಗ್ರಾಮೀಣ ದುರ್ಭಲ ಅಂಗವಿಕಲರ ಬದುಕು ಅಸಹನೀಯ ಮತ್ತು ಶೋಚನೀಯ. ಆಕೆಯ ಒಂದು ಭಾವಚಿತ್ರವನ್ನೂ ಸಂಗ್ರಹಿಸಲಾಗಲಿಲ್ಲ ಎಂಬ ಕೊರಗು ಇದೆ.


ಹುಣಸಮ್ಮನ ಗುಡಿ ಸಿಡಿಗಾಲಿ ತಂಗುದಾಣ

# 7

# ಶಿಕ್ಷಣ

ಮಿರ್ಲೆಯ ಶಿಕ್ಷಣ ಇತಿಹಾಸ ಗುರುತಿಸ ಹೊರಟರೆ, ಸ್ಥೂಲವಾಗಿ ಒಂದು ಭ್ರಾಹ್ಮಣ ಪ್ರಧಾನ ಊರಾಗಿ ಶತಮಾನಗಳ ಕಾಲ ಸಂಸ್ಕೃತ, ವೇಧೋಪನಿಷತ್ತುಗಳ ಪಾರಂಪರಿಕ ಶಿಕ್ಷಣವಿದ್ದಿರಬೇಕು. ಆದರೆ ಇತರ ಜನಾಂಗಕ್ಕಾಗಿ ಅಸಂಪ್ರದಾಯಕ ಹಾಗೂ ಅನೌಪಚಾರಿಕ ಶಿಕ್ಷಣ ಮಾರ್ಗವಾಗಿ ಕೂಲಿ ಮಠಗಳು 19ನೇ ಶತಮಾನದಲ್ಲೇ ಇದ್ದವು. ಅಂದರೆ ಔಪಚಾರಿಕ ಶಾಲೆ ಆರಂಭವಾಗದ ಮುನ್ನ ಹಲವಾರು ದಶಕಗಳು ಕೂಲಿ ಮಠಗಳಿದ್ದವು.

## ಪಾಪಣ್ಣನವರ ಕೂಲಿ ಮಠ

ಸರ್ಕಾರಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಿದ್ದಾಗಲೇ ಮಿರ್ಲೆಯ ವಿನೋಬಾ ರಸ್ತೆಯ ಎತ್ತರದ ವಿಶಾಲ ಜಗಲಿಯೊಂದರಮೇಲೆ (ಚಿತ್ರದಲ್ಲಿ ಆ ಜಗುಲಿಯಲ್ಲಿ ತಡಿಕೆ ಇದ್ದ ಕಡೆ ಈಗ ಗೋಡೆ ಹಾಕಲಾಗಿದೆ) 50 ಮತ್ತು 60ರ ದಶಕದಲ್ಲಿ ಮಿರ್ಲೆಯ ಬಹುಶಹ ಕೊನೆಯ ಕೂಲಿಮಠ ಶ್ರೀಮಾನ್ ಪಾಪಣ್ಣನವರು ನಡೆಸುತ್ತಿದ್ದಂತೆ ನೆನಪು. ನನ್ನ ಮಾಧ್ಯಮಿಕ ಶಾಲಾ ಸಹಪಾಠಿಗಳಲ್ಲಿ ಕೆಲವರು ಶಾಲೆಗೆ ಬರುವುದರ ಜೊತೆಗೆ ಒಂದು ರೀತಿ ಮನೆ ಪಾಠದಂತೆ ಈ ಕೂಲಿ ಮಠಕ್ಕೂ ಹೋಗುತ್ತಿದ್ದರು. ಇವರು ಮಗ್ಗಿಯನ್ನು ಹಿಂದುಮುಂದಾಗಿ ಶಾಲೆಯಲ್ಲಿ ಪಟಪಟನೆ ಹರಳು ಹುರಿದಂತೆ ಹೇಳುವುದು, ಹಿಂದೂ ಕ್ಯಾಲೆಂಡರ್ ರೀತಿಯ ಮಾಸ, ಋತು, ಇತ್ಯಾದಿಗಳನ್ನು ನಿರರ್ಗಳವಾಗಿ ಹೇಳುತ್ತಿದ್ದದ್ದು ವಿಶೇಷ.


ಪಾಪಣ್ಣನವರ ಕೂಲಿ ಮಠ

ಅದೇ ಕಾಲಕ್ಕೆ ಶಿಕ್ಷಕ ವೃತ್ತಿಯಲ್ಲಿಲ್ಲದೆಯೂ ಮನೆ ಪಾಠ ಹೇಳಿಕೊಡುತ್ತ ಕೂಲಿಮಠದಂತೆಯೇ ನಡೆಸುವವರಿದ್ದರೆಂದು ಕೇಳಿದ್ದೆ. ಅಂತಹವರಲ್ಲಿ ಕರಿಕಲ್ಲು ಬೀದಿಯ ಶ್ರೀ ಕಾಳೇಗೌಡರೂ

ಒಬ್ಬರು.

ವಿಪರ್ಯಾಸವೆಂದರೆ, ಸುಮಾರು 50 ವರ್ಷಗಳ ಹಿಂದೆ ಬಡ ಮತ್ತು ಬುದ್ಧಿವಂತ ವಿಧ್ಯಾರ್ಥಿಗಳು ಸರ್ಕಾರೀ ಶಾಲೆ ಮತ್ತು ಕಾಲೇಜುಗಳಲ್ಲೇ ಅಭ್ಯಸಿಸುತ್ತಿದ್ದು ಮನೆಪಾಠಕ್ಕೆ ಹೋಗುತ್ತಿರಲಿಲ್ಲ. ಖಾಸಗಿ ಶಾಲೆ/ ಕಾಲೇಜು ಹಾಗು ಮನೆ ಪಾಠ ಇತರ ವಿಧ್ಯಾರ್ಥಿಗಳ ಹೆಗ್ಗುರುತಾಗಿದ್ದಿತು. ಆದರೆ ಇಂದು ಇದು ತಿರುವುಮುರುವಾಗಿದೆ. ಮನೆಪಾಠ, ಒಳ್ಳೆಯ ಖಾಸಗಿ ಶಾಲೆ/ಕಾಲೇಜು ಅದರಲ್ಲೂ ಇಂಗ್ಲೀಷ್ ಮಾಧ್ಯಮ ಒಂದು ಅನಿವಾರ್ಯತೆಯಾಗಿಬಿಟ್ಟಿದೆ. ತೀವ್ರಗೊಂಡ ಶಿಕ್ಷಣ ಬೆಂಬಲಿತ ಉದ್ಯೋಗದ ಪೈಪೋಟಿ ಮತ್ತು ಸರ್ಕಾರಿ ಶಾಲಾ ಕಾಲೇಜುಗಳ ಗುಣಮಟ್ಟದ ಕುಸಿತ ಕಾರಣವಿರಬೇಕು.

---

<u>**ಪ್ರತಿಕ್ರಿಯೆ:**</u>

**ಸುನಿಲ್:** ಮಾರಿಗುಡಿ ಎದುರಿಗಿರುವ ಹೆಡ್ ಮುನ್ಸಿ ರವರ ಮನೆ ಹಾಗೂ ಮಂಡಬೋರೆಗೌಡರ ಮನೆಯವರು ( ನಮ್ಮ ಮನೆಯವರು) ಪ್ರಸ್ತುತ ವಾಸವಿರುವ ಮನೆಗಳಲ್ಲಿ ಆಗ ಕೂಲಿಮಠ ನಡೆಯುತ್ತಿತ್ತೆಂದು ಓದಿದ ಹಿರಿಯರು ಹೇಳುತ್ತಾರೆ. ಈ ಚಿತ್ರದ ಲ್ಲಿರುವ ಮನೆ ನಮ್ಮ ಅಜ್ಜಿಯ ಮನೆ ನೋಡಿ ಬಹಳ ಸಂತೋಷವಾಯಿತು..

**ನಡೆಸುತ್ತಿದ್ದವರ ಹೆಸರುಗಳು ಗೊತ್ತೇ? ಮತ್ತು ಯಾವಾಗ ನಡೆಯುತ್ತಿದ್ದಿತು/ ನಿಂತಿತು?**

**ಸುನಿಲ್:** ತುಳಸಿರಾಮೇಗೌಡರು (ಎಡಚಪ್ಪ) ಶಿಕ್ಷಕರಾಗಿ ಸ್ವಲ್ಪ ದಿನಗಳ ಕಾಲ ಕಾರ್ಯನಿರ್ವಹಿಸುತ್ತಿದ್ದರು ಎಂಬ ಮಾತು ಕೇಳಲ್ಪಟ್ಟಿದ್ದೇನೆ.

**ಅವರು ಕೂಲಿ ಮಠದ ಶಿಕ್ಷಕರೆ? ಯಾವ ವರ್ಷ?**

**ಸುನಿಲ್:** ಅದರ ಬಗ್ಗೆ ಮಾಹಿತಿ ಇಲ್ಲ..

---

## ಪ್ರಾಥಮಿಕ ಶಿಕ್ಷಣ

ಯಾವುದೇ ಧಾರ್ಮಿಕ (ವೀರಶೈವ, ಜೈನ, ಇತ್ಯಾದಿ) ವಿಧ್ಯಾ ಸಂಸ್ಥೆಗಳನ್ನಾಗಲಿ ಅಥವ ಮಠಗಳ ಶಾಖೆಗಳನ್ನಾಗಲಿ ಹೊಂದಿರದ ಮಿರ್ಲೆಯಲ್ಲಿ 19ನೇ ಶತಮಾನ ಅಥವ ಅದಕ್ಕೂ ಹಿಂದಿನಿಂದ ಕೂಲಿ ಮಠಗಳಲ್ಲಿ ಶಿಕ್ಷಣ ಅವ್ಯಾಹತವಾಗಿ ಸಾಗಿದ್ದರೂ ಸಂಸ್ಥಾನದ ಒಡೆಯರ

ಜನಪರ ಕಾಳಜಿಗಳಾದ ಶಿಕ್ಷಣ (ಮಹಿಳಾ ಶಿಕ್ಷಣವೂ ಸೇರಿದಂತೆ) ಮತ್ತು ಮೀಸಲಾತಿಯಂತಹ ಆಧುನಿಕ ನೀತಿ ಮತ್ತು ಆಸ್ಥೆಯಿಂದಾಗಿ 20ನೇ ಶತಮಾನದ ಆರಂಭದಲ್ಲಿಯೇ ಸರ್ಕಾರೀ ಶಾಲೆಗಳು ಆರಂಭವಾದುವು. ಅನಂತರ ಸುಮಾರು 70 ವರ್ಷಗಳಾದಮೇಲೆ ಕಾನ್ವೆಂಟ್ ಮಾದರಿಯ ಖಾಸಗಿ ಶಾಲೆಯನ್ನು ಮಿಥಿಲಾ ಸಂಸ್ಥೆ ಆರಭಿಸಿತು. ಸರ್ಕಾರೀ ಶಾಲೆಗಳ ಗುಣಮಟ್ಟ ಕುಸಿತದಿಂದ ಖಾಸಗಿ ಶಾಲೆಗಳು ಆರಂಭವಾದುವೋ ಅಥವ ಖಾಸಗಿ ಶಾಲೆಗಳ ಆರಂಭದಿಂದ ಸರ್ಕಾರೀ ಶಾಲೆಗಳ


ಮಿರ್ಲೆಯ ಒಂದು ಖಾಸಗಿ ಶಾಲೆ




ಗುಣಮಟ್ಟ ಕುಸಿಯಿತೊ ತಿಳಿಯದು. 1990ರ ದಶಕದಲ್ಲಿ ಕೊಪ್ಪಲಿನಲ್ಲಿ ಕಾಸಗಿ ಶಾಲೆಗಳನ್ನು ಶ್ರೀ ಚಾಮುಂಡೇಶ್ವರಿ ವಿಧ್ಯಾ ಸಂಸ್ಥೆ  ಆರಂಭಿಸಿದರೆ, ನಂತರದ ವರ್ಷಗಳಲ್ಲಿ ಶ್ರಿ ಅಮೃತೇಶ್ವರ ಪ್ರೌಢಶಾಲೆ ಆರಂಭವಾಯಿತು ಎಂದು ಕೇಳಿದ್ದೇನೆ. ಅಂಗನವಾಡಿ ಮಾದರಿಯ 331 ದೇಶೀ ಶಾಲೆಗಳು 1890ರ ವೇಳೆಗೆ ಮೈಸುರು ಸಂಸ್ಥಾನದಲ್ಲಿದ್ದವು. ಇದು ಮಿರ್ಲೆಯಲ್ಲಿಯೂ ಇದ್ದಿತೆ ತಿಳಿಯದು. ಹಾಗೆಯೇ ಎಲ್ಲೆಡೆ ಸಾಕಷ್ಟು ಅಂಗನವಾಡಿ ಕೇಂದ್ರಗಳು ಇವೆ.

## ಮಿರ್ಲೆಯಲ್ಲಿ ಶಿಶುವಿಹಾರ

ಸುಮಾರು 1962-63 ರಲ್ಲಿ ಆರಂಭವಾದ ಅಧುನಿಕ ಮಹಿಳಾ ಸಮಾಜದ ಜೊತೆಗೇ ಒಂದು ಶಿಶುವಿಹಾರವನ್ನು ಮೊದಲಿಗೆ ಚಾವಡಿ ಬಳಿಯ ಕಟ್ಟದಲ್ಲಿ ಆರಂಭಿಸಿ ನಂತರ ಚನ್ನಿಗರಾಯ ಮತ್ತು ಹನುಮಂತರಾಯ ದೇವಸ್ಥಾನಗಳ ಆವರಣದಲ್ಲಿ (ಕಾಂಪೌಂಡಿನಲ್ಲಿ) ಶಿಶುವಿಹಾರಕ್ಕೆ ಒಂದು ಪ್ರತ್ಯೇಕ ಕಟ್ಟಡವಾದ ಮೇಲೆ (ಆಸ್ಪತ್ರೆ ಕಟ್ಟಡ  ಕಟ್ಟಿಸಿಕೊಟ್ಟ ಸಾಹುಕಾರ್ ಕೋಟೇಗೌಡರೇ ಕಟ್ಟಿಸಿಕೊಟ್ಟರು) ವರ್ಗಾಯಿಸಲಾಯಿತು.

## ಸರ್ಕಾರಿ ಪ್ರಾಥಮಿಕ ಶಾಲೆ

ಮೈಸೂರು ಸಂಸ್ಥಾನವು ಹೋಬಳಿ ಮಟ್ಟದಲ್ಲಿ ಪ್ರಾಥಮಿಕ ಶಾಲೆಗಳನ್ನ 41 ಚ. ಮೈ. ವಿಸ್ತೀರ್ಣಕ್ಕೆ ಒಂದರಂತೆ ಆರಂಭಿಸಲು 1866ರಲ್ಲೇ ನಿರ್ಧರಿಸಿತು.

ಮಿರ್ಲೆಯಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆ ಯಾವಾಗ ಆರಂಭವಾಯಿತು ಎನ್ನುವುದನ್ನು ಅಂದಾಜಿಸಬುಹುದು. ಮೈಸೂರು ಸಂಸ್ಥಾನ 1913ರಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣ ಕಾಯಿದೆಯನ್ನು ಜಾರಿಗೆ ತಂದು 1000 ಹೆಚ್ಚುವರಿ ಪ್ರಾಥಮಿಕ ಶಾಲೆಗಳನ್ನು revised grant-in-aid ಆಧಾರದಮೇಲೆ (ಗ್ರಾಮಗಳೂ ಭಾಗಶಹ ವೆಚ್ಚವನ್ನು ಭರಿಸುವಂತೆ) ಪ್ರಾರಂಭಿಸಲು ನಿರ್ಧರಿಸಿತು. ಅಂದರೆ 1904ರ ನಂತರ ಈ ಕಟ್ಟಡ ನಿರ್ಮಾಣವಾಗಿದ್ದು, ಕೆಲವು ವರ್ಷಗಳ ಹಿಂದೆಯಷ್ಟೇ ಶಾಲೆ ಆರಂಭವಾಗಿರಬೇಕು.

***ಶತಮಾನ ತುಂಬಿದ ಮಿರ್ಲೆ ಪ್ರಾಥಮಿಕ ಶಾಲೆ ಕಟ್ಟಡ:*** ಇದು ಮಿರ್ಲೆಯ ಅತ್ಯಂತ ಹಳೆಯ ಮತ್ತು ಮೊದಲ ಸರ್ಕಾರಿ ಶಾಲಾ ಕಟ್ಟಡ. ಪ್ರಾಥಮಿಕ ಶಾಲೆಗಾಗಿ ನಿರ್ಮಿಸಿ ತಾತ್ಕಾಲಿಕವಾಗಿ 50ರ ದಶಕದಲ್ಲಿ ಸರ್ಕಾರಿ ಮಾಧ್ಯಮಿಕ ಶಾಲೆಯಾಗಿ, 60ರ ದಶಕದಲ್ಲಿ ಸರ್ಕಾರಿ ಪ್ರೌಡಶಾಲೆಯಾಗಿ ಮತ್ತು ಇತ್ತೀಚಿನ ವರ್ಷಗಳಲ್ಲಿ (2007 ರಿಂದ) ಕೆಲವು ವರ್ಷ ಸರ್ಕಾರಿ ಪಾಲಿಟೆಕ್ನಿಕ್ ಆಗಿ ಕಾರ್ಯನಿರ್ವಹಿಸಿದ ಈ ಕಟ್ಟಡ ಸುಮಾರು ನೂರ ಇಪ್ಪತ್ತು ವರ್ಷಗಳಷ್ಟು ದೀರ್ಘ ಸೇವೆ ಸಲ್ಲಿಸಿದೆ. ಕೂಲಿ ಮಠಗಳ ಆ ಕಾಲದಲ್ಲಿ ಇದನ್ನು 'ಬಂಗಲೀ ಮಠ' ಎಂದು ಕರೆಯಿತ್ತಿದ್ದರು. ಇದಕ್ಕೂ ಹಿಂದೆ ಪ್ರಾಥಮಿಕ ಶಾಲೆ ಶಾನುಭೋಗರ ಮನೆ ಹತ್ತಿರದ ಮನೆಯಲ್ಲಿತ್ತು ಮತ್ತು ಚಾಮಯ್ಯ ಮೇಷ್ಟು, ಹಂಪಾಪುರ ಮೇಷ್ಟು ಮತ್ತು ಹನುಮನಹಳ್ಳಿ ಶಂಕರಾಚರ್ಯರು ಎನ್ನುವ ಉಪಾಧ್ಯಾರುಗಳು ಇದ್ದರು ಎಂದು ತಿಳಿಯಿತು.






ಇಂದಿನ ಪ್ರಾಥಮಿಕ ಶಾಲಾ ಕಟ್ಟಡದಲ್ಲಿ ಮಾಧ್ಯಮಿಕ ಶಾಲೆ ನಡೆಯುತ್ತಿದ್ದುದರಿಂದ ಸರ್ಕಾರಿ ಪ್ರಾಥಮಿಕ ಶಾಲೆಯನ್ನು ತಾತ್ಕಾಲಿಕವಾಗಿ ಮಾರಿಗುಡಿ ಬಳಿಯ (ಗಿರೀಶಟ್ಟರ ಮನೆ ಮುಂದಿನ) ಹೆಡ್ ಮುನ್ಷಿ ಎನ್ನುವರ ವಿಶಾಲವಾದ ತೊಟ್ಟಿ ಮನೆಯಲ್ಲಿ 1950ರ ದಶಕದಲ್ಲಿ ನಡೆಸಲಾಗುತ್ತಿತ್ತು. ಬಹುಶಹ ಪ್ರಾಥಮಿಕ ಶಾಲೆಯ ಸ್ವಂತ ಕಟ್ಟಡ ನಿರ್ಮಾಣವಗುವವರೆಗೂ ಆ ಮನೆಯಲ್ಲಿಯೇ ಹಿಂದೆಯೂ ನಡೆಸಿದ್ದಿರಬೇಕು. ಅಂದರೆ ಆ ಮನೆಯು ಈ ಶಾಲಾ ಕಟ್ಟಡಕ್ಕಿಂತಲೂ ಹಳೆಯದು (ಆ ಮನೆಯ ಇಂದಿನ ಚಿತ್ರ ನೋಡಿ). 'ಹೆಡ್ ಮುನ್ಷಿ' ಎನ್ನುವುದು ಹಿಂದಿ/ ಉರ್ದು ಪದ ಮತ್ತು ಮುಖ್ಯ ಲೆಕ್ಕಾಧಿಕಾರಿ ಎಂದು ಸೂಚಿಸುತ್ತದೆ. ಅಲ್ಲಿ ವಾಸವಾಗಿದ್ದವರು ಒಕ್ಕಲಿಗರು ಮತ್ತು ಕೃಷಿಕರು. ಅವರ ಪೂರ್ವಿಕರು ಹೆಡ್ ಮುನ್ಷಿಯಾಗಿದ್ದರೆ? ಅಥವ ಹೆಡ್ ಮುನ್ಷಿಯೊಬ್ಬರಿಂದ ಅವರ ಪೂರ್ವಿಕರು ಕೊಂಡಿರಬಹುದೆ?

**ಪ್ರಾಥಮಿಕ ಬಾಲಕಿಯರ ಶಾಲೆ:**




ಮುಂದಿನ ಕೆಲವು ವರ್ಷಗಳ ನಂತರ ಬಾಲಕಿಯರ ಪ್ರಾಥಮಿಕ ಶಾಲೆ ಆರಂಭವಾಗಿರಬೇಕು. 1950ರ ದಶಕದಲ್ಲಿ ಬಾಲಕಿಯರ ಪ್ರಾಥಮಿಕ ಶಾಲೆ ಕಟ್ಟಡವನ್ನು ಪಂಚಾಯಿತಿ ಚೇರ್ಮನ ಶ್ರೀ ಎಂ. ಆರ್. ಬಲರಾಮೇಗೌಡರು ಅವರ ಮಗ ಜಯರಾಮನ ಸವಿ ನೆನಪಿಗೆ ಪಕ್ಕದಲ್ಲೇ ಕಟ್ಟಿಸಿದರು. ಸ್ತ್ರೀ ಶಿಕ್ಷಣದ ಬಗ್ಗೆ ಮೈಸೂರು ಸಂಸ್ಥಾನವು 1881ರಲ್ಲೇ ಸರ್ಕಾರೀ ಆಜ್ಞೆ ಹೊರಡಿಸಿದ್ದರೂ ಹೆಣ್ಣುಮಕ್ಕಳ ಶಾಲೆಗಳು 20ನೇ ಶತಮಾನದ ಆದಿಯಲ್ಲಿ (1910ರ ಸುಮಾರಿಗೆ) ಆರಂಭವಾದುವು ಎನ್ನಲಾಗಿದೆ. ಮಿರ್ಲೆ ಸರ್ಕಾರಿ ಬಾಲಕಿಯರ ಪ್ರಾಥಮಿಕ ಶಾಲೆ ಆರಂಭವಾದದ್ದು ಎಂದು ನಿಖರವಾಗಿ ತಿಳಿಯದು.

**ನನ್ನ ಪ್ರಾಥಮಿಕ ಶಾಲಾ ದಿನಗಳು (1953-56):** ನಾನು ಮಿರ್ಲೆ ಪ್ರಾಥಮಿಕ ಶಾಲೆಯಲ್ಲಿ ವಿಧ್ಯಾಭ್ಯಾಸ ಮಾಡಿದ್ದು ಎರಡು ತರಗತಿಗಳಲ್ಲಿ ಕೆಲವೇ ತಿಂಗಳುಗಳಾದ್ದರಿಂದ

ಹೆಚ್ಚಿನ ನೆನಪು ಇಲ್ಲ. ಆದರೂ ಮುಖ್ಯೋಪಾಧ್ಯಾಯರಾದ ಶ್ರೀ ವೆಂಕಟಸುಬ್ಬಯ್ಯ (ಅಣ್ಣಯ್ಯಪ್ಪನವರು), ಶ್ರೀ ತಮ್ಮಯ್ಯ, ಶ್ರೀ ಹೊನ್ನಾಚಾರ್, ಶ್ರೀ ವೆಂಕಟೇಗೌಡರು, ಶ್ರೀ ಶಂಕರಯ್ಯ, ಹೊಸಗ್ರಹಾರದ ಶ್ರೀ ಚನ್ನೇ ಗೌಡರು ನೆನಪಿನಲ್ಲಿದ್ದಾರೆ.

## ಸರ್ಕಾರೀ ಮಾಧ್ಯಮಿಕ ಶಾಲೆ




ಸಂಸ್ಥಾನದಲ್ಲಿ ಮಾಧ್ಯಮಿಕ ಶಾಲೆಗಳನ್ನು ಪ್ರಾಥಮಿಕ ಶಾಲೆಗಳಿಂದ ಪ್ರತ್ಯೇಕಿಸಿ 1923-24 ರಲ್ಲಿ ಆರಂಭಿಸಲಾಯಿತು ಮತ್ತು 1946ರ ವೇಳೆಗೆ ತಾಲ್ಲೂಕಿನಲ್ಲಿ ಆರು ಮಾಧ್ಯಮಿಕ ಶಾಲೆಗಳಿದ್ದುವು ಎಂದು ತಿಳಿಯುತ್ತದೆ. ಹಿಗಾಗಿ ಮಿರ್ಲೆಯಲ್ಲಿ ಪ್ರತ್ಯೇಕ **ಮಾಧ್ಯಮಿಕ ಶಾಲೆ** 1940ರ ದಶಕದಲ್ಲಿ ಆರಂಭಗೊಂಡಿರಬೇಕು. ಕಾರಣ ಆ ಶಾಲೆಯ ಕಟ್ಟಡಕ್ಕಾಗಿ ಗಾರೆ ಅರೆಯುವ 'ರೋಣುಗಲ್ಲು ಮತ್ತು ಒಂದು ದೊಡ್ಡ ನೆಲಬಾವಿ ನಿರ್ಮಿಸಿದ್ದನ್ನು ಗಮನಿಸಿದ್ದೆ. ದಿನಾಂಕ 27-7-1956 ರಲ್ಲಿ ಚಿತ್ರದಲ್ಲಿರುವ ಹೊಸ ಕಟ್ಟಡಕ್ಕೆ ಮಾಧ್ಯಮಿಕ ಶಾಲೆ ವರ್ಗಾಯಿಸಲಾಯಿತು. ಭಾವಿ, ಶೌಚಾಲಯ, ವಿಶಾಲ ಕಾಂಪೌಂಡಿನ ಪಕ್ಕಕ್ಕೆ ಶಾಲೆಗೆ ಸೇರಿದ ಹೊಲ ಮತ್ತು ಗದ್ದೆಗಳಿದ್ದುವು. ಅಲ್ಲಿಯವರೆವಿಗೆ ಈ ಶಾಲೆಯನ್ನೂ ಪ್ರಾಥಮಿಕ ಶಾಲಾ ಕಟ್ಟದದಲ್ಲೇ ನಡೆಸಲಾಗಿತ್ತು.

ಮಾಧ್ಯಮಿಕ ಶಾಲೆಯ ನೆನಪು ಮಾಡಿಕೊಳ್ಳಹೊರಟರೆ ತಕ್ಷಣ ಜ್ಞಾಪಕಕ್ಕೆ ಬರುವವರು ಶ್ರೀ ನಂಜುಂಡ ಶಟ್ಟರು, ಹಳೇ ಮಿರ್ಲೆ ಶ್ರೀ ರಾಮೇಗೌಡರು, ಹಳೇ ಮಿರ್ಲೆ ಶ್ರೀ H M ಚನ್ನಬಸಪ್ಪನವರು, ಶ್ರೀ ದಾಸೇಗೌಡರು ಮತ್ತು ಶ್ರೀ ಲಕ್ಕೇಗೌಡರು. ಶ್ರೀ ನಂಜುಂಡ ಶಟ್ಟರು ಮಿರ್ಲೆಯವರೇ ಆಗಿದ್ದು ಊರಿನ ಎರಡು ಮೂರು ತಲೆಮಾರಿನವರಿಗೆ ಪಾಠ ಹೇಳಿಕೊಟ್ಟವರು. ಈ ಮಾಧ್ಯಮಿಕ ಶಾಲೆಗೆ ಬರುವ ಮುನ್ನ ಮೈಸೂರಿನ ಪ್ರತಿಷ್ಠಿತ Hardwicke ಮಾಧ್ಯಮಿಕ ಶಾಲೆಯಲ್ಲಿ (ಕುವೆಂಪು ಅವರು ಬಾಲ್ಯದಲ್ಲಿ ಕಲಿತ ಶಾಲೆ ಎಂಬ

ಪ್ರಸಿದ್ಧಿ ಇದೆ ) ಉಪಾಧ್ಯಾಯ/ಮುಖ್ಯೋಪಾಧ್ಯಾಯರಾಗಿದ್ದವರು ಎಂದು ಕೇಳಿದ್ದೆ. ಇವರು ಕಬ್ಬಿಣದ ಕಡಲೆ 'ರನ್ ಅಂಡ್ ಮಾರ್ಟಿನ್ ಇಂಗ್ಲೀಷ್ ಗ್ರಾಮರ್" ಕಲಿಸುತ್ತಿದ್ದರು. ಊರಿನ ಹಿರಿಯರೆಲ್ಲರನ್ನೂ ಬಾಲ್ಯದ ಗೆಳೆಯರಂತೆ ಏಕವಚನದಲ್ಲಿ ಮಾತನಾಡಿಸುತ್ತಿದ್ದವರು. ಮೊದಲ ನೋಟಕ್ಕೆ ಭಯಹುಟ್ಟಿಸುವ, ಸ್ಥೂಲ ದೇಹದ, ಕಚ್ಚೆ ಪಂಚೆ ತೊಟ್ಟ, ಕೋಟು ಧರಿಸಿದ ವ್ಯಕ್ತಿ ಛತ್ರಿ ಹಿಡಿದು ಅಬ್ಬರಿಸುತ್ತಿದ್ದವರು. ಇಂತಹ ವ್ಯಕ್ತಿ 60-70ರ ದಶಕದಲ್ಲಿ ಊರಿನ ಆಸ್ಪತ್ರೆಯ ಡಾಕ್ಟರ್, ಸಬ್ ರಿಜಿಸ್ಟ್ರಾರ್ ಮತ್ತಿತರರನ್ನು ಸೇರಿಸಿಕೊಂಡು ಕಟ್ಟಿದ ತಂಡದೊಟ್ಟಿಗೆ ಎರಡು ಭಾರಿ ಎಚ್ಚಮನಾಯಕ ನಾಟಕವಾಡಿಸಿದ್ದಲ್ಲದೆ ತಾವೇ ಸುಲ್ತಾನನ ಪಾತ್ರಮಾಡಿದ ಬಗ್ಗೆ ಅವರ ಫೋಟೊ ಸಹಿತ ಅಧ್ಯಾಯ 6 ರಲ್ಲಿ ವಿವರಿಸಿದ್ದೇನೆ.

---

**ಪ್ರತಿಕ್ರಿಯೆ:**

**ಪ್ರೊ. ಸೂರಪ್ಪ**: Respected Nanjunda Shetty belongs to generation of outstanding and dedicated teachers. He was highly disciplined, outwardly tough but with big and generous heart. It is my fortune to be his student. All the teachers mentioned here by Dr. Sridhar were highly dedicated. I still have vivid memories of many conversations I had with him. He was close friend of my late father. My personal tributes to him and for his extraordinary service in educating hundreds of boys and girls in Mirle and neighboring villages.

**ಎಂ. ವಿ. ನಾಗರಾಜ ರಾವ್**: Avaru hosa ksttadadalli rathri uchita pata maduthiddaru holadalli handi kata hechadaga hudugarige bharji kottu aa handigalannu oodisalukaluhisuthiddaru Avaru namma hemmeya headmaste

**ಪೂರ್ಣಿಮ ಪೂರ್ವಿ:** Thanku so much sridhar Sir , I feel so proud to be his grand daughter. His teaching skill was so amazing , he taught me how to become WISER,KINDER & MORE MERCIFUL -“A TEACHER NOURISHES THE SOUL OF A CHILD FOR A LIFE TIME”

**ಪ್ರಶಾಂತ್:** Just to add one thing here, most of them are students of ಶ್ರೀ ನಂಜುಂಡ ಶಟ್ಟರು including me and my father.

----------------------------------------------------------------------------------------

ಮಿರ್ಲೆ ಮಾಧ್ಯಮಿಕ ಶಾಲೆಯಲ್ಲಿ, 1958–59 ರಲ್ಲಿ ಮುಖ್ಯೋಪಾಧ್ಯಯರಾಗಿದ್ದ ಹಳೇ ಮಿರ್ಲೆ ಶ್ರೀ ರಾಮೇಗೌಡರು ಉತ್ಸಾಹೀ ದಿಲ್ದಾರ್ ವ್ಯಕ್ತಿ, ಬಹಳ ಪ್ರಮುಖರೆನಿಸಿದ್ದರು ಹಾಗೂ ಮಿರ್ಲೆಯಲ್ಲಿ ಎಲ್ಲರ ಪರಿಚಯವಿದ್ದವರು. ಅವರ ಉತ್ಸಾಹೀ ನೇತೃತ್ವದಲ್ಲಿ ವಿಧ್ಯಾರ್ಥಿಗಳು **ಸಂಪೂರ್ಣ ರಾಮಾಯಣ** ನಾಟಕಮತ್ತು ವಿಧ್ಯಾರ್ಥಿನಿಯರು **'ಸತಿ ಸಾವಿತ್ರಿ'** ನಾಟಕ ಪ್ರಸ್ತುತ ಪಡಿಸಿದ್ದರು. **ಸಂಪೂರ್ಣ ರಾಮಾಯಣ** ನಾಟಕದಲ್ಲಿ ರಾವಣಪಾತ್ರಧಾರಿ ಮಿರ್ಲೆಯ ವೆಂಕಟೇಶ, ಆಂಜನೇಯ ಪಾತ್ರಧಾರಿ ಅಧ್ಬುತ ನಟ-ಗಾಯಕ ನರಸನಹಳ್ಳಿಯ ಮಲ್ಲೇಶ ಮತ್ತು ರಾಮನಾಗಿ ನರಸನಹಳ್ಳಿಯ ಸೋಮಣ್ಣ ಇದ್ದು ನಾಟಕ ಬಹಳ ಪರಿಣಾಮಕಾರಿಯಾಗಿತ್ತು.

**"ರಾವಣೇಶ್ವರ" ವೆಂಕಟೇಶನ ಅವಿಸ್ಮರಣೀಯ ನೆನಪು ತಂದ ಮನೆ!**

ಚಾವಡಿ ಬೀದಿ ಮತ್ತು ಕಾಲುವೆ ಬೀದಿಗಳನ್ನು ಸೇರಿಸುವ ಸೊಂಪಲು ನಾಲ್ಕೈದು ದಶಕಗಳ ನಂತರ ಹೇಗಿರಬುಹುದೆಂಬ ಕುತೂಹಲದಿಂದ ಇಣುಕಿದಾಗ ಈ ಚಿತ್ರದಲ್ಲಿರುವ ಶಥಮಾನಕ್ಕೂ ಹಳೆಯ ಶಿಥಿಲಗೊಂಡ ಮನೆ ನನ್ನ *ತೀರ ಅಪ್ತ ಹಾಗೂ ವೈಯಕ್ತಿಕ* ನೆನಪನ್ನು ಕೆದಕಿತು. ಮಿರ್ಲೆ ಮಾಧ್ಯಮಿಕ ಶಾಲೆಯಲ್ಲಿ, 1958/59 ರಲ್ಲಿ ಮುಖ್ಯೋಪಾಧ್ಯಯರಾಗಿದ್ದ ಹಳೇಮಿರ್ಲೆ ರಾಮೇಗೌಡರ ಉತ್ಸಾಹೀ ನೇತೃತ್ವದಲ್ಲಿ ನಡೆದ "ಸಂಪೂರ್ಣ ರಾಮಾಯಣ" ನಾಟಕದಲ್ಲಿ ಪರಿಣಾಮಕಾರಿ ರಾವಣಪಾತ್ರಧಾರಿ ವೆಂಕಟೇಶ ಬೆಳಗ್ಗಿನ ಜಾವ ಗಟ್ಟಿಯಾಗಿ ಓದಿಕೊಳ್ಳುತ್ತಿದ್ದ ಮನೆಯ ಜಗುಲಿಯಿದು. ವೆಂಕಟೇಶ ಅಕಾಲಿಕ ಮರಣಕ್ಕೆ ತುತ್ತಾದನೆಂದು ಕೇಳಿದ್ದೆ. ವೆಂಕಟೇಶ ಅಕಾಲಿಕ ಮರಣಕ್ಕೆ ತುತ್ತಾದನೆಂದು



ಕೇಳಿದ್ದೆ. ಕಾರಣ, "ಎಲ್ಲಿಭೂರಮೆ..." ಕವನವನ್ನು ತುಂಬ ಇಂಪಾಗಿ ಹಾಡುತ್ತಿದ್ದ ಮಿರ್ಲೆಯ ನರ್ಸ್‌ಒಬ್ಬರ ಮಗಳು ಸಹ ವಿಧ್ಯಾರ್ಥಿನಿಯೊಂದಿಗಿನ crush/ ಮೋಹದಿಂದ ಬುದ್ಧಿ ಭ್ರಮಣೆಯಾಯಿತೆಂದು ಹೇಳುತ್ತಿದ್ದರು *[ ಅಧ್ಯಾಯ ೬ರ ಮಿರ್ಲೆ ಕಲಾವಿದರು ವಿಭಾಗ ನೋಡಿ,] .*

**ನನ್ನ ಮಾಧ್ಯಮಿಕ ಶಾಲಾ ದಿನಗಳು (1956/57 ರಿಂದ 1959/60):** ಓದಿಗಿಂತ ಆಟ ಮತ್ತು ಸುತ್ತಲಿನ ಪರಿಸರದಲ್ಲೇ ಹೆಚ್ಚು ಆಸಕ್ತಿ ಹೊಂದಿದ್ದ ಅನಾಯಾಸವಾಗಿ ಮೊದಲಿಗೆ ನೆನಪಿನ ಕೋಶವನ್ನು ಅನಮತ್ತಾಗಿ ತುಂಬಿಕೊಂಡ ದಿನಗಳಿವು. ಮಿರ್ಲೆಯವರೇ ಆದ ಜನಪ್ರಿಯ ಮುಖ್ಯೋಪಾಧ್ಯಾಯರಾದ ಶ್ರೀ ನಂಜುಂಡಶಟ್ಟರು ಕೋನೆಯವರ್ಷ, ಅಂದರೆ 8ನೇ ತರಗತಿಗೆ ಮಾತ್ರ ದೊರಕಿದರು. ಪ್ರಾಥಮಿಕ ಶಾಲೆಯಲ್ಲಿ ಅಣ್ಣಯ್ಯಪ್ಪ ಮೇಷ್ಟರಂತೆ, ಮಾಧ್ಯಮಿಕ ಶಾಲೆಯಲ್ಲಿ ನಂಜುಂಡಶಟ್ಟರು ಮಿರ್ಲೆಯ 3 ತಲೆಮಾರಿನವರಿಗೆಲ್ಲಾ ಉಪಾಧ್ಯಾಯರಾಗಿದ್ದವರು. ಅದಕ್ಕೆ ಮುಂಚೆ ಹಳೇಮಿರ್ಲೆ ರಾಮೇಗೌಡರು ಮುಖ್ಯೋಪಾಧ್ಯಯರಾಗಿದ್ದರು. ಮತ್ತೊಬ್ಬ ಜನಪ್ರಿಯ ಮೇಷ್ಟ್ರು "ತಲಕಾಡು ಮೇಷ್ಟ್ರು" ಮೊದಲ ಒಂದು ವರ್ಷವಷ್ಟೇ ಲಭ್ಯವಿದ್ದರು. ಅಂದಹಾಗೆ 'ತಲಕಾಡು ಮೇಷ್ಟ್ರು' ಹರಿಜನ ಬಾಲಕರ ಉದ್ಧಾರಕ್ಕಾಗಿಯೆ 1900ರ ಸುಮಾರಿಗೆ ಮಳವಳ್ಳಿಯಲ್ಲಿ ಒಂದು ಪ್ರತ್ಯೇಕ ಶಾಲೆಯಲ್ಲಿ ಪಾಠಹೇಳವ ಮೂಲಕ ಆದಿ ಕರ್ನಾಟಕರ ಪ್ರಥಮ ಗುರು ಎಂಬ ಮನ್ನಣೆ ಪಡೆದ ತಲಕಾಡು ರಂಗೇಗೌಡರ ಶಿಷ್ಯರೆ?

ಹಳೇ ಮಿರ್ಲೆ ಶ್ರೀ H M ಚನ್ನಬಸಪ್ಪನವರು ಬಹಳ ಮೃದು-ಸಾಧು, ತೆಳ್ಳಗೆ ಬಹಳ ಎತ್ತರವಿದ್ದದ್ದರಿಂದ ತುಂಡು ಪಂಚೆ ಉಡುತ್ತರೇನೊ ಎಂದು ಭಾಸವಾಗುತ್ತಿತ್ತು. ಆಗತಾನೆ ಟೀಚರ್ಸ್ ಟ್ರೈನಿಂಗ್ ಮುಗಿಸಿ ಒಟ್ಟಿಗೆ ನಮ್ಮ ಶಾಲೆಯಲ್ಲಿ ಹೊಸದಾಗಿ ವೃತ್ತಿ ಆರಂಬಿಸಿದ ಯುವಕ ಸುರದ್ರೂಪಿಗಳಾದ ಸೂಟುಧಾರಿ **ಶ್ರೀ ದಾಸೇಗೌಡರು** ಮತ್ತು ಶಿಸ್ತನ್ನು ಅತಿರೇಕಕ್ಕೆ ಒಯ್ಯುತ್ತಿದ್ದ ಬೆಳ್ಳಿಕಟ್ಟೀನ ಬೇಟೆ ಬೆತ್ತ ಹಿಡಿಯುತ್ತಿದ್ದ **ಶ್ರೀ ಲಕ್ಕೇಗೌಡರು** ಎಂಬ ಉಪಾಧ್ಯಾಯದ್ವಯರು ನನ್ನ ಮಾಧ್ಯಮಿಕ ಶಾಲಾ ದಿನಗಳಲ್ಲಿ ಬಹಳ ಪ್ರಭಾವ ಬೀರಿದವರು. ಲಕ್ಕೇಗೌಡರು ಮಕ್ಕಳು ಬೆಳಿಗ್ಗೆ-ಸಂಜೆ ಆಟ ಆಡುವುದನ್ನೇ ಅಪರಾಧ-ಅಶಿಸ್ತು ಎಂದು ನಂಬಿದ್ದವರು. ದಾಸೆಗೌಡರು ಕೆಲವೇ ದಿನಗಳಲ್ಲಿ ಅಥವ ವರ್ಷದೊಳಗೆ ಮಿರ್ಲೆಯ

ಅಳಿಯನಾದರು. ತಾವು ನೋಡಿದ ಸಿನೆಮ ಮತ್ತು ಓದಿದ ಕಥೆಗಳನ್ನ ದಾಸೇಗೌಡರು ಬಹಳ ಸ್ವಾರಸ್ಯವಾಗಿ ತರಗತಿಯಲ್ಲಿ ಹೇಳುತ್ತಿದ್ದರು. ಅವರು ಹೇಳಿದ ಕುವೆಂಪು ವಿರಚಿತ "ಈಶ್ವರನೂ ನಕ್ಕಿರಬೇಕು" ಕಥೆ ಈಗಲೂ ಕಣ್ಣಿಗೆ ಕಟ್ಟಿದಂತಿದೆ. ಲಕ್ಕೇಗೌಡರು ಹೆಚ್ಚಾಗಿ ಶಿಸ್ತಿಗೆ ಗಂಟುಬಿದ್ದಂತೆ ತೋರುತ್ತಿದ್ದರು. ಮಕ್ಕಳು ಓದುವದನ್ನು ನಿರ್ಲಕ್ಷಿಸಿ ಆಟದಲ್ಲೇ ತೊಡಗಬಾರದೆಂಬುದು ಅವರ ಕಳಕಳಿ. ಯಾವ ಬೀದಿಯಲ್ಲಿ ಎಲ್ಲೇ ಆಟವಾಡುತ್ತಿದ್ದರೂ ಲಕ್ಕೇಗೌಡರ ಕಣ್ಣಿಗೆ ಬಿದ್ದರೆ ಸಾಕು ನಾವು ಯಾವ ತರಗತಿಯಲ್ಲಿದ್ದರೂ ಅವರು ವಿಧ್ಯಾರ್ಥಿಯನ್ನು ಹುಡಿಕಿಕೊಂಡು ಬಂದು ಬೆತ್ತದಿಂದ ಹೋಡೆಯುತ್ತಿದ್ದುದರಿಂದ ಅವರು ವಿಧ್ಯಾರ್ಥಿಗಳಿಗೆ ಸಿಂಹಸ್ವಪ್ನರಾಗಿದ್ದರು. ನನ್ನ ಸಹಪಾಟಿ ನರಸನಹಳ್ಳಿ ಬ್ರಹ್ಮಾಚಾರಿಗೆ ಒಂದು ಬೆಳ್ಳಿ ಪಾವಲಿ ಕೊಟ್ಟು ಅವರ ಬೀಟೆ ಮರದ ಬೆತ್ತಕ್ಕೆ ಬೆಳ್ಳಿ ಕಟ್ಟುಹಾಕಿಸಿಕೊಂಡದ್ದೊಂದು ವಿಶೇಷವೇ ಸರಿ. ಅವರು ಸೈಕಾಲಜಿ (ಮನಃಶಾಸ್ತ್ರ) ಓದಿರುವುದಾಗಿಯೂ, ನಮ್ಮ ಮುಖ ನೋಡಿ ಮನಸ್ಸಿನಲ್ಲಿರುವುದನ್ನು ಹೇಳಬಲ್ಲವರಾಗಿರುವರೆಂದು ಹೇಳಿದ್ದರಿಂದ ಅವರ ಬಗ್ಗೆ ನಮಗೆ ಒಂದು ರೀತಿಯ ಭಯವಿತ್ತು. ಅವರ ಸೈಕಾಲಜಿಗೆ ನಾನು ಮಿಕವಾದದ್ದೊಂದು ಘಟನೆಯನ್ನು ಎಂದೂ ಮರೆಯಲಾರೆ. ಸಂಕ್ಷಿಪ್ತವಾಗಿ ಆ ಘಟನೆ ಹೀಗಿದೆ. ಒಂದು ಶನಿವಾರ ಬೆಳಗ್ಗಿನ 8 ಘಂಟೆ ಹೊತ್ತಿಗೆ ಮನೆಯಲ್ಲಿ ತಂಗಳ ಏನೂ ತಿನ್ನದೆ ಶಾಲೆಗೆ ಬಂದಾಗ (ಶನಿವಾರ ಶಾಲೆ ಹತ್ತೂವರೆಗೆ ಮುಗಿಯಬೇಕಿತ್ತಲ್ಲವೆ!) ತರಗತಿಗಳನ್ನು ರದ್ದು ಪಡಿಸಿ ಶಾಲೆಯ ಹೊಲಕ್ಕೆ (ಪಕ್ಕದಲ್ಲೆ ಇದ್ದ ಹೊಲ ಮತ್ತು ಗದ್ದೆಗಳಲ್ಲಿ ವಿಧ್ಯಾರ್ಥಿಗಳು ಕೆಲಸ ಮಾಡುವುದು ಮತ್ತು ಇಬ್ಬರು-ಮುವ್ವರು ವಿದ್ಯಾರ್ಥಿಗಳಿಗೆ ಒಂದೊಂದು ಪ್ಲಾಟ್ ನಿಗಧಿಪಡಿಸಿ ಅವರು ಅದರಲ್ಲಿ ತರಕಾರಿ ಬೆಳೆಯಲು ಪ್ರೊತ್ಸಾಹಿಸುವುದು ಸಾಮಾನ್ಯವಾಗಿ ನಡೆದಿತ್ತು) ಬೇಲಿಹಾಕುವ ಸಲುವಾಗಿ ಎಲ್ಲರನ್ನು ನಾಟನಹಳ್ಳಿ ಮತ್ತು ಹಳೇ ಮಿರ್ಲೆ ಭಾಗದ ಕಾಡಿಗೆ (ಪಾಳುಬಿದ್ದ ಹೊಲಗಳು) ಹೋಗಿ ಮುಳ್ಳು ಗಿಡಗಳ ಗೊಂಚಲುಗಳನ್ನು ಕಡಿದು, ಗಾಡಿಯಲ್ಲಿ ತುಂಬಿತರಲು ನಿಯೋಜಿಸಿದರು. ಯಾರದೋ ಮನೆಯ ಗಾಡಿಯನ್ನು ಎಳೆತಂದರು, ಆದರೆ ಅದಕ್ಕೆ ಎಳೆಯಲು ಎತ್ತುಗಳನ್ನ ಯಾರೂ ಕೊಡದ ಕಾರಣ, ನಾವೇ ಗಾಡಿ ಎಳಿಯುವುದೆಂದು ತೀರ್ಮಾನಿಸಲಾಯಿತು. ಗಾಡಿ ಎಳೆಯಲು ಆರಂಬಿಸಿದ ಕೆಲವೇ ನಿಮಿಷಗಳಲ್ಲಿ ಊರಿನಹೊರವಲಯಕ್ಕೆ ಬರುವಷ್ಟರಲ್ಲಿ ಉಪಾದ್ಯಾಯರಾರೂ ಇಲ್ಲದ ಕಾರಣ ಹೆಚ್ಚಿನವರು ತಪ್ಪಿಸಿಕೊಂಡರು ಮತ್ತು ಕೆಲವು

ಬಲಿಷ್ಠರೂ ವಯಸ್ಸಿನಲ್ಲಿ ದೊಡ್ಡವರೂ ಆದ ವಿದ್ಯಾರ್ಥಿಗಳು ಗಾಡಿ ಏರಿ ಕುಳಿತರು. ಮಿಕ್ಕವರು ಗಾಡಿಯನ್ನು ಎಳೆವ ಮತ್ತು ತಳ್ಳುವ ಕಾಯಕದಲ್ಲಿ ತೊಡಗಿದ್ದೆವು. ಕಾಡಿನಲ್ಲಿ ಮುಳ್ಳಿನ ಗೊಂಚಲುಗಳನ್ನು ಕಡಿದು ಗಾಡಿಗೆ ತುಂಬುವಷ್ಟರಲ್ಲಿ ಬಿಸಿಲು ನೆತ್ತಿಯ ಮೇಲೆ ಏರಿ ಬಾಯಾರಿಕೆ ಹಸಿವು ಒಟ್ಟಿಗೇ ಆಗುತ್ತಿತ್ತು. ಬಹಳಷ್ಟು ವಿದ್ಯಾರ್ಥಿಗಳು ಹತ್ತಿರದ ನಾಟನಹಳ್ಳಿ ಅಥವ ಹಳೇ ಮಿರ್ಲೆಗೆ ಹೋಗಿ ನೆಂಟರ/ ಪರಿಚಯಸ್ಥರ ಮನೆಯಲ್ಲಿ ಬಾಯಾರಿಕೆ ತೀರಿಸಿಕೊಡು, ಊಟಮಾಡಿ ಅಥವ ಏನಾದರು ತಿಂದು ಸ್ವಲ್ಪ ಹೊತ್ತು ಸುಧಾರಿಸಿಕೊಂಡು ಗಾಡಿಯ ಬಳಿಗೆ ಬಂದರು. ಆ ಬಿಸಿಲಿನಲ್ಲಿ ನಾವು ಕೆಲವರು ಏನನ್ನು ತಿನ್ನದೆ ಹಸಿವಿನಿಂದಲೇ ಗಾಡಿಯನ್ನು ನಿಧಾನವಾಗಿ ಮೂರು-ನಾಲ್ಕು ಮೈಲಿ ಏಳೆದು ಶಾಲಾ ಆವರಣ ತಲುಪುವಾಗ ಮಧ್ಯಾನ್ಹ 3 ಘಂಟೆ ಮೀರಿತ್ತು. ಗಾಡಿಯನ್ನು ಖಾಲಿ ಮಾಡಿ ಎಲ್ಲರನ್ನೂ (ಇಂದಿನ) ಪ್ರಾಥಮಿಕ ಶಾಲೆಯ ಮದ್ಯದ ವಿಶಾಲ ಕೊಠಡಿಯಲ್ಲಿ ಸೇರಲು ಹೇಳಿದ ಉಪಾದ್ಯಾಯರುಗಳು ಎಲ್ಲರಿಗೂ ಕಡಲೆಪುರಿ ಮತ್ತು ಕಾಯಿಬೆಲ್ಲ ಕೋಡುವುದಾಗಿ ಹೇಳಿದ್ದರು. ಆ ಕೊಠಡಿಯಲ್ಲಿ ಸೇರಿದಾಗ ಕೆಲವೇ ಮಂದಿ ಇದ್ದವರು ಸುಮಾರು 50-60ಕ್ಕೂ ಹೆಚ್ಚು ವಿದ್ಯಾರ್ಥಿಗಳಾಗಿದ್ದೆವು. ಶ್ರೀ ಲಕ್ಕೇಗೌಡರಿಗೆ ಎಲ್ಲಿಲ್ಲದ ಕೋಪ ಬಂತು. ನಿಮ್ಮಲ್ಲಿ ಯಾರು ಕೆಲಸ ಮಾಡದೆ ಅಥವ ಊಟಮಾಡಿ ಇಲ್ಲಿ ಸೇರಿಕೊಂಡಿದ್ದೀರಿ ಮತ್ತು ಯಾರು ನಿಜವಾಗಿ ಶ್ರಮಪಟ್ಟು ಕೆಲಸಮಾಡಿದ್ದೀರಿ ಹಾಗೂ ಹಸಿದಿದ್ದೀರಿ ಎಂಬುದನ್ನು ನಿಮ್ಮ ಮುಖ ನೋಡಿ (ಟಿ.ಸಿ. ಹೆಚ್.ನಲ್ಲಿ ತಾನು ಅಭ್ಯಾಸ ಮಾಡಿದ್ದ) ಸೈಕಾಲಜಿ ಸಹಾಯದಿಂದ ಕ್ಷಣಾರ್ಧದಲ್ಲಿ ಹೇಳಬಲ್ಲೆ ಎಂದು ಗುಡುಗಿದರು. ಸುಳ್ಳು ಹೇಳಿ ಸಭೆಯಲ್ಲಿ ಸೇರಿಕೊಂಡಿದ್ದ ವಿದ್ಯಾರ್ಥಿಗಳನ್ನು ಒಬ್ಬೊಬ್ಬರಾಗಿ ಹೊರಗೆ ಕಳಿಸಲು ನಿಶ್ಯಬ್ದವಾಗಿ ನೆಲದಮೇಲೆ ಕುಳಿತಿದ್ದ ಎಲ್ಲರ ಮುಖಗಳನ್ನು ಒಬ್ಬೊಬ್ಬರಾಗಿ ಒಮ್ಮೆ ತೀಕ್ಷ್ಣವಾಗಿ ನೋಡತೊಡಗಿದರು. ಅವರ ಮೊದಲ ಭೇಟೆಯ ಮಿಕ ನಾನಾಗಿದ್ದೆ. ಮೇಲೆ ಎದ್ದು ಹೊರಗೆ ಹೋಗುವಂತೆ ಆಜ್ಞಾಪಿಸಿದರು. ನಾನು ಹಸಿವು, ಅವಮಾನಗಳಿಂದ ಅಳುತ್ತಾ ಹೊರನಡೆದೆ. ನಾನು ಶಾಲೆಯ ಕಾಂಪೌಂಡ್ ದಾಟುವಷ್ಟರಲ್ಲಿ ಹಿಂದಿನಿಂದ ಯಾರೋ ಬಂದು ನನ್ನನು ಹಿಂದಕ್ಕೆ ಕರೆದುಕೊಂಡು ಹೋದರು. ಹೀಗೆ ನಾನು ಲಕ್ಕೇಗೌಡರ ಸೈಕಾಲಜಿಯ ದವಡೆಗೆ ಸಿಲುಕಿ ಸುಳ್ಳ ಎಂಬ ಆಪಾದನೆಗೆ ಗುರಿಯಾಗಿ ಹೊರದೂಡಲ್ಪಟ್ಟು ಅವಮಾನಿತನಾಗಿ ಮತ್ತೆ ಸಹಪಾಠಿಗಳು ಅವರಿಗೆ ಮನದಟ್ಟು ಮಾಡಿದ್ದರಿಂದ ಪಾರಾದೆ.

## ಪ್ರೌಡ ಶಿಕ್ಷಣ

ಸುಮಾರು ಅರ್ಧ ಶತಮಾನದಷ್ಟು ಕಾಲ ಮಿರ್ಲೆಯ ವಿಧ್ಯಾರ್ಥಿಗಳು ಪ್ರೌಡ ಶಿಕ್ಷಣಕ್ಕೆ ಪರ ಊರುಗಳ, ಅದರಲ್ಲೂ ವಿಶೇಷವಾಗಿ ಸಾಲಿಗ್ರಮ ಮತ್ತು ಚುಂಚನಕಟ್ಟೆ, ಶಾಲೆಗಳನ್ನು ಅವಲಂಬಿಸಿದ್ದರು. ಊರಿನ ನಾಯಕರ ಮತ್ತು ಹಿರಿಯರ ಸತತ ಪ್ರಯತ್ನ 1958 ರಲ್ಲಿ ಫಲಿಸಿತು. ಅದಕ್ಕಾಗಿ ಉಳ್ಳವರು ಪರಊರಿನ ವಿಧ್ಯಾರ್ಥಿಗಳಿಗೆ ವಾರಾನ್ನ ಮತ್ತು ಪುಕ್ಕಟೆ ವಸತಿಯನ್ನು ತಮ್ಮ ಮನೆಗಳಲ್ಲಿಯೇ ಕಲ್ಪಿಸಿದರು. ಆರಂಭದ ವರ್ಷಗಳಲ್ಲಿ ದೂರದ ಹನಸೋಗೆಯಿಂದಲೂ ವಿಧ್ಯಾರ್ಥಿಗಳು ಶಾಲೆಗೆ ಸೇರಿ ಈ ವಸತಿ-ಊಟದ ವ್ಯವಸ್ಥೆಯ ಪ್ರಯೋಜನ ಪಡೆಯುತ್ತಿದ್ದರು. ಪರಊರಿನ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಉಳ್ಳವರ ಮನೆಗಳಲ್ಲಿ ವಸತಿ ಮತ್ತು ಊಟದ ವ್ಯವಸ್ಥೆ ಮಾಡಿದ ನಂತರದ ವರ್ಷಗಳಲ್ಲಿ ಒಂದು ಸಾರ್ವಜನಿಕ ವಿಧ್ಯಾರ್ಥಿನಿಲಯವನ್ನು ಸ್ಥಾಪಿಸಲಾಯಿತು.

## ಸರ್ಕಾರೀ ಪ್ರೌಢ ಶಾಲೆ




ಊರಿನ ಸರ್ಕಾರಿ ಪ್ರೌಢ ಶಾಲೆ 1958 ರಲ್ಲಿ ಬಾಲಕಿಯರ ಪ್ರಾಥಮಿಕ ಶಾಲಾ ಕಟ್ಟಡದಲ್ಲಿ ಪ್ರಾರಂಭವಾಯಿತು. ಪ್ರೌಡಶಾಲಾ ಅಧ್ಯಾಪಕರುಗಳು 1960-61 ರಲ್ಲಿ ಬಾಲಕಿಯರ ಪ್ರಾಥಮಿಕ ಶಾಲಾ ಕಟ್ಟಡದ ಆವರಣದಲ್ಲಿ (ಚಿತ್ರ ನೋಡಿ; ಆಗ ಅದು ತಾತ್ಕಾಲಿಕವಾಗಿ ಸರ್ಕಾರೀ ಪ್ರೌಡಶಾಲೆಯಾಗಿತ್ತು) ಪ್ರದರ್ಶಿಸಿದ ಕುವೆಂಪು ವಿರಚಿತ "ಜಲಗಾರ" ಅಂದು ನಮಗೆ ಪೂರ್ಣವಾಗಿ ಅರ್ಥವಾಗದಿದ್ದರೂ ಒಂದು ಅಪರೂಪದ ಪ್ರಯೋಗವೆನಿಸಿತ್ತು. ಶ್ರೀ ಶಿವಪ್ಪ ಎಂಬ ಅಧ್ಯಾಪಕರು ಜಲಗಾರನಾಗಿ ಅಭಿನಯಿಸಿದ್ದರು. ಮುಂದೆ 1962 ರಲ್ಲಿ ಕೊಪ್ಪಲಿನಲ್ಲಿ ನಿರ್ಮಿಸಿದ ಹೊಸ ಸ್ವಂತ ಕಟ್ಟಡಕ್ಕೆ ಪ್ರೌಢಶಾಲೆಯನ್ನು ವರ್ಗಾಯಿಸಲಾಯಿತು.

ಅದೇ ವರ್ಷ ಹೊಸದಾಗಿ ಶ್ರೀಮಾನ್ ಗರುಡಯ್ಯಂಗಾರ್ ಅವರ ಮುಖ್ಯೋಪಾಧ್ಯರಾಗಿ ಆಗಮಿಸಿದರು. ಸುಮಾರು *58 ವಸಂತಗಳನ್ನು ಕಂಡು ಸ್ವರ್ಣಮಹೋತ್ಸವದತ್ತ (1962) ಮಿರ್ಲೆ ಸರ್ಕಾರಿ ಪ್ರೌಡಶಾಲೆ ಕಟ್ಟಡ **ಚಿತ್ರ ನೋಡಿ.***

**ನನ್ನ ಪ್ರೌಢಶಾಲಾ ದಿನಗಳು (1960/61 ರಿಂದ 1962/63):** ಮೇಲೆ ತಿಳಿಸಿದ ಶಿವಪ್ಪ, Y B ನಂಜುಂಡಯ್ಯ, ಎ ಡಿ ಪಿ, ಪಿ.ಕೆ. ಚಂದ್ರಶೇಖರಯ್ಯ (ಮಿರ್ಲೆ ಅಳಿಯ), ಮೈಸೂರಿನಿಂದ ಬರುತ್ತಿದ್ದ ಕನ್ನಡ ಪಂಡಿತರು, ಚನ್ನಕೇಶವಯ್ಯ, N S ಶಂಕರನಾರಾಯಣ, M R ಸ್ಸೀತಾ ಏಥರಾಮಯ್ಯ ಪ್ರೌಡಶಾಲೆ ಮೇಷ್ಟ್ರುಗಳಲ್ಲಿ ನೆನಪಿಗೆ ಬರುತ್ತಿದ್ದಾರೆ.

## ಮಿರ್ಲೆ ಸರ್ಕಾರಿ *ಪ್ರೌಢ ಶಾಲೆ ಮುಖ್ಯೋಪಾಧ್ಯಾಯ ಶ್ರೀ ಗರುಡಯ್ಯಂಗಾರ್:*

ಈ ಸಂದರ್ಭದಲ್ಲಿ ನೆನೆಯಬೇಕಾದವರು ಮಿರ್ಲೆ *ಪ್ರೌಢ ಶಾಲೆ ಮುಖ್ಯೋಪಾಧ್ಯಾಯ ಶ್ರೀ **ಗರುಡಯ್ಯಂಗಾರ್.*** ಪ್ರೌಢ ಶಾಲೆಗೆ ಕಾಯಕಲ್ಪ ನೀಡಿ ಶಿಕ್ಷಣದ ಗುಣಮಟ್ಟ ಗಣನೀಯವಾಗಿ ಸುಧಾರಿಸಲು ಕಾರಣರಾದವರು 1962 ರಲ್ಲಿ ಮುಖ್ಯೋಪಾಧ್ಯಾರಾಗಿ ಆಗಮಿಸಿದ ಮೈಸೂರಿನ ಶ್ರೀಮಾನ್ ***ಗರುಡಯ್ಯಂಗಾರ್.*** ಅವರ ಮಾರ್ಗದರ್ಶನದಲ್ಲಿ ಪಲಿತಾಂಶದಲ್ಲಿ ಸುಧಾರಣೆಯಾಗಿ ಮೊದಲ ಬಾರಿಗೆ 1965ರಲ್ಲಿ ಇಬ್ಬರು ವಿಧ್ಯಾರ್ಥಿಗಳು (ಶ್ರೀ ರಾಮೇಗೌಡ ಮತ್ತು ಶ್ರೀ ಸೀತಾರಾಮು) SSLCಯಲ್ಲಿ ಪ್ರಥಮ ದರ್ಜೆ ಪಡೆದು ಉತ್ತೀರ್ಣರಾದರು. ಅವರು 1962-63ರಲ್ಲಿ ಶ್ರೀಮಾನ್ ***ಅನಂತರಂಗಾಚಾರ್*** ಅವರಿಂದ ರನ್ನ ಕವಿಯ 'ಗದಾಯುದ್ಧ' ಕಾವ್ಯ ನಾಟಕದ 'ನೀರೊಳಗಿರ್ದು ಬೆವರ್ದನ್ ರತ್ನತ್ರಯರಲ್ಲಿ ಒಬ್ಬನಾದ ರನ್ನ ಕವಿಯ 'ಗದಾಯುದ್ಧ' ಕಾವ್ಯ ನಾಟಕದ ಪದ್ಯವನ್ನು ಗಮಕಿಯಂತೆ ಹಾಡಿ, ನಟಸಿದ ಅನಂತರಂಗಾಚಾರ್ಯರ ಆ ಕಾರ್ಯಕ್ರಮ ವಿಶಿಷ್ಟವೂ ಪರಿಣಾಮಕಾರಿಯೂ ಆಗಿತ್ತು. ಭೀಮ ಮತ್ತು ದುರ್ಯೋಧನರು ನಾಯಕ-ಪ್ರತಿನಾಯಕರಾಗಿರುವ 'ಗದಾಯುದ್ಧ' ಪಂಪನ ಮಹಾಭಾರತಕ್ಕಿಂತ ಗ್ರಾತ್ರದಲ್ಲಿ ಚಿಕ್ಕದಾದರೂ ಪರಿಣಾಮದಲ್ಲಿ ಅದ್ಬುತವಾದದ್ದು. ಭೀಮಾಕಾರದ ಎತ್ತರದ ನಿಲುವಿನ



ಅನಂತರಂಗಾಚಾರ್ಯರು ಭೀಮನಂತೆ ನಟಿಸಿ 'ಜಲದೊಳ್ ಮೀನಿರ್ಪವೋಲ್....' ಇತ್ಯಾದಿ ಗುಡುಗಿ ವೈಶಂಪಾಯನ ಸರೋವರದಲ್ಲಿ ಬಲರಾಮ ಬರುವ ವರೆಗೆ ನೀರಿನಲ್ಲಿ ಜಲಸ್ಥಂಭನವಿಧ್ಯೆ ಬಳಸಿ ಬಚ್ಚಿಟ್ಟುಕೊಂಡಿದ್ದ ದುರ್ಯೋಧನನ್ನು ಕೆಣಕಿ, ಹಂಗಿಸಿ ನೀರಿನಿಂದ ಹೊರತರುವ ಪ್ರಸಂಗ ಚಿರಸ್ಮರಣೀಯ. ಈ ಕಾರ್ಯಕಮಕ್ಕೆ ಊರಿನ ಸಾರ್ವಜನಿಕರನ್ನೂ ಆಹ್ವಾನಿಸಿದ್ದರು. ಮುಂದೆ ಶ್ರೀ ಅನಂತರಂಗಾಚಾರ್ ಮೈಸೂರಿನ ಯುವರಾಜ ಕಾಲೇಜಿನಲ್ಲಿ ನನಗೆ ಕನ್ನಡ ಅಧ್ಯಾಪಕರಾಗಿದ್ದರು ಎಂಬುದು ಹೆಮ್ಮೆಯ ವಿಷಯ. ತರಗತಿಯಲ್ಲಿ ಅವರು ಪದ್ಯಗಳನ್ನು ಓದುತ್ತಿರಲಿಲ್ಲ, ರಾಗವಾಗಿ ಏರಿದ ದನಿಯಲ್ಲಿ ಕಂಚಿನ ಕಂಠದಲ್ಲಿ ಹಾಡುತ್ತಿದ್ದರು. ಅವರ ನಟನಾ ಚಾತುರ್ಯ ತುಂಬಿದ ಪ್ರವಚನ, ಕಂಠಸಿರಿ ಮತ್ತು ವಿದ್ಯಾರ್ಥಿಪರ ಕಾಳಜಿ ಅನನ್ಯ. ಅವರು ಒಬ್ಬ ಅಪೂರ್ವ ಗಾಯಕ, ನಟ, ಕುಸ್ತಿಪಟು, ಕೃಷಿಕ, ಸಮಾಜ ಸೇವಕ ಇತ್ಯಾದಿ ಬಹುಮುಖ ವ್ಯಕ್ತಿತ್ವವಿದ್ದವರೆಂದು ಮುಂದೆ ತಿಳಿದು ಆನಂದಾಶ್ಚರ್ಯವಾಯಿತು. ಇಂತಹವರ ಪ್ರವಚನವನ್ನು ಮಿರ್ಲೆಯಲ್ಲಿ ಕೇಳುವ ಅವಕಾಶವನ್ನು ಶಾಲಾ ಮುಖ್ಯೋಪಾಧ್ಯಯರಾಗಿದ್ದ ಶ್ರೀ ಗರುಡ ಅಯ್ಯಂಗಾರ್ ಅವರು ದೊರಕಿಸಿದ್ದರು. ಇದು ಶೀ ಗರುಡಯ್ಯಂಗಾರ್ ಅವರ ಪುತ್ರ ಶ್ರೀ ಶ್ರೀನಿವಾಸ್ ಅವರು ಕಳಿಸಿಕೊಟ್ಟ ಶೀ ಗರುಡಯ್ಯಂಗಾರ್ ***ಅವರ*** *ಫೋಟೊ.*




## ಕನ್ನಡ ಪ್ರಾಧ್ಯಾಪಕ ಅನಂತರಂಗಾಚಾರ್:

**ಅನಂತರಂಗಾಚಾರ್** ಅವರ ವಿದ್ಯಾರ್ಥಿಪರ ಕಾಳಜಿಯ ಬಗ್ಗೆ ಒಂದು ಮಾತು. ಯುವರಾಜಾ ಕಾಲೇಜಿನಲ್ಲಿ ಮೊದಲ ಕನ್ನಡ ಪೀರಿಯಡ್ನಲ್ಲಿ ವಿದ್ಯಾರ್ಥಿಗಳಿಗೆ ಸುಮಾರು ಒಂದು ಘಂಟೆ ಅವರು ಸಾಮಾನ್ಯವಾಗಿ ಪಾಠ ಪ್ರಾರಂಭಿಸುತ್ತಿರಲಿಲ್ಲ. ಬದಲಾಗಿ ಬಹಳ ಪರಿಣಾಮಕಾರಿಯಾಗಿ ಮನಮುಟ್ಟುವಂತೆ ಹದಿಹರೆಯದ ಮನಸ್ಸುಗಳಿಗೆ ಅವರ ವಿದ್ಯಾಭ್ಯಾಸ ಮತ್ತು ಮುಂದಿನ ದಿನಗಳ ಬಗ್ಗೆ ಎಚ್ಚರಿಸುತ್ತಿದ್ದರು. ಅವರು ವಿಶೇಷವಾಗಿ ಗ್ರಾಮೀಣ ಬಡ ವಿದ್ಯಾರ್ಥಿಗಳನ್ನು ಮನದಲ್ಲಿಟ್ಟುಕೊಂಡ ಆ ಮಾರ್ಗದರ್ಶನ ಪಟ್ಟಣದ ಪರಿಸರದಲ್ಲಿ ಹಲವಾರು 'ವ್ಯಸನ'ಗಳಲ್ಲಿ ಜಾರಿ ಹೋಗಬಹುದಾಗಿದ್ದ ಅನೇಕ ಮುಗ್ದ,

ಅಮಾಯಕ ಗ್ರಾಮೀಣ ವಿದ್ಯಾರ್ಥಿಗಳಿಗೆ ಒಂದು ಅಪೂರ್ವ ಎಚ್ಚರಿಕೆ ಘಂಟೆಯಾಗಿತ್ತು. ಅವರ ಎಲ್ಲ ವಿವರಗಳನ್ನು ಅವರೆ ಆ ಒಂದು ಘಂಟೆಯ ಕೊನೆಯಲ್ಲಿ ಒಂದೇ ವಾಕ್ಯದಲ್ಲಿ ಹಿಡಿದಿಟ್ಟಿದ್ದು ಹೀಗೆ: 'ಐದು ವರ್ಷಗಳು ಕಷ್ಠಪಟ್ಟು, ಮುಂದಿನ ಐವತ್ತು ವರ್ಷಗಳು ನೆಮ್ಮದಿಯಾಗಿರಲು ಬಯಸುತ್ತೀರೋ ಅಥವ ಈ ಐದು ವರ್ಷಗಳು ಮಜಾ ಮಾಡಿ ಮುಂದಿನ ಐವತ್ತು ವರ್ಷಗಳು ಕಷ್ಟದಲ್ಲಿ ನರಳುತ್ತೀರೋ, ನೀವೆ ನಿರ್ಧರಿಸಿ'. ಎಂತಹ ಪರಿಣಾಮಕಾರಿ ಸಂಕ್ಷಿಪ್ತ ಹಿತವಚನ! ಸುಮಾರು 50 ವರ್ಷಗಳ ನಂತರ ಮತ್ತೆ ಮತ್ತೆ ನೆನೆಯುತ್ತೇನೆ. ಅನಂತರಂಗಾಚಾರ್ ಅವರ ಬಗ್ಗೆ ಹೆಚ್ಚು ತಿಳಿಯಲು "ಅನಂತನಿಧಿ" ಸಂಸ್ಮರಣ ಗ್ರಂಥ ಮತ್ತು "ನನ್ನ ಟೀಚರ್", *ಟೀಚರ್,* ಅಕ್ಟೊಬರ್ 2009, ಸಂಪುಟ 8, ಸಂಚಿಕೆ 8, ಪು. 22-23 ನೋಡಬಹುದು.



Facebookನ ಮಿರ್ಲೆ ಪೀಪಲ್ ಗ್ರೂಪ್ ಗೆಳೆಯರು upload ಮಾಡಿರುವ 1966-67ರ ಬ್ಯಾಚ್ ನ SSLC ವಿಧ್ಯಾರ್ಥಿಗಳ ಫೋಟೊ ಶ್ರೀ ಗರುಡಯ್ಯಂಗಾರ್ ಅವರೊಂದಿಗೆ.

ಇತ್ತೀಚೆಗೆ ಈ 60 ವರ್ಷ ತುಂಬಿದ ಪ್ರೌಢಶಾಲೆಯ ಭಾಗವಾಗಿ P U Junior College ಕೂಡ ಕಾರ್ಯ ನಿರ್ವಹಿಸುತ್ತಿದ್ದು, ಕಟ್ಟಡದ ಶೀಘ್ರ ಧುರಸ್ಥಿಯ ಅವಶ್ಯಕತೆ ಬಗ್ಗೆ ಪ್ರಧ್ಯಾಪಕರೊಬ್ಬರು ಬರೆದಿದ್ದರು. ಸುವರ್ಣಮಹೋತ್ಸವ ಆಚರಿಸಿಕೊಳ್ಳಬೇಕಾದ ಸರ್ಕಾರಿ ಪ್ರೌಢಶಾಲಾ ಕಟ್ಟಡ ಶಿಥಿಲಗೊಂಡಿದೆ. ಖಾಸಗಿ ಶಾಲೆಗಳು ಸಾಕಷ್ಟು ಅಭಿವೃದ್ಧಿ ಹೊಂದಿವೆ. ಇಲಾಖೆ, ಸರ್ಕಾರ, ರಾಜಕಾರಿಣಿಗಳಿಗೆ ಬೇರೆಯದೇ ಆದ ಆಧ್ಯತೆಗಳಿದ್ದಂತೆ ತೋರುತ್ತಿದೆ. ಸ್ಥಳೀಯ ಮುಖಂಡರುಗಳು ತಂಡೋಪವಾಗಿ ಬೆಂಗಳೂರಿಗೆ ಧಾವಿಸಿ ಹೊಸಹೊಳಲಿನ ಅವರ ಮನೆದೇವರ ಗುಡಿಯ ಜೀರ್ಣೋದ್ಧಾರಕ್ಕೆ, ತಾಲ್ಲೂಕು ಕೇಂದ್ರದಲ್ಲಿ ಕೋಟಿಗಟ್ಟಲೆ ವ್ಯಯಿಸಿ ಚೌಲ್ಟ್ರಿ ನಿರ್ಮಿಸಲು ಇತ್ಯಾದಿಗಳಿಗೆ ದೇಣಿಗೆ ಸಂಗ್ರಹಿಸಹೋರಟವರಿಗೆ ಇದು


ಶೀಘ್ರ ಧುರಸ್ಥಿ ಬಯಸುವ ಸರ್ಕಾರಿ ಪ್ರೌಢ ಶಾಲೆ

ಕಾಣಿಸದು. ಸರ್ಕಾರಿ ಪಾಲಿಟೆಕ್ನಿಕ್ ಮತ್ತು ಜೂನಿಯರ್ ಕಾಲೇಜುಗಳು ತಿರಾ ಇತ್ತೀಚಿನವು.

-----------------------------------------------------------------

**ಪ್ರತಿಕ್ರಿಯೆ:**

**ಚಂದ್ರಶೇಕರ್:** ಇದು ನನ್ನ ಶಾಲೆ, ೧೯೭೭ರಲ್ಲಿ ಎಂಟನೇ ತರಗತಿಯಲ್ಲಿ ಓದುತ್ತಿದ್ದೆ. ಟಿ.ಆರ್.ರಾಮಯ್ಯ ನವರು ಪ್ರಿನ್ಸಿಪಾಲ್ ಆಗಿದ್ದರು

**ಘಯಾಜ಼ ಪಾಷ**: This is mirle gormnt **p u college** ಈ ಕಾಲೇಜು ಅನೇಕರಿಗೆ ಜ್ಞಾನ ದಾಹವನ್ನು ನೀಗಿಸಿ ಜೀವನ ರೂಪಿಸಿದ ಜ್ಞಾನ ದೇಗುಲ. ಈಗ ಅವಸಾನದ ಕಡೆಗೆ ದಾಪುಗಾಲು ಹಾಕುತಿದೆ ಕಟ್ಟಡ ದುರಸ್ತಿ ಕೇಳುತ್ತಿದೆ. ಆಸಕ್ತರು ಸಂಘ ಸಂಸ್ಥೆಗಳು ಸಾಧ್ಯವಾದಷ್ಟು ಈ ಸಂಸ್ಥೆಯ ದುರಸ್ತಿಗೆ ಶ್ರಮಿಸಲು ಮನವಿ.

**ಮಂಜು ಅಮ್ಮ**: ಈಗ ಸ್ವಲ್ಪ ದಿನದ ಹಿಂದೆ ಕೆಲಸ ಮಾಡದೇ ಬಿಲ್ ಆಗಿದೆ

**ಮಂಜು ರೇಷ್ಮ:** en kelsa madiro bill sir

-----------------------------------------------------------------

## ಉನ್ನತ ಶಿಕ್ಷಣ

ಮೊದಲಿಗೆ ಪ್ರೌಢ  ಶಾಲೆಯ ಭಾಗವಾಗಿ ಇದ್ದ 11ನೇ ತರಗತಿ ಎಲ್ಲ ಕಡೆಯಂತೆ ಪ್ರತ್ಯೇಕವಾಗಿ ಪಧವಿಪೂರ್ವ ಕಾಲೇಜಾಯಿತಾದರೂ ಪ್ರೌಢಶಾಲಾ ಕಟ್ಟಡದಲ್ಲೇ ಮುಂದುವರಿಯಿತು.  ಮಿರ್ಲೆಯಲ್ಲಿ 2007ರಲ್ಲಿ ಒಂದು ಪ್ರತ್ಯೇಕ ಪಾಲಿಟೆಕ್ನಿಕ್ ಕೂಡ ಆರಂಭವಾಯಿತು.

**ಮಿರ್ಲೆಯ ಮೊದಲ ಪಧವೀದರ, ಇಂಜಿನೀಯರ್, ವೈಧ್ಯ, ವಕೀಲ ಯಾರು? ಮಿರ್ಲೆಯ ಉನ್ನತ ಶಿಕ್ಷಣದ ಚರಿತ್ರೆ ಎಲ್ಲಿಂದ ಆರಂಭ?**

ಮೈಸೂರು ಸಂಸ್ಥಾನದಲ್ಲಿ 1925ರಲ್ಲಿ 85 MA, 963 BA ಮತ್ತು 197 B Sc ಪದವೀಧರರು ಇದ್ದರು. ಇದರಲ್ಲಿ ಮಿರ್ಲೆಯವರು ಸೇರಿದ್ದಾರೆಯೆ? ಸ್ವಾತಂತ್ರ್ಯಪೂರ್ವದ ಮಿರ್ಲೆಯ ವೃತ್ತಿ ಪಧವೀದರರು (ಇಂಜಿನೀಯರ್, ವೈಧ್ಯ, ವಕೀಲ, ಇತ್ಯಾದಿ) ಯಾರ್ಯಾರು? ಕೆಲವು ಡಿಪ್ಲೊಮೊ ಇಂಜಿನಿಯರಗಳು ಇದ್ದರೆಂದು ಕೇಳಿದ್ದೆ. ನನ್ನ ಬಾಲ್ಯದ ದಿನಗಳಲ್ಲಿ (1960ರ ಸುಮಾರಿಗೆ) ಪ್ರೊ. ರಾಮುಸ್ವಮಿ ಗೌಡ (ಶ್ರೀ ಸಣ್ಣಲಕ್ಷ್ಮಣ ಗೌಡ ಅವರ ಮಗ) MA ಗಳಿಸಿ

ಮಹಾರಾಣಿ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು, ಪ್ರೊ. ಶ್ರೀನಿವಾಸ ಮೂರ್ತಿ (ಶ್ರೀ ಅಣ್ಣಯ್ಯಪ್ಪ ಮೇಷ್ಟ್ರ ಮಗ) ಕನ್ನಡ MA ಯಲ್ಲಿ ಪ್ರಥಮ rank ಗಳಿಸಿ ತಿಪಟೂರಿನ ಕಾಲೇಜಿನಲ್ಲಿ ಅಧ್ಯಾಪಕರಗಿದ್ದರು (ಫೋಟೊ), ದೊಡ್ಡಹಟ್ಟಿ ಕನ್ನಡಕದ ತಮ್ಮಪ್ಪ ಅವರ ತಮ್ಮ ಶ್ರೀ ಜಯರಮ್ MSc ಪಧವಿ ಗಳಿಸಿದ್ದರು ಮತ್ತು ಶ್ರೀ ಛಾಯಾಪತಿ (ಹುಣಸಮ್ಮನ ಗುಡಿಯ ಅರ್ಚಕರಾದ ನಾಗಣ್ಣಯ್ಯನವರ ತಮ್ಮ) Charted Accountant ಆಗಿ ಅಮೆರಿಕಾದಲ್ಲಿದ್ದರು. Commerceಗೆ ಸಂಬಂಧಿಸಿದಂತೆ ಬಣಜಿಗರ ಬೀದಿ (ಕರೀಕಲ್ಲ ಬೀದಿ) ಅಂಗಡಿ ದೊಡ್ಡಣ್ಣನವರ ಪಕ್ಕದ ಮನೆಯವರಾದ ಅಂದಿನ ಪ್ರಸಿದ್ಧ ಪತ್ರ ಬರಹಗಾರ (document writer) ಶ್ರೀ ಗುಂಡಿಯವರ ಹಿರಿಯ ಪುತ್ರ ಶ್ರೀ ರಾಮದಾಸ್ ಅವರು Registrar of Societies ಆಗಿದ್ದಂತೆ ನೆನಪು. ಅಲ್ಲದೆ ಬಗೆ ಬಗೆಯ ಅಧಿಕಾರಿಗಳು ಹಾಗೂ ವೃತ್ತಿ ಪಧವೀದರರು ಮಿರ್ಲೆಯ ಅಳಿಯಂದಿರಾಗುತ್ತಿದ್ದದ್ದನ್ನು ಗಮನಿಸಿದ್ದೇನೆ.


ಎಂ. ವಿ. ಶ್ರೀನಿವಾಸ ಮೂರ್ತಿ

***ಮಿರ್ಲೆಯ ಮೊದಲ ಡಾಕ್ಟರ್ ಪುಟ್ಟಯ್ಯನವರೆ?***

**ಮಿರ್ಲೆ ಪುಟ್ಟಯ್ಯ** ಎಂಬುವವರು 1940ರ ಸುಮಾರಿಗೆ ಮೈಸೂರು ಅರಮನೆಯ ಆರೋಗ್ಯ ಕೇಂದ್ರದಲ್ಲಿ ಅಸಿಸ್ಟೆಂಟ್ ಸರ್ಜನ್ ಆಗಿದ್ದರು ಎಮ್ದು ಧಾಖಲೆ ಇದೆ. ಅವರ ಪೂರ್ವಿಕರು ಮಿರ್ಲೆಯವರೊ ಅಥವ ಅವರೆ ಮಿರ್ಲೆಯಲ್ಲಿ ಹುಟ್ಟಿ ಬೆಳೆದವರೊ ತಿಳಿಯದು. ಪ್ರಜಾವಾಣಿ (3-3-2015) ಯಲ್ಲಿ ಮೈಸೂರು ಅರಮನೆಯ ಖ್ಯಾತ ವೈದ್ಯರಾದ ಡಾ.ಎಸ್. ರಂಗಣ್ಣನವರ ಬಗೆಗೆ ಲೇಖನವಿದೆ. ಜೊತೆಗೆ ಇನ್ನಿಬ್ಬರು ಅರಮನೆ ವೈದ್ಯರಾದ ಡಾ. ರಂಗಾಚಾರ್ ಮತ್ತು ಡಾ. ಶೇಷಗಿರಿರಾವ್ ಅವರುಗಳನ್ನೂ ಸ್ಮರಿಸಲಾಗಿದೆ. ಆದರೆ 1940ರ ಸುಮಾರಿಗೆ ಮೈಸೂರು ಅರಮನೆಯ ಆರೋಗ್ಯ ಕೇಂದ್ರದಲ್ಲಿ ಅಸಿಸ್ಟೆಂಟ್ ಸರ್ಜನ್ ಆಗಿದ್ದ ಡಾ. ಮಿರ್ಲೆ ಪುಟ್ಟಯ್ಯನವರ ಬಗ್ಗೆ ಬರೆಯದಿರುವುದು ವಿಷಾದನೀಯ. ಮಾಹಿತಿಯ ಸಂಗ್ರಹಣೆ ಮತ್ತು ಸಂರಕ್ಷಣೆ ಕೊರತೆಯಿಂದಾಗಿ ಸರಿಯಾಗಿ ತಿಳಿಯದಂತಾಗಿದೆ.

http://prajavaniepaper.com/svww_zoomart.php?Artname=20150303f_002100004&ileft=621&itop=99&zoomRatio=130&AN=20150303f_002100004

(ಬೆಂಗಳೂರಿನ ಮಿಂಟೊ ಆಸ್ಪತ್ರೆಯಲ್ಲಿಯೂ ಡಾ. ಮಿರ್ಲೆ ಪುಟ್ಟಯ್ಯ ಎಂಬ ಕಣ್ಣಿನ ವೈದ್ಯರಿದ್ದರು ಎಂದು ಕೇಳಿದ್ದೆ).

ವೈದ್ಯಕೀಯ ವಿದ್ಯಾಭ್ಯಾಸಕ್ಕೆ 1960ರ ಸುಮಾರಿಗೆ ಸೇರಿದ್ದ ಡಾ. ಶಾಮಣ್ಣ (ಶ್ರೀ ಪ. ಲ. ತಮ್ಮಣ್ಣನವರ ಮಗ) ಮೊದಲಿಗರು ಎನ್ನಿಸುತ್ತದೆ. ನಂತರ ಡಾ. ಪಾಂಡುರಂಗೇಗೌಡ (ಶ್ರೀ ಸಣ್ಣಲಕ್ಷ್ಮಣ ಗೌಡ ಅವರ ಪುತ್ರ), ಮುಂದೆ 1966ರಲ್ಲಿ ನನ್ನ ತಲೆಮಾರಿನವರೇ ಆದ ಡಾ. ಸುಗಂಧರಾಜ್ (ಲಾಯರ್ ಸುಬ್ಬಣ್ಣನವರ ಪುತ್ರ), ಡಾ. ತಮ್ಮಣ್ಣಗೌಡ ಮತ್ತು ಡಾ. ಎಮ್. ಬಿ. ರಾಜಶೇಕರ್ ಸೇರಿದ್ದರು.

ಇಂಜಿನಿಯರ್ ವಿಧ್ಯಾಬ್ಯಾಸಕ್ಕೆ ನನಗಿಂತ ಹಿರಿಯರು ಮತ್ತು ನನ್ನ ತಲೆಮಾರಿನ ಬಹಳಷ್ಟು ಮಂದಿ ಸೇರಿದಂತೆ ನೆನಪು. ಸುಮಾರು 1960ರ ದಶಕದ ಆರಂಭದಲ್ಲೇ ಇಂಜಿನೀಯರ್ ಆದವರು ಮೋಜುಂಧಾರ ಶ್ರೀ ಸಣ್ಣಾಪ್ಪಾಜಿ ಗೌಡರ ಮಗ ಶ್ರೀ ಸೂರ್ಯನಾರಯಣ (ಸೂರಪ್ಪ ಎಂದು ಕರೆಯುತ್ತಿದ್ದರು). ಇವರು 70ರ ಧಶಕದಲ್ಲಿ ಮಿಥಿಲಾ ವಿಧ್ಯಾ ಸಂಸ್ಥೆಯನ್ನು ಸ್ಥಾಪಿಸಿ ಮಿರ್ಲೆಯಲ್ಲಿ ಖಾಸಿಗಿ ಶಾಲೆಯನ್ನು ಮೊದಲಿಗೆ ಪ್ರಾರಂಭಿಸಿದವರು. ನಂತರ ಶ್ರೀ ಶ್ರೀನಿವಾಸ್ (ಗೌಚಿಮನೆಯವರು) ಮತ್ತು ಶ್ರೀ ಎಮ್. ಎಸ್. ಸುಬ್ಬೇಗೌಡರ (ಲಾಯರ್ ಸುಬ್ಬಣ್ಣನವರ) ಮೊದಲ ಮಗ ಶ್ರೀ ಸಿದ್ಧರಾಮೇಗೌಡ (ಡಾ. ಸುಗಂಧರಾಜು ಅವರ ಅಣ್ಣ) ಇಂಜಿನಿಯರಿಂಗ್ ಅಭ್ಯಾಸಿಸುತ್ತಿದ್ದರು.

**ನ್ಯಾಯಮೂರ್ತಿ ಎಂ. ಬಿ. ವಿಶ್ವನಾಥ್** ಅವರು ಮಿರ್ಲೆ **ಮಂಡ ಬೋರೇಗೌಡರ** ಪುತ್ರ. ಜನವರಿ 1961 ರಲ್ಲಿ ಅಡ್ವೋಕೇಟ್ ಆಗಿ ನ್ಯಾಯಾಲಯ ಸೇವೆಗೆ ಸೇರಿ 1994ರಲ್ಲಿ ಕರ್ನಾಟಕ ಉಚ್ಛ ನ್ಯಾಯಾಲಯದ ನ್ಯಾಯಮೂರ್ತಿಯಾಗಿ ನಿವೃತ್ತರಾದವರು. ಇವರು ಕೆ. ಆರ್. ನಗರ ತಾಲ್ಲೂಕಿನ ಮೊದಲ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳೂ ಹೌದು (ಎರಡನೆಯವರು ನ್ಯಾಯಮೂರ್ತಿ ರಾಂಪುರದ ಶ್ರೀ ಚಂದ್ರಶೇಕರಯ್ಯನವರು). ನ್ಯಾಯಮೂರ್ತಿ ಎಂ. ಬಿ. ವಿಶ್ವನಾಥ್ ಅವರ ಸಹೋದರರೊಬ್ಬರು ಜರ್ಮನಿಯಲ್ಲಿ

ಇಂಜಿನೀಯರ್ ಆಗಿದ್ದರೆಂದು ಕೇಳಿದ್ದ ನೆನಪು. ವಕೀಲಿ ವೃತ್ತಿಗೆ ಸೇರಿದ ಮತ್ತೊಬ್ಬರು (1970?) ಕೊಪ್ಪಲಿನ ಶ್ರೀ ರಾಮರಾಜೇ ಗೌಡ. ಶ್ರೀಮತಿ ಗೌರಮ್ಮ (ಅಧ್ಯಾಪಕಿ, ಶ್ರೀ ಅಪ್ಪಸ್ವಾಮಿಯವರ ಮಗಳು) ನನಗೆ ತಿಳಿದಂತೆ ಮಿರ್ಲೆಯ ಮೊದಲ ಸ್ನಾತಕೋತ್ತರ ಪಧವೀಧರೆ (1972?).

ಮಿರ್ಲೆಯಲ್ಲಿ ಉನ್ನತ ಶಿಕ್ಷಣದ ಪರಂಪರೆಯನ್ನು ಅರಸಿ ಹೊರಟರೆ ಸ್ವಾತಂತ್ರಪೂರ್ವದ ಹೆಚ್ಚಿನ ಮಾಹಿತಿ ಅಪೇಕ್ಷಣೀಯ. ಆದರೆ ಆಗಿನ ಇಂಟರ್ಮೀಡಿಯೇಟ್ ಸ್ವಾತಂತ್ರ್ಯಾನಂತರದ ಡಿಗ್ರಿಗಳಿಗಿಂತಲೂ ಮಿಗಿಲೆನ್ನುತ್ತಿದ್ದರು. ಅಂದು ಇಂಟರ್ ಮೀಡಿಯೇಟ್ ಓದಿದವರಲ್ಲಿ ಶ್ರೀಮಾನ್ ಕಿವುಡ ಲಕ್ಷ್ಮಪ್ಪ ಮತ್ತು ಶ್ರೀಮಾನ್ ಎಂ. ಎಸ್. ಕೋಟೇಗೌಡರ ಹೆಸರು ಕೇಳಿದ್ದೆ. ಸುಮಾರು 60 ವರ್ಷಗಳ ಹಿಂದೆ Readers Digest ಪತ್ರಿಕೆಯನ್ನು ಮಿರ್ಲೆಗೆ ತರಿಸಿ ಓದುತ್ತಿದ್ದ ಏಕೈಕ ವ್ಯಕ್ತಿ ಶ್ರೀಮಾನ್ ಕಿವುಡ ಲಕ್ಷ್ಮಪ್ಪ ಎಂದು ಕೇಳಿದ್ದ ನೆನಪು.

ಮಿರ್ಲೆ ಸತ್ಯನಾರಾಯಣ ಸುಧರ್ಶನ್ ಅವರು, 1952 ರಲ್ಲಿ ಅವರ ಅಣ್ಣ ಎಲ್. ಸುಬ್ಬನರಸಿಂಹಯ್ಯ (ತಮ್ಮಯ್ಯ ಮೇಷ್ಟ್ರ ದೊಡ್ಡ ಮಗ) ಮೈಸೂರಿನ ಸೇಂಟ್ ಫಿಲೊಮಿನಾ ಕಾಲೇಜಿನಲ್ಲಿ ಬಿ. ಎಸ್ಸಿ ಡಿಗ್ರಿಯನ್ನು ಪಡೆದು ಕೊಳ್ಳೇಗಾಲದಲ್ಲಿ (ಅಂದಿನ ಮದರಾಸು ಪ್ರಾಂತ್ಯ) ಪ್ರೌಢಶಾಲಾ ಶಿಕ್ಷಕರಾಗಿ ಸೇರಿ, B. T ಪದವಿ ಪಡೆದು, ನಂತರ ಹಲವಾರು ಹುದ್ದೆಗಳಲ್ಲಿ ಮುಂದುವರೆದು D E. O. ಆಗಿ ನಿವೃತ್ತರಾಗಿದ್ದರು ಎಂದು ತಿಳಿಸಿದ್ದಾರೆ.

ಮಾನಸ ಗಂಗೋತ್ರಿಯ ಹೊಸ ಗ್ರಂಥಾಲಯ ವಿಜ್ಞಾನ ಸ್ನಾತಕೋತ್ತರ ವಿಭಾಗದ (1971 ರ) ಮೊದಲ ಬ್ಯಾಚ್ ನ ಆರು ವಿದ್ಯಾರ್ಥಿಗಳಲ್ಲಿ ಮುವ್ವರು (ಪ್ರತಿಶತ 50) ಮಿರ್ಲೆಯವರು! ಹೌದು, ಅನೌಪಚಾರಿಕವಾಗಿ ಇಲಾಖಾ ಮುಖ್ಯಸ್ಥರಿಗೆ ದೂರು ಹೋದಾಗ, ನಾನು ಇಲಾಖಾ ಮುಖ್ಯಸ್ಥರ ಕೆಂಗಣ್ಣಿಗೆ ಗುರಿಯಾಗಬೇಕಾಯಿತು! ನನ್ನ ಜೊತೆಗಿದ್ದ ಇನ್ನಿಬ್ಬರು ಮಿರ್ಲೆಯವರು

ಶ್ರೀ ಸಣ್ಣರಾಮೇ ಗೌಡ ಮತ್ತು ಶ್ರೀ ಎಂ. ಟಿ. ರಾಮುಸ್ವಮಿಗೌಡ. ಇದು ಆ ವರ್ಷದ ಶೈಕ್ಷಣಿಕ ಪ್ರವಾಸದ ಫೋಟೊ.

***ನೋಡಿ*** *"ಅನುಬಂಧ ೭ - ಮಿರ್ಲೆಯ ಸಾಧಕರು, ವಿಶಿಷ್ಟರು ಮತ್ತು ಸುದ್ಧಿಯಲ್ಲಿರುವ ಸಮಕಾಲೀನರು"*

## ನಿರುದ್ಯೋಗ ಮತ್ತು ಮೀಸಲಾತಿ

ಕುತೂಹಲದ ಸಂಗತಿಯೆಂದರೆ, ಶತಮಾನದ ಹಿಮ್ದೆಯೂ ನಿರುದ್ಯೋಗ ಮತ್ತು ಮೀಸಲಾತಿ (ರಿಸರ್ವೇಷನ್) ಇದ್ದಿತು. ಸುಮಾರು 1925ರಲ್ಲಿ ಮೈಸೂರು ಸಂಸ್ಥಾನದ ಸೇವೆಯಲ್ಲಿ 20000 ಉಧ್ಯೋಗಿಗಳಿದ್ದು, 1000 ಮಂದಿ ರೂ. 100 ಕ್ಕಿಂತ ಹೆಚ್ಚು ಸಂಭಳ ಪಡೆದರೆ, ಮಿಕ್ಕ 19000 ಮಂದಿ ರೂ.15 ರಿಂದ 100ರ ವರೆಗೆ ಪಡೆಯುತ್ತಿದ್ದರು. ಆಗ 2410 ಕೆಲಸಗಳಿಗೆ ಅರ್ಜಿ ಕರೆಯಲಾಗಿ 28000 ಮಂದಿ ಅರ್ಜಿ ಸಲ್ಲಿಸಿದ್ದರು. ಸರಿ ಸುಮಾರು 1970ರ ದಶಕದಲ್ಲಿ ನನ್ನ ಸಹಪಾಠಿಗಳು/ ಗೆಳೆಯರು ತತ್ಕಾಲಿಕ ನಿರುಧ್ಯೋಗ ಸಮಸ್ಯೆಯನ್ನು ಅನುಭವಿಸಿದ್ದಾರೆ.

ಮೈಸೂರು ಸಂಸ್ಥಾನದ ಸಾರ್ವಜನಿಕ ಉಧ್ಯೋಗಗಳಲ್ಲಿ ಹಿಂದುಳಿದವರಿಗೆ (ಬ್ರಾಹ್ಮಣೇತರರಿಗೆ) 1916 ರಲ್ಲಿ 25% ಮೀಸಲಾತಿ ಇತ್ತು. ಇದನ್ನು 1919ರ ಸಮಿತಿಯೊಂದು 7 ವರ್ಷಗಳಲ್ಲಿ 50% ಹೆಚ್ಚಿಸಲು ಶಿಫಾರಸು ಮಾಡಿತು. 1928 ರಲ್ಲಿ ರಾಜ್ಯದಲ್ಲಿ 18,000 ಜನಕ್ಕೆ ಒಬ್ಬರಂತೆ ಸುಮಾರು 330 ಡಾಕ್ಟರುಗಳು ಮಾತ್ರ ಇದ್ದರು. ಮತ್ತೊಂದು ಕುತೂಹಲದ ಸಂಗತಿಯೆಂದರೆ ಪ್ರಾಯೋಗಿಕವಾಗಿ 1931ರಲ್ಲಿ ಕನ್ನಡ ಮಾಧ್ಯಮವನ್ನ ಬೆಂಗಳೂರು ಮತ್ತು ಮೈಸೂರಿನಲ್ಲಿ ಒಂದೊಂದು ಸರ್ಕಾರೀ ಪ್ರೌಢಶಾಲೆಯಲ್ಲಿ ಆರಂಭಿಸಲಾಯಿತು.

# 8

# ಕೈಗಾರಿಕೆ, ವಾಣಿಜ್ಯ ಮತ್ತು ಇತರ ಸೇವೆಗಳು

ಮಿರ್ಲೆಯ ಸರ್ಕಾರಿ/ ಸಾಮಾನ್ಯ ಸೇವೆಗಳು, ಗುಡಿ ಕೈಗಾರಿಕೆಗಳು, ಉದ್ಯಮಗಳು ಮತ್ತು ವಿವಿಧ ವಾಣಿಜ್ಯ ವ್ಯವಹಾರಗಳನ್ನು ಸ್ಥೂಲವಾಗಿ ಈ ಅಧ್ಯಾಯದಲ್ಲಿ ಅವಲೋಕಿಸಲಾಗಿದೆ.

## *ಅಂಚೆ ವ್ಯವಸ್ಥೆ*

ಮೈಸೂರು ಪ್ರಾಂತ್ಯದ 'The Model Mysore Postal System' ಅನ್ನು 1889ರಲ್ಲಿ 'The Indian Postal System' ಒಂದಿಗೆ ಸೇರಿಸಲಾಯಿತು. **ಸರಿಸುಮಾರು** 1917ರಷ್ಟರಲ್ಲೆಯೇ ತಾಲ್ಲೂಕಿನಲ್ಲಿದ್ದ 7 ಅಂಚೆ ಕಛೇರಿಗಳಲ್ಲಿ ಮಿರ್ಲೆಯದೂ **ಒಂದಾದ್ದರಿಂದ ಮಿರ್ಲೆ ಅಂಚೆ ಕಛೇರಿಗೆ ಶತಮಾನ ತುಂಬಿದೆ.**. ಮಿರ್ಲೆ ಕಛೇರಿ ಯಾವಾಗ ಆರಂಭವಾಯಿತು **ನಿಖರವಾಗಿ** ತಿಳಿಯದು.

***ಮಿರ್ಲೆಯ ಒಂದು ಸಾದಾರಣ ಮನೆಯ ಜಗುಲಿಮೇಲಿನ ಈ ಕಿಟಕಿಯ ಚಾರಿತ್ರಿಕ ಮಹತ್ವ!***

ಈಗ್ಗೆ 60-70 ವರ್ಷಗಳ ಹಿಂದೆ, "ಅಬಚೂರಿನ ಪೋಸ್ಟಾಫೀಸ"ನ್ನು ನೆನಪಿಸುವಂತಹ, ಈ ಚಿತ್ರದ ಕಿಟಕಿಯ ಸರಳುಗಳ ಹಿಂದಿನಿಂದ ಮಿರ್ಲೆ ಅಂಚೆ ಕಛೇರಿಯ ಎಲ್ಲ ವ್ಯವಹಾರಗಳೂ ಸುಮಾರು ಇಪ್ಪತ್ತು ವರ್ಷಗಳ ಕಾಲ ನಡೆದವು. ಅಂದರೆ 50ರ ದಶಕದಲ್ಲಿ ರಾಮದೇವರ ಗುಡಿ ಬೀದಿಯಲ್ಲಿ ಅಣ್ಣಯ್ಯಪ್ಪ ಮೇಷ್ಟ್ರ ಮನೆಯ ಜಗುಲಿಯ ಕಿಟಕಿಯೇ ಅಂಚೆ ಕಛೇರಿ









ವ್ಯವಹಾರ ಸ್ಥಳ. ಕಛೇರಿಯ  ಸಲಕರಣೆಗಳು ಕಿಟಿಕಿಯ ಹಿಂದಿದ್ದ ಒಂದು ಪುಟ್ಟ ಮೇಜಿನ

ಮೇಲೆ ಇರುತ್ತಿದ್ದುವು. ಕಿಟಕಿ ತೆರದಾಗ ಕಛೇರಿ ಆರಂಭ ಮತ್ತು ಮುಚ್ಚಿದಾಗ ಮುಕ್ತಾಯಗೊಳ್ಳುತ್ತಿತ್ತು. ಸರಿಸುಮಾರು 40ರ ದಶಕದ ಆರಂಭದಿಂದ 60ರ ದಶಕದ ಆರಂಭದವರೆವಿಗೆ ರಾಮದೇವರ ಗುಡಿ ಬೀದಿಯ ಅಣ್ಣಯ್ಯಪ್ಪ (ಮಿರ್ಲೆ ವೆಂಕಟಸುಬ್ಬಯ್ಯ) ಮೇಷ್ಟ್ರ ಮನೆಯ ಜಗುಲಿಯ ಈ ಕಿಟಕಿಯೇ ಅಂಚೆ ಕಛೇರಿ ವ್ಯವಹಾರ ಸ್ಥಳ. ಮುಂದೆ 1960ರ ದಶಕದಲ್ಲಿ ಸ್ವತಂತ್ರವಾಗಿ ಕೊಪ್ಪಲಿನಲ್ಲಿ ಕೋಟೇಗೌಡರ ಬಾಡಿಗೆ ಮನೆಯಲ್ಲಿ ಕಾರ್ಯಾರಂಭ ಮಾಡುವವರೆವಿಗೆ ಪ್ರಾಥಮಿಕ ಶಾಲಾ ಉಪಾಧ್ಯಾಯರು ಅರೆಕಾಲಿಕ ಪೋಸ್ಟ್ ಮಾಸ್ಟರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದರು. ಫೋಟೋದಲ್ಲಿರುವ ಶ್ರೀ ವೆಂಕಟಸುಬ್ಬಯ್ಯನವರು ಮೂಲತಃ ಮಿರ್ಲೆಯವರಲ್ಲವಾದರೂ ಮಿರ್ಲೆಯಲ್ಲಿಯೇ ಖಾಯಂ ನೆಲೆಸಿದವರು. ಮಿರ್ಲೆಯ ಪ್ರಾಥಮಿಕ ಶಾಲೆಯಲ್ಲಿ ಹಲವಾರು ದಶಕಗಳು ಮುಖ್ಯೋಪಾದ್ಯಯರಾಗಿದ್ದು 2-3 ತಲೆಮಾರಿನ ಮಿರ್ಲೆ ಮಕ್ಕಳಿಗೆ ವಿದ್ಯಭ್ಯಾಸ ಮಾಡಿಸಿದ ಜನಪ್ರಿಯ ಹಾಗೂ ಬಹಳ ಸಾತ್ವಿಕ ವ್ಯಕ್ತಿತ್ವದ ಮೇಷ್ಟ್ರು. ಇವರ ಮಗ ಶ್ರೀ ಎಮ್. ವಿ. ಶ್ರೀನಿವಾಸಮೂರ್ತಿ 1959ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ MA ಪದವಿಯಲ್ಲಿ ಮೊದಲ ಸ್ಥಾನ ಗಳಿಸಿ ಮಹಾರಾಜರಿಂದ ಬಂಗಾರದ ಪದಕ ಪಡೆದರು. ಶ್ರೀ ವೆಂಕಟಸುಬ್ಬಯ್ಯ ಅವರಿಗಿಂತ ಹಿಂದೆ ಶ್ರೀ ರಂಗಯ್ಯ ಮೇಷ್ಟ್ರು ಎಂಬುವವರು ಈ ಅರೆಕಾಲಿಕ ಪೋಸ್ಟ್ ಮಾಸ್ಟರ್ ಆಗಿದ್ದರು. ಈ ಅವಧಿಗಳಲ್ಲಿ ಶ್ರೀ ದಸ್ತಗೇರ್, ಶ್ರೀ ಹನುಮಯ್ಯ, ಶ್ರೀ ಕಾಳಯ್ಯ, ಶ್ರೀ ಸಾಬ್ಜಾನ್ ಎಂಬುವವರು ಪೋಸ್ಟಮನ್ ಗಳಾಗಿದ್ದರು. ಮುಂದೆ ಕೊಪ್ಪಲಿನ ಕೋಟೇಗೌಡರ ಈ ಮನೆಯಲ್ಲಿ ಪೂರ್ಣಪ್ರಮಾಣದ ಅಂಚೆ ಕಛೇರಿ ಕಾರ್ಯ ನಿರ್ವಹಿಸಲಾರಂಬಿಸಿತು. ಈಗ ಅಂಚೆ ಮತ್ತು ತಂತಿ ಕಛೇರಿಗೆ ಕೊಪ್ಪಲಿನಲ್ಲಿ ಸಬ್ ರಿಜಿಸ್ತಾರ್ ಕಚೇರಿ ಎದುರು ಸ್ವಂತ ಕಟ್ಟಡವಿದೆ.

## ನ್ಯಾಯ ಮತ್ತು ಕಾನೂನು ಪಾಲನೆ

ಸಾಂಪ್ರದಾಯಿಕವಾಗಿ ಬೇರೆ ಊರುಗಳಂತೆಯೇ ಮಿರ್ಲೆಯಲ್ಲಿಯೂ ಜಾತೀಕಟ್ಟೆ, ಪಂಚಾಯಿತಿಕಟ್ಟೆಗಳಲ್ಲಿ ನ್ಯಾಯ ಬಗೆಹರಿಸುವ ಪದ್ದತಿಯಿತ್ತು. ಸ್ವಾತಂತ್ರ್ಯಾನಂತರವೂ ತ್ತಾಲ್ಲೂಕಿನಲ್ಲಿ ನ್ಯಾಯಾಲವಿದ್ದರೂ ಪಂಚಾಯಿತಿ ಅಧ್ಯಕ್ಷರು ನ್ಯಾಯ ತೀರ್ಮಾನ

ಮಾಡುತ್ತಿದ್ದದ್ದುಂಟು. ತಾಲ್ಲೂಕು ಕೇಂದ್ರದಲ್ಲಿ 1950ರಲ್ಲೇ ಮುನ್ಸಿಫ್ ನ್ಯಾಯಾಲಯ ಆರಂಭವಾಗಿ, 1979ರಷ್ಟಲ್ಲಿ ಕಾನೂನು ನೆರವಗೆ ಸಹಾಯಕ ಪಬ್ಲಿಕ್ ಪ್ರಾಸ್ಯಿಕ್ಯೂಟರ್ ಸೌಲಭ್ಯ ದೊರಕಿಸಲು ಆರಂಭಿಸಲಾಯಿತು. ಶತಮಾನಗಳಿಂದಲೂ ಕಾನೂನು ಪಾಲನೆಗೆ ಗ್ರಾಮದ ಪಟೇಲರು/ಪೋಲೀಸ್ ಪಟೆಲರು ಮತ್ತು ಗೌಡರು ಇತರ ಸಿಬ್ಬಂದಿಗಳಾದ ತಳವಾರ, ತೋಟಿ, ಹೋಬಳೀದಾರರು, ಓಲೇಕಾರರು ಮತ್ತು ಡಂಗುರದವರೂ ಇರುತ್ತಿದ್ದರು ಮತ್ತು ಇವರುಗಳನ್ನ ಗ್ರಾಮ ಪೋಲೀಸರೆಂದೇ ಕರೆಯುತ್ತಿದ್ದರು. ಕಾನುನು ಮತ್ತು ಶಾಂತಿ ಪಾಲನೆಗೆ 1885ರಷ್ಟರಲ್ಲೇ ತಾಲ್ಲೂಕು ಮಟ್ಟದಲ್ಲಿ ಇನ್ಸ್ಪೆಕ್ಟರ್ ಮತ್ತು ಉಪತಾಲ್ಲೂಕು ಮಟ್ಟದಲ್ಲಿ ಜಮೇದಾರರಿದ್ದರು.

**ಮಿರ್ಲೆಯಲ್ಲಿ ಪೋಲೀಸ್ ಠಾಣೆ!** ಹೌದು, 20ನೇ ಶತಮಾನದ ಆದಿಯಲ್ಲಿ ಕೊಪ್ಪಲಿನ ಆಸ್ಪತ್ರೆಗಳ ಪಕ್ಕದ ಈ (ಫೋಟೊ ನೋಡಿ) ಕಲ್ಲಿನ ಕಟ್ಟಡದಲ್ಲಿ ಪೋಲೀಸ್ ಠಾಣೆ ಇತ್ತು. ಅಂದರೆ ಶತಮಾನದ ಹಿಂದೆ ಮಿರ್ಲೆಯಲ್ಲಿ ಪೋಲೀಸ್ ಠಾಣೆ ಆರಂಬಿಸಿದ್ದರು. ದಿನಾಂಕ 3-8-1915 ರಂದು ಮಿರ್ಲೆಯಲ್ಲಿ ಒಂದು ಪೋಲೀಸ್ ಔಟ್ ಪೋಸ್ಟ್ ತೆರೆದು ಒಬ್ಬ ಮೊದಲನೇ ದರ್ಜೆ ಹಾಗೂ ಮುವ್ವರು 2ನೇ ದರ್ಜೆ ಕಾನ್ಸ್ಟೇಬಲ್ ಗಳನ್ನು ನೀಡಲು ನಿರ್ಧರಿಸಲಾಯಿತು. ಚಿತ್ರದಲ್ಲಿ ಆಸ್ಪತ್ರೆ ಮತ್ತು ಸಬ್ ರಿಜಿಸ್ಟ್ರಾರ್ ಆಫೀಸ್ ಮಧ್ಯದಲ್ಲಿರುವ ಇಂದಿನ ಪಶುವೈದ್ಯಶಾಲೆಯ ಪಕ್ಕದಲ್ಲಿರುವುದೇ ಅಂದಿನ ಪೋಲೀಸ್ ಔಟ್ಪೋಸ್ಟ್ ಕಟ್ಟಡ. ಮಿರ್ಲೆಯಲ್ಲಿ ಆ ಕಾಲದಲ್ಲಿದ್ದ ಪುಂಡಾಟಿಕೆ ಹತ್ತಿಕ್ಕಲು ಆರಂಭವಾದ ಪೋಲೀಸ್ ಸ್ಟೇಷನ್ ಅದೇ ಕಾರಣಕ್ಕಾಗಿ ಮುಂದೆ ಮುಚ್ಚಲಾಯಿತು ಎನ್ನುವ ದಂತ ಕತೆಯಿದೆ. ಇದನ್ನು ಒಂದು ಹೆಮ್ಮೆಯ ವಿಷಯವಾಗಿಯೂ ಪರಿಗಣಿಸಿದ್ದವರಿದ್ದರು.


ಅಂದಿನ ಪೋಲೀಸ್ ಔಟ್ಪೋಸ್ಟ್ ಕಟ್ಟಡ

***ಮಿರ್ಲೆಯಲ್ಲಿ ಈಗಲೂ ಪೋಲೀಸ್ ಔಟ್ ಪೋಸ್ಟ್ ಕೂಡ ಇಲ್ಲ!*** ಮಿರ್ಲೆಯಲ್ಲಿ ಪೋಲೀಸ್ ಔಟ್ ಪೋಸ್ಟ್ 1915ರಲ್ಲೇ ಆರಂಬಿಸಿ, ನಂತರ ಮುಚ್ಚಿದರು ಅಥವ ಮುಚ್ಚಿಸಿದರು. ಒಂದು

ಶತಮಾನ ಕಳೆದರೂ ಈಗಲೂ ಪೋಲೀಸ್ ಔಟ್ ಪೋಸ್ಟ್ ಆಗಲಿ ಅಥವ ಪೋಲೀಸ್ ಠಾಣೆ ಆಗಲಿ ಮಿರ್ಲೆಯಲ್ಲಿಲ್ಲ. ವಿಪರ್ಯಸವೆಂದರೆ ಈಗ ಪೋಲೀಸ್ ಠಾಣೆಗಳು ತಾಲ್ಲೂಕು ಕೇಂದ್ರ ಹಾಗೂ ಸಾಲಿಗ್ರಾಮಗಳಲ್ಲಿವೆ ಮತ್ತು ಪೋಲೀಸ ಔಟ್ ಪೋಸ್ಟಗಳು ಭೇರ್ಯ, ಚುಂಚನಕಟ್ಟೆ ಮತ್ತು ಹನಸೋಗೆಗಳಲ್ಲಿವೆ. ಆದರೆ ಮಿರ್ಲೆಯಲ್ಲಿಲ್ಲ! ಈಗಲೂ ಅವಶ್ಯಕತೆಯಿಲ್ಲವೆ?

ಚುಂಚನಕಟ್ಟೆ ಮಾರ್ಗ ಮಡಿಕೇರಿಗೆ ಮತ್ತು ಹೊಸಾಗ್ರಹಾರದ ಮೂಲಕ ಅರಸೀಕೆರೆಗೆ ಹತ್ತಿರದ ಮಾರ್ಗದಲ್ಲಿ ಮಿರ್ಲೆಯಲ್ಲಿ ರಾತ್ರಿ ತಂಗಿದ್ದು ನೇರ ಹೋಗುವ ಸರ್ಕಾರಿ ಬಸ್ ಗಳ ಸಂಚಾರವನ್ನು ರಾತ್ರಿ ಕಳ್ಳತನ ಮತ್ತು ಗಲಾಟೆಗಳನ್ನು ಕಾರಣವಾಗಿ ಮುಂದಿಟ್ಟು ರದ್ಧುಪಡಿಸಲಾಗಿದೆ ಎಂದು ಕೇಳಿದೆ. ಹೆಚ್ಚಿನ ಸಾರಿಗೆ ಸಂಪರ್ಕ ಎಲ್ಲ ರೀತಿಯ ಬೆಳವಣಿಗೆಗೆ ಅತ್ಯಾವಶ್ಯಕ. ಪೋಲೀಸ್ ಇದ್ದಿದ್ದರೆ ಈ ಬಸ್ ಗಳ ರದ್ಧತಿಯನ್ನು ಮಾಡುತ್ತಿರಲಿಲ್ಲವೇನೊ ಅಥವ ಬಸ್ ಗಳನ್ನು ಪೋಲೀಸ್ ಠಾಣೆ ಬಳಿ ನಿಲ್ಲಿಸುವ ಮೂಲಕ ತಡೆಯಬಹುದಿತ್ತೇನೊ!

## ಆರೋಗ್ಯ ಸೇವೆಗಳು

ಎಲ್ಲ ಗ್ರಾಮೀಣ ಪ್ರಧೇಶದಂತೆ ಮಿರ್ಲೆಯಲ್ಲಿಯೂ ವಿಭೂತಿ ಮತ್ತು ತಾಯತ ಮಂತ್ರಿಸುವುದು, ಬಾಲಗ್ರಹ ಚೀಟಿ ಬರೆಯುವುದು, ಉಳುಕು ತೆಗೆಯುವುದು, ಗಿಡಮೂಲಿಕೆಗಳಿಂದ ನಾಟಿ ವೈಧ್ಯ, ಇತ್ಯಾದಿ ನಡೆದಿದ್ದವು. ಕುಪ್ಪೆ ಭಾರೆಯ ಶ್ರೀ ಹನುಮಂತಯ್ಯ, ಕರೀಕಲ್ಲು ಬೀದಿಯ ಶ್ರೀ ಹನುಮಯ್ಯ ಮತ್ತು ಮರೀಶಟ್ಟರು ಎಂಬುವರು ಈ ಕಸುಬಿನ ಕೆಲವು ಹೆಸರುಗಳು. ಚಾರಿತ್ರಿಕವಾಗಿ, 1832ರಲ್ಲಿ ಅಲೋಪತಿ ಚಿಕಿತ್ಸೆಗಾಗಿ ಮೈಸೂರಿನಲ್ಲಿ ಅಸ್ಪತ್ರೆ ಆರಂಭವಾದರೆ ನೂರು ವರ್ಷಗಳ ನಂತರ 1933 ರಲ್ಲಿ ಎಡತೋರೆಯಲ್ಲಿ ಆಸ್ಪತ್ರೆ ತೆರೆಯಲಾಯಿತು.

ಸುಮಾರು 1970ರ ವರೆವಿಗೂ ಮಿರ್ಲೆಯಲ್ಲಿ ಯಾವುದೇ ಔಷದ ಅಂಗಡಿ ಇರಲಿಲ್ಲವಾಗಿ ಸಾಲಿಗ್ರಾಮದ ಬ್ರಹ್ಮಯ್ಯನವರ ಅಂಗಡಿಗೆ ಹೋಗುತ್ತಿದ್ದಂತೆ ನೆನಪು. ಈಗ ಮಿರ್ಲೆಯಲ್ಲಿಯೇ ಎರಡು ಔಷದ ಅಂಗಡಿಗಳೂ ಇವೆ.

 

**ಮಿರ್ಲೆ ಆಸ್ಪತ್ರೆ:** ಫೆಬ್ರವರಿ 12, 1940ರಂದು ಶಿಲಾನ್ಯಾಸವಾಗಿ, ದಿವಾನ್ ಮಾಧವರಾಯರಿಂದ 28-8-1941ರಂದು ಉಧ್ಘಾಟನೆಯಾದ ಮಿರ್ಲೆ ಆಸ್ಪತ್ರೆ ಮಣಬೋರೇಗೌಡರ ಗೌಡಯ್ಯನವರ ಕೊಡಿಗೆ. **ವಿಜಯ್ ಕೋಟೇ ಗೌಡ** ಅವರು ತಿಳಿಸಿದಂತೆ, ಮಣಬೋರೇಗೌಡರ ಗೌಡಯ್ಯನವರ ದತ್ತು ಮಗ ಸಾಹುಕಾರ್ ಕೋಟೆಗೌಡರು ತನ್ನ ತಂದೆ ಮಣಬೋರೇಗೌಡರ ಕೊಟೇಗೌಡ (ಮ. ಕೊಟೇಗೌಡ) ಇವರ ನೆನಪಿಗಾಗಿ ಮ.ಕೊಟೇಗೌಡ ಆಸ್ಪತ್ರೆಯನ್ನು ಮಣಬೋರೇಗೌಡರ ಗೌಡಯ್ಯನವರ ಹೆಸರಿನಲ್ಲಿ ಕಟ್ಟಿಸಿದರು.




ಈ ಫಲಕದಲ್ಲಿ "ಮಣ" ಎಂದಿದ್ದರೂ ಸಾದಾರಣವಾಗಿ ಮಾತಾಡುವಾಗ "ಮಂಡ" ಅಥವ "ಮಣ್ಣ" ಎಂದು ಉಚ್ಚರಿಸುತ್ತಾರೆ. ಆದರೆ ಇದೇನು ಅವರ ಹೆಸರಿನ ಭಾಗವೊ ಅಥವ ವಂಶನಾಮವೊ ತಿಳಿಯದು. ಆದರೆ Tari ಅವರು ಕಂದಾಯ ಬಾಕಿ ವಸೂಲಿಯ ಒಂದು ವಿಚಿತ್ರ ಪ್ರಸಂಗದಲ್ಲಿ ಅಧಿಕಾರಿಗಳು ತಪ್ಪಿತಸ್ಥರನ್ನು ಬೆತ್ತಲೆ ಮೆರವಣಿಗೆ ಮಾಡುವುದಾಗಿ ಬೆದರಿಸಿದ್ದು, ಅದಕ್ಕೆ ಪ್ರತಿಯಾಗಿ ತಪ್ಪಿತಸ್ಥರೊಬ್ಬರು ಸ್ವತಃ ಬೆತ್ತಲಾಗಿ ಊರಿನ ಬೀದಿಗಳಲ್ಲಿ ಮೆರವಣಿಗೆಗೆ ಮುಂದಾದದ್ದರಿಂದ ಅವರಿಗೆ **"ಮೊಂಡ"** ಎಂಬ ಬಿರುದು ದೊರಯಿತೆಂದು ತಿಳಿಸಿದರು. ಮಿರ್ಲೆ ರೈತರು ಬಹಳವಾಗಿ ಕಂದಾಯ ಬಾಕಿ ಉಳಿಸಿಕೊಂಡಿದ್ದು ಅಮುಲ್ದಾರ್ ನ. ರಾಮರಾವ್ ಅವರು ಒಂದು ವಾರ ಮಿರ್ಲೆಯಲ್ಲಿ ಮೊಕ್ಕಾಮ್ ಮಾಡಿ 1903ರ ಸುಮಾರಿಗೆ ಕಂದಾಯ ಬಾಕಿ ವಸೂಲಿ ಮಾಡಲು ಹರಸಾಹಸ ಪಡುತ್ತಾರೆ. ಇದನ್ನು ಗಮನಿಸಿದರೆ ಮೇಲಿನ ಘಟನೆ ನಡೆದಿರಲಿಕ್ಕೂ ಸಾಕು ಎನ್ನಿಸುತ್ತದೆ. ಅಲ್ಲದೆ ಸ್ವಾರಸ್ಯವೂ ತಾರ್ಕಿಕವೂ ಆದ ಹಲವಾರು ಮಿರ್ಲೆಯ ವಂಶನಾಮ, ಅಡ್ಡ ಹೆಸರು, ಬಿರುದು, ವಿಶೇಷಣಗಳ ಹಿನ್ನೆಲೆ ಅಧ್ಯಯನಯೋಗ್ಯ ಎನ್ನಿಸುತ್ತದೆ. ಆದರೆ ಸಂಬಧಿಸಿದ ಮುಂದಿನ ಪೀಳಿಗೆಯವರು ಅದನ್ನು ವೈಯಕ್ತಿಕವಾಗಿ ಅನ್ಯತಾ ಭಾವಿಸಿ ಸಂಕುಚಿತರಾಗಬಾರದಷ್ಟೆ.

ಈ **"ಮೊಂಡ"** ಎಂಬ ಬಿರುದು/ ಅಡ್ಡ ಹೆಸರು ಮಿರ್ಲೆಯಲ್ಲಿ ಮುಂದಿನ ಪೀಳಿಗೆಗಳಲ್ಲಿ ಮೂರು ಮಂದಿಗೆ ಇರುವಂತೆ ತೋರುತ್ತದೆ. ಪುರಾಣ ಕಾವ್ಯಗಳನ್ನು ಹಾಡುತ್ತಿದ್ದ ಹೆಡ್ ಮುನ್ಷಿ ಮನೆಯ ಎದುರಿನ ಮನೆಯ ಗಮಕಿ ಮಂಡ ಬೋರೇಗೌಡರು ಮತ್ತು ಮಿರ್ಲೆಯವರೇ ಆದ ಕರ್ನಾಟಕ ಉಚ್ಛ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿ ಎಂ. ಬಿ. ವಿಶ್ವನಾಥ್ ಅವರ ತಂದೆ ಮಂಡ ಬೋರೇಗೌಡರು.




**ಮಿರ್ಲೆ ಹೆರಿಗೆ ಆಸ್ಪತ್ರೆ:**

ಈ ಕಟ್ಟಡವನ್ನು ಶ್ರೀಮತಿ ತುಳಸಮ್ಮ ಸಣ್ಣಪ್ಪಾಜಿ ಗೌಡ ಅವರು ಕಟ್ಟಿಸಿದ್ದು. ಈ ಹೆರಿಗೆ ಆಸ್ಪತ್ರೆಯಲ್ಲಿ 50ರ ದಶಕದಲ್ಲಿ ಬಹಳ ಜನಪ್ರಿಯ ಹಾಗೂ ಗರ್ಭಿಣಿಯರ ಮತ್ತು ಮಕ್ಕಳ ಸ್ನೇಹಿ "ಆಯಮ್ಮ' (ನಿಜವಾದ ಹೆಸರು ತಿಳಿಯದು) ಎಂಬ ಮಿಡ್ ವೈಫ್ ಇದ್ದರು.

---

*ಪ್ರತಿಕ್ರಿಯೆ:*

**Indiantrainuser Tari:** do u know what "manna" Boregowda means?....
**ಉ:** ಇಲ್ಲ. ಸಾದಾರಣವಾಗಿ ಮಾತಾಡುವಾಗ "ಮಂಡ" ಅಥವ "ಮಣ್ಣ" ಎಂದು ಉಚ್ಚರಿಸುತ್ತಾರೆ. ಆದರೆ ಈ ಫಲಕದಲ್ಲಿ "ಮಣ" ಎಂದಿದೆ. ಇದೇನು ಅವರ ಹೆಸರಿನ ಭಾಗವೊ ಅಥವ ವಂಶನಾಮವೊ ತಿಳಿಯದು. ನಿಮಗೆ ಅಥವ ಯಾರಿಗಾದರೂ ಇದರ ಹಿನ್ನಲೆ ಗೊತ್ತೆ?

**Indiantrainuser Tari:** manna here actually means " Monda" as in obstinate, stubborn, inflexible etc. MONDA boregowda was given a ultimatum by TAX collectors of his time to pay tax or to face a punishment, which entailed that he would be paraded naked on the streets of the village.....well,Mr. Monda decided strip himself naked and walked through the village stark naked.....like the streaker at LORDS

**ಪ್ರಶಾಂತ್ ಮಿರ್ಲೆ:** Mr. Tari, am also linked with Monda Boregowda

**Indiantrainuser Tari:** yes many people have got the title "Monda

Boregowda" in Mirle. That is because all the progeny....[santhana] became associated with it..... Descendants were always called "monda boregowdara boregowda" which later became "monda boregowda"

--------------------------------------------------------------------------------

***ಮಿರ್ಲೆ ಆಸ್ಪತ್ರೆ ಅಡಗೂರು ಪ್ರಾಥಮಿಕ ಆರೋಗ್ಯ ಕೇಂದ್ರದ ಒಂದು ಅಧೀನ ಪ್ರಾಥಮಿಕ ಆರೋಗ್ಯ ಘಟಕವೆ?***

ಹೌದು, 2011ರ ಸರ್ಕಾರೀ ಧಾಖಲೆಯೊಂದರಂತೆ 765 ಜನಸಂಖ್ಯೆಯುಳ್ಳ ಅಡಗೂರು ಹೋಬಳಿ ಕೇಂದ್ರದಲ್ಲಿ ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರವಿದ್ದು, ಮಿರ್ಲೆಯ ಆಸ್ಪತ್ರೆಯನ್ನು ಈ 13 ಕಿ. ಮೀ. ದೂರದ ಕೇಂದ್ರಕ್ಕೆ ಸೇರಿದ ಒಂದು ಪ್ರಾಥಮಿಕ ಆರೋಗ್ಯ ಘಟಕ ಎಂದು ನಿರೂಪಿಸಲಾಗಿದೆ. ತಾಲ್ಲೂಕಿನಲ್ಲಿ ಒಂದು ಸಮುದಾಯ ಆರೋಗ್ಯ ಕೇಂದ್ರ (ಸಾಲಿಗ್ರಾಮದಲ್ಲಿ) ಮತ್ತು ಏಳು ಪ್ರಾಥಮಿಕ ಆರೋಗ್ಯ ಕೇಂದ್ರಗಳಿವೆ ಎನ್ನಲಾಗಿದೆ.  ಮಿರ್ಲೆ ಅಸ್ಪತ್ರೆ ಈ ಏಳರಲ್ಲಿ ಸೇರಿಲ್ಲದೆ ಅಡಗೂರು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಸೇರಿದ ಒಂದು ಪ್ರಾಥಮಿಕ ಆರೋಗ್ಯ ಘಟಕ!

ಸ್ವಾತಂತ್ರ್ಯ ಪೂರ್ವದಲ್ಲಿ 80 ವರ್ಷಗಳ ಹಿಂದೆ ಮಿರ್ಲೆಯ ಧಾನಿಗಳು (ಶ್ರೀ ಮಣಬೋರೇಗೌಡರ ಗೌಡಯ್ಯನವರು) ಕಟ್ಟಿಸಿದ ಹೊಸ ಕಟ್ಟಡದಲ್ಲಿ ದಿವಾನ್ ಮಾಧವರಾಯರಿಂದ 28-8-1941ರಂದು ಉಧ್ಘಾಟನೆಯಾದ ಮಿರ್ಲೆ ಆಸ್ಪತ್ರೆ  ಇನ್ನೂ ಒಂದು ಆರೋಗ್ಯ ಘಟಕವಾಗಿ ಅಡಗೂರು ಪ್ರಾಥಮಿಕ ಆರೋಗ್ಯ ಕೇಂದ್ರದ ಅಧೀನದಲ್ಲೇ ಇದೆಯೆ?

ಅಂತೆಯೆ ತಾಲ್ಲೂಕಿನಲ್ಲಿ ನಾಲ್ಕು ಆಯುರ್ವೇದ ಆಸ್ಪತ್ರೆಗಳಿದ್ದು, ಮಿರ್ಲೆಯವರು  ಹತ್ತಿರದ, ಅಂದರೆ ಗಂಧನಹಳ್ಳಿಯ ಆಯುರ್ವೇದ ಆಸ್ಪತ್ರೆಯನ್ನು ಬಳಸಬಹುದಾಗಿದೆ.  ದೂರದ ವಾಲೆ ಹಳ್ಳದಲ್ಲಿ ಆಸ್ಪತ್ರೆಗೆ ಸೇರಿದ ಒಂದು ಶವ ಪರೀಕ್ಷಾ post-mortem ಕೊಠಡಿ ಇತ್ತು.

***ಮಿರ್ಲೆ ಆಸ್ಪತ್ರೆಯ 50ರ ದಶಕದ ಜನಪ್ರಿಯ ಡಾಕ್ಟರ್ ಮತ್ತು ಮಿಡ್ ವೈಫ್:***

*ಆರೋಗ್ಯ ಕಾರ್ಯಕರ್ತರನ್ನು Corona warriers ಎಂದು ಕರೆಯಲ್ಪಡುತ್ತಿರುವ ಸಮಯದಲ್ಲಿ ಮಿರ್ಲೆ ಆಸ್ಪತ್ರೆಗಳ ಅಂದಿನ ಇಬ್ಬರು ಪ್ರಾತಃ ಸ್ಮರಣೀಯರು ಜ್ಞಾಪಕಕ್ಕೆ ಬರುತ್ತಿದ್ದಾರೆ.*



*ಮೊದಲನೆಯದಾಗಿ,* **ಡಾ. ಷರೀಫ್** ಎಂಬ ಮೂಲತಃ ಮೈಸೂರಿನವರಾದ ಡಾಕ್ಟರ್. ಅವರು 1950ರ ದಶಕದಲ್ಲಿ ಅತ್ಯಂತ ಜನಪ್ರಿಯ ವೈದ್ಯರಾಗಿ ಮಿರ್ಲೆ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸಿದವರು. ಒಂದು ಸ್ವಂತ ಕುದುರೆ ಗಾಡಿಯನ್ನು ಹೊಂದಿದ್ದರು ಮತ್ತು ಅದನ್ನು ಆಸ್ಪತ್ರೆಗೆ ಬಂದುಹೋಗುವುದರ ಜೊತೆಗೆ ರೋಗಿಗಳ ಮನೆಗೆ ಭೇಟಿನೀಡಲು ಬಳಸುತ್ತಿದ್ದರು. ಮುಂದಿನ ದಶಕಗಳಲ್ಲಿ ಮಿರ್ಲೆಯಿಂದ ರೋಗಿಗಳನ್ನು ಇವರು ಎಲ್ಲೇ ಕೆಲಸಮಾಡುತ್ತಿದ್ದರೂ ಅದೇ ಊರಿನ ಆಸ್ಪತ್ರೆಗೆ (ಹೊಸಅಗ್ರಹಾರ, ಸಾಲಿಗ್ರಾಮ, ಇತ್ಯಾದಿ) ಅಥವ ಅವರ ಮೈಸೂರಿನ ಮನೆ ಬಳಿಗೆ ಕರೆದುಕೊಂಡುಹೋಗಿ ಚಿಕಿತ್ಸೆ ಕೊಡಿಸುತ್ತಿದ್ದದ್ದು ಬಹಳ ಸಾಮಾನ್ಯವಾಗಿತ್ತು. ಅದು ಅವರ ಮೇಲಿನ ನಂಬಿಕೆ ಮತ್ತು ಅವರ ನಿಶ್ಚಿತ ಫಲಕಾರಿ ಚಿಕಿತ್ಸೆ ಅಥವ ಕೈಗುಣವನ್ನು ಪ್ರತಿಬಿಂಬಿಸುತ್ತಿತ್ತು.



ಎರಡನೆಯದಾಗಿ, ಬಹಳ ಜನಪ್ರಿಯ ಹಾಗೂ ಗರ್ಭಿಣಿಯರ ಮತ್ತು ಹಸು ಮಕ್ಕಳ ಸ್ನೇಹಿ **"ಆಯಮ್ಮ'** ಎಂಬ (ನಿಜವಾದ ಹೆಸರು ತಿಳಿಯದು) ಮಿಡ್ ವೈಫ್ ಹೆರಿಗೆ ಆಸ್ಪತ್ರೆಯಲ್ಲಿದ್ದರು. ಇವರು ಶ್ರೀ ಕೃಷ್ಣಾಚಾರಿ ಎಂಬುವರ ಅತ್ತೆ. ಅವರು ಕೊಪ್ಪಲಲ್ಲಿ ಅಕ್ಕಿ ಗಿರಣಿಯ ಪಕ್ಕದ ರಸ್ತೆಯಿಂದ ಹೋಗುವ ಪ್ರದೇಶದಲ್ಲಿ ವಾಸವಿದ್ದು, ಅದನ್ನು ಕೃಷ್ಣಾಚಾರಿ ಕೊಪ್ಪಲು ಎನ್ನುತ್ತಿದ್ದರು (ಅದು ಈಗ ಕೃಷ್ಣಾಪುರವಾಗಿದೆ). ಮಿರ್ಲೆಯ ಬಹುತೇಕ ಆ ಕಾಲದ ಎಲ್ಲ ಗರ್ಭಿಣಿಯರ ಸೂಲಗಿತ್ತಿಯಾಗಿ ಸುಸೂತ್ರವಾಗಿ ಹೆರಿಗೆ ಮಾಡಿಸಿದ ಪುಣ್ಯಾತಗಿತ್ತಿ ಇವರು. ಅಲ್ಲದೆ ಇವರು ಊರಿನ ಮಕ್ಕಳಿಗೆ ನಿಯಮಿತವಾಗಿ ದಿನವೂ ಸಂಜೆವೇಳೆ ಬಿಸಿ ಹಾಲನ್ನು ಹೆರಿಗೆ ಆಸ್ಪತ್ರೆ ಆವರಣದಲ್ಲಿ ವಿತರಿಸುತ್ತಿದ್ದರು. ಇಂತಹ *ಪ್ರಾತಃ ಸ್ಮರಣೀಯರ ಹೆಚ್ಚಿನ* ವಿವರ ಮತ್ತು ಫೋಟೋಗಳು ನಮ್ಮ ಆಸ್ಪತ್ರೆಗಳಲ್ಲಿವೆಯೆ?

## ಪಶು ವೈದ್ಯ ಶಾಲೆ




ಪೋಲೀಸ್ ಠಾಣೆ ಮತ್ತು ಸಬ್ ರಿಜಿಸ್ಟ್ರಾರ್ ಕಚೇರಿಗಳಂತೆ ಪಶು ವೈದ್ಯಶಾಲೆ (ಅಸ್ಪತ್ರೆ) ಕೂಡ ತಾಲ್ಲೂಕು ಕೇಂದ್ರದ ಹೊರಗೆ ಮೊದಲಿಗೆ ಮಿರ್ಲೆಯಲ್ಲಿ ಆರಂಭವಾಯಿತು, ತಾಲ್ಲೂಕಿನ ಬೇರೆ ಊರುಗಳಲ್ಲಿ ಪಶು ಚಿಕಿತ್ಸಾ ಕೇಂದ್ರಗಳು ಮಾತ್ರ ಇದ್ದವು.

## ಸಬ್ ರಿಜಿಸ್ಟ್ರಾರ್ ಕಛೇರಿ

ತಾಲ್ಲೂಕು ಕೇಂದ್ರದ ಹೊರಗೆ ತೆರೆಯಲಾದ ಮೊದಲ ಸಬ್ ರಿಜಿಸ್ಟ್ರಾರ್ ಕಛೇರಿ ಮಿರ್ಲೆಯದಾಗಿತ್ತು. ಕೊಪ್ಪಲಿನಲ್ಲಿ ಸ್ವಂತ ಕಟ್ಟಡ ಕಟ್ಟುವವರೆವಿಗೆ ಅದು ಶ್ರೀ ಸಣ್ಣಪ್ಪಾಜಿಗೌಡರ ಈ ಮಹಡಿಮನೆಯ ಮೊದಲ ಅಂತಸ್ತಿನಲ್ಲಿ ಕಾರ್ಯ ನಿರ್ವಹಿಸುತ್ತಿತ್ತು.







## ಬ್ಯಾಂಕ್ ವ್ಯವಸ್ಥೆ

ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ತಾಲ್ಲೂಕು ಕೇಂದ್ರದಲ್ಲಿ 1936ರಲ್ಲೇ ಆರಂಭವಾದರೂ ಮಿರ್ಲೆ ಶಾಖೆ ತೆರೆಯಲು ಸುಮಾರು ಅರ್ಧ ಶತಮಾನ (70ರ ದಶಕ) ಬೇಕಾಯಿತು. ಕುತೂಹಲದ ಸಂಗತಿ ಎಂದರೆ ಮೈಸೂರು ಸಂಸ್ಥಾನ ಗ್ರಾಮೀಣ ಸೇವಿಂಗ್ಸ ಬ್ಯಾಂಕಗಳನ್ನ

1915 ರಲ್ಲೇ ಆರಂಭಿಸಿ ಏಳು ವರ್ಷಗಳಲ್ಲಿ ಮುಚ್ಚಿತು. ಇದರ ಶಾಖೆಯು ಮಿರ್ಲೆಯಲ್ಲಿ ಆರಂಭವಾದಂತಿಲ್ಲ. ಹಾಗೆಯೆ ಸ್ಟೇಟ್ ಬ್ಯಾಂಕ್ ಆಪ್ ಮೈಸೂರು ಶಾಖೆ ಇದ್ದದ್ದರಿಂದಲೊ ಏನೊ ಮುಂದೆ ಜಿಲ್ಲೆಯಲ್ಲಿ ಕಾವೇರಿ ಗ್ರಾಮೀಣ ಬ್ಯಾಂಕ್ 1976ರಲ್ಲಿ ಆರಂಭವಾಯಿತಾದರೂ ಶಾಖೆ ತೆರೆಯಲಿಲ್ಲ. ಖಾಸಗಿ ಲೇವಾದೇವಿಗಾರರಿಂದ ಸಾಲ ಪಡೆಯುವುದು ಮಿರ್ಲೆಯಲ್ಲಿ ಶತಮಾನಗಳಿಂದ ಅವ್ಯಾಹತವಾಗಿ ನಡೆದಿತ್ತು. ಒಂದು ಕಾಲಕ್ಕೆ, ವಸ್ತು ವಿನಿಮಯ ವ್ಯವಹಾರದಂತೆ, **ಪಲ್ಲಾ ಬಡ್ಡಿ** ಚಾಲ್ತಿಯಲ್ಲಿತ್ತು. ಅಂದರೆ 100 ರೂಪಾಯಿಗಳ ಸಾಲವನ್ನು ಸುಗ್ಗಿಗೆ ಮುಂಚೆ (ಗೌರಿ, ಮಾರ್ನವಮಿ ಅಥವ ದೀಪಾವಳಿ ಹಬ್ಬದ ಸಮಯದಲ್ಲಿ) ಯಾವಾಗ ಪಡೆದಿದ್ದರೂ ಸುಗ್ಗಿಯಾದ ಮೇಲೆ ಸಂಕ್ರಾಂತಿಯೊಳಗೆ ಅಸಲಿನ ಜೊತೆಗೆ ಒಂದು ಪಲ್ಲ (ನೂರು ಸೇರು) ಬತ್ತವನ್ನು ಬಡ್ಡಿಯಾಗಿ ಕೊಡಬೇಕಿತ್ತು. ದುರ್ಭಲರು ಅವರ ವರ್ಷದ ದುಡಿಮೆಯನ್ನ ಕಳೆದುಕೊಳ್ಳುವ ಮತ್ತು ಲೇವಾದೇವಿಗಾರರು ಹಣದಿಂದಲೇ ಬತ್ತ ಬೆಳೆಯುವ ಪರಿ ಇದಾಗಿತ್ತು. ಬಡವರು ಈ ವಿಷ ವರ್ತುಲದಲ್ಲಿ ಸಿಲುಕಿದರೆ ಅಂತಿಮವಾಗಿ ಕೆಲವೇ ವರ್ಷಗಳಲ್ಲಿ ಇದ್ದ ಅಲ್ಪಸ್ವಲ್ಪ ಜಮೀನನ್ನು ಕಳೆದುಕೊಳ್ಳುವುದರಲ್ಲಿ ಪರ್ಯಾವಸನವಾಗುತ್ತಿತ್ತು.  ಗಿರವಿ ಅಂಗಡಿಗಳು ಸಲಿಗ್ರಾಮ ಮತ್ತು ಕೆ. ಆರ್. ನಗರಗಳಲ್ಲಿ ಮಾತ್ರವೇ ಇತ್ತಾದರೂ ಅನೌಪಚಾರಿಕವಾಗಿ ಗಿರವಿ ವ್ಯವಹಾರ ಮಿರ್ಲೆಯಲ್ಲಿ ನಡೆದಿತ್ತು. ಲೆವಾದೀವಿ ಮತ್ತು ಗಿರವಿ ಕಾಯ್ದೆಗಳು (1961) ಮತ್ತು ಋಣಪರಿಹಾರ ಕಾಯ್ದೆ (1976) ಜಾರಿಗೆ ಬಂದಿದ್ದರೂ ಲೇವಾದೀವಿ ಮತ್ತು ಗಿರಿವಿ ವ್ಯವಹಾರ ನಡೆದೇ ಇದೆ ಎಂದು ಕೇಳಿದ್ದೆ. ಪಕ್ಕದ ಸಾಲಿಗ್ರಾಮದಲ್ಲಿ ವರ್ತಕ ಜೈನಸಮುದಾಯ ರೈತಾಪಿ ಜನರನ್ನು ಚಕ್ರಬಡ್ಡಿ ವ್ಯವಹಾರದ ಸುಳಿಯಲ್ಲಿ  ಸಿಲುಕಿಸಿ ನೂರಾರು ಎಕರೆ ಜಮೀನನ್ನು 19ನೇ ಶತಮಾನದ ಅಂತ್ಯದ ವೇಳೆಗೆ ವಶಪಡಿಸಿಕೊಂಡು ಗುತ್ತಿಗೆ ಮಾಡಲು ಅದೇ ರೈತರನ್ನೇ ಬಳಸಿದ್ದ ಬಗ್ಗೆ 1900ರ ಸುಮಾರಿನ ಅಮುಲ್ದಾರರು ದಾಖಲಿದ್ದಾರೆ. ಬಹುಶಃ 1970ರ ದಶಕದ ಭೂಸುಧಾರಣಾ ಕಾಯ್ದೆಯಿಂದ ಆ ಜಮೀನುಗಳು ಗೇಣೀದಾರರಿಗೆ ಮತ್ತೆ ದೊರೆತಿರಬಹುದು. ಮಿರ್ಲೆ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ಅಲ್ಲದೆ ಈ ಹಿಂದೆ ತಿಳಿಸಿದ ಸಹಕಾರ ಸಂಘಗಳು (ಹಾಲು ಉತ್ಪಾದನೆ, ವ್ಯವಸಾಯ, ಸಮುದಾಯ ಕಣ, ಇತ್ಯಾದಿ) ಇಪ್ಪತ್ತನೇ ಶತಮಾನದ ಅಂತ್ಯದಷ್ಟರಲ್ಲಿ  ಸಕ್ರಿಯವಾದವು.

 

---

## ಪ್ರತಿಕ್ರಿಯೆ:

**ಪ್ರಶಾಂತ್:** ಬಡ್ಡಿಯ ವಿಚಾರದಲ್ಲಿ ಹಲವು ಕತೆಗಳಿಗೆ ನಮ್ಮ ಮಿರ್ಲೆ ಸ್ಫೂರ್ತಿಯಾದರೆ ತಪ್ಪಿಲ್ಲ. ಬರೀ ಗ್ರಾಮಸ್ಥರೇ ಅಲ್ಲದೆ ಕೆಲವು ಅಧಿಕಾರಿಗಳು ತಮ್ಮ ಕರ್ತವ್ಯದ ಸೆಲೆಯಿಂದ ಹೊರಬಂದು ಬಡ್ಡಿ ವ್ಯವಹಾರಕ್ಕೆ ತಮ್ಮ ಪ್ರೋತ್ಸಾಹ ನೀಡಿರುತ್ತಾರೆ. ಮುಖ್ಯವಾಗಿ ಉಪನೋಂದಾಣಿಧಿಕಾರಿ ಹಗರಣ ಸ್ವಲ್ಪ ಜಾಸ್ತಿ ಸದ್ದು ಮಾಡಿತ್ತು.

ಗ್ರಾಮಸ್ಥರಲ್ಲಿ ಹಬ್ಬದ, ಕಂತಿನ ಚೀಟಿ, ಪಿಗ್ಮಿ ಕಟ್ಟಿಸುವ ಹಲವು ರೀತಿಯಲ್ಲಿ ತಮ್ಮ ಸಂಪಾದನೆಯ ಮೂಲವನ್ನು ಶೇಕರಿಸುವುದರಲ್ಲಿ ಪ್ರಮುಖ ಪಾತ್ರವಹಿಸುತ್ತವೆ, ಬಡ್ಡಿಯ ವ್ಯವಹಾರ ಮೂಲವು ಇದರಲ್ಲಿ ಪ್ರಧಾನವಾಗಿ ಗುರುತಿಸಿಕೊಳ್ಳುತ್ತದೆ, ಚೀಟಿಯ ಹಣದಲ್ಲಿ ಶೇಖರಗೊಂಡ ಹಣವನ್ನು ಬಡ್ಡಿಯ ರೂಪದಲ್ಲಿ ಬಳಸುವ ಪರಿಪಾಠ ಆನಾಯಾಸವಾಗಿ ಕಾಣಸಿಗುತ್ತವೆ, ಇಂತಹ ಹಣದ ವ್ಯವಹಾರದಲ್ಲಿ ಆದ ಎಡವಟ್ಟುಗಳಿಂದ ಇಂದಿಗೂ ಹಲವು ಗ್ರಾಮಸ್ಥರು ಊರಿನ ಹೊರಗೆ ವಾಸಿಸುತ್ತಿದ್ದಾರೆ, ಇನ್ನೂ ಕೆಲವರು ಕಣ್ಮರೆಯಾಗಿದ್ದಾರೆ. ಇದರ ಶೂಲದಲ್ಲಿ ಸಿಲುಕಿದವರಲ್ಲಿ ಸಮಾಜದ ಕೆಟ್ಟ ದಾರಿಯಲ್ಲಿ ಅಥವಾ ಬೇರೆ ದಾರಿಯಲ್ಲಿ ನಡೆಯುವ ಪರಿಣಾಮ ಬೀರಿದ್ದು ವಾಸ್ತವ. ಹಲವು ಉದಾಹರಣೆಗಳು ಲಭ್ಯವಿದ್ದರೂ ಅವುಗಳನ್ನು ಹೆಸರಿಸಲು ನಾನು ಹೋಗುವುದಿಲ್ಲ. ಸುಮಾರು ೯೦ರ ದಶಕದಲ್ಲಿ ನಮ್ಮ ಗ್ರಾಮದ ಸಬ್ ರಿಜಿಸ್ಟ್ರಾರ್ ಆಗಿದ್ದ ಒಬ್ಬ ಮಹೋದಯರು ಒಬ್ಬರು ಪತ್ರ ಬರಹಗಾರರ ಮೂಲಕ ತಿಂಗಳಿಗೆ ಸಂಗ್ರಹವಾದ ನೋಂದಣಿ ಶುಲ್ಕ ಮತ್ತು ಸ್ಟ್ಯಾಂಪ್ ಶುಲ್ಕದ ಹಣವನ್ನು ಸರ್ಕಾರದ ಅಕೌಂಟಿಗೆ ಸಂದಾಯವಾಗಬೇಕಿದ್ದ ಹಣವನ್ನು ವ್ಯತ್ಯಾಸ ಮಾಡಿ ಬಡ್ಡಿ ವ್ಯವಹಾರವನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಬಂದು ತದನಂತರ ಬೆಳಕಿಗೆ ಬಂದಿತ್ತು. ಈ ಬಡ್ಡಿ ವ್ಯವಹಾರದ ಪ್ರಭಾವ ಜಿಲ್ಲಾ ಮಟ್ಟದಲ್ಲಿ ಗುರುತಿಸಿಕೊಂಡಿತ್ತು ಎಂಬುದು ಗಮನಾರ್ಹ. ಉಳುವವನೇ ಭೂಮಿಯ ಒಡೆಯ ಎನ್ನುವ ಭೂಸುಧಾರಣಾ ಕಾನೂನು ಇಂತಹ ಬಡ್ಡಿಯ ಕೂಪದಿಂದ ಹೊರಬರಲು ಸಹಾಯ ಮಾಡಿದ್ದು ಪ್ರಸ್ತುತಾರ್ಹ.

---

## ಸಾರಿಗೆ ವ್ಯವಸ್ಥೆ:

ಎಲ್ಲಾ ಗ್ರಾಮಗಳಂತೆ ಶತಮಾನಗಳಿಂದ ಬಳಕೆಯಲ್ಲಿದ್ದ ಕಾಲ್ನಡಿಗೆ (ಕಾಲ್ದಾರಿ, ಓಣಿದಾರಿ, ಬಂಡಿದಾರಿ), ಎತ್ತಿನ ಗಾಡಿ ಮತ್ತು ಕುದುರೆಗಳು ಮಿರ್ಲೆಯಲ್ಲಿಯೂ ಸಾರಿಗೆ ವ್ಯವಸ್ಥೆಯಾಗಿದ್ದುವು. ಕುದುರೆಗಳನ್ನ ಅಮುಲ್ದಾರ್, ಶಿರಸ್ತೇದಾರ್ ಮತ್ತಿತರ ರಾಜ್ಯದ

ಅಧಿಕಾರಿಗಳು ಬಳಸುವುದು ಸಾಮಾನ್ಯ. ಆದರೆ ಮಿರ್ಲೆಯಲ್ಲಿ ಜಮೀನ್ದಾರರು ಕುದುರೆಗಳನ್ನು ಬಳಸುತ್ತಿದ್ದರು ಎನ್ನುವುದು ವಿಶೇಷ. ಸಾಹುಕಾರ ಶ್ರೀ ರಾಮಣ್ಣ ನವರ ವಂಶದ ಹಿರಿಯರಾದ ಶ್ರೀ ಹಿರಣ್ಣಯ್ಯನವರು ಕಂದಾಯವನ್ನು ಊರಿನ ಶಾನುಭೋಗರಿಗೆ ಕೊಡದೆ, ತಾವೇ ಕುದುರೆ ಏರಿ ಮೈಸೂರಿಗೆ ಹೋಗಿ ದರ್ಬಾರ್ ನಲ್ಲಿ ಸ್ವತಃ ಮಹಾರಾಜರಿಗೆ ಕಂದಾಯ ಒಪ್ಪಿಸುತ್ತಲಿದ್ದರು ಎಂದು ರವಿಶಂಕರ್ ತಿಳಿಸಿದ್ದಾರೆ. ಮಿರ್ಲೆಯಲ್ಲಿ ಸಾಹುಕಾರ್ ಕೋಟೆಗೌಡರ ಮಗ ಶ್ರೀ ಕೃಷ್ಣ ಎಂಬುವರು ಕೆಲಕಾಲ ಕುದುರೆ ಬಳಸುವುದನ್ನು (ಬಹುಶಃ ಮೋಜಿಗೆ) ನನ್ನ ಬಾಲ್ಯದಲ್ಲಿ ಕಂಡಿದ್ದೆ. ನನ್ನ ಪ್ರೌಢಶಾಲೆ ಮೇಷ್ಟ್ರು ಶ್ರೀ ಪಿ. ಕೆ. ಚಂದ್ರಶೇಕರಯ್ಯನವರ ಅದ್ಧೂರಿ ಮದುವೆಯ 'ಭಾರಾತ್" ಗೆ (ವರನ ಕರೆತರುವ ಮೆರವಣಿಗೆಗೆ) ಒಂದು ಒಳ್ಳೆಯ ರೇಸ್ ಕುದೆರೆಯನ್ನು ಬಳಸಿದ್ದರು.

ಮಿರ್ಲೆ ಆಸ್ಪತ್ರೆಯ ಡಾ. ಷರೀಫ್ ಅವರು ಮತ್ತು ಕೆಲಕಾಲ ಗೊರೆಗಟ್ಟ ಜಮೀನಿಗೆ ಹೋಗಿಬರಲು ಎಂ. ಎಸ್. ವೆಂಕಟಾಚಲ ಕುದರೆ ಗಾಡಿಗಳನ್ನು ಬಳಸುತ್ತಿದ್ದರು. ಬೈಸಿಕಲ್ ಒಂದು ಮುಖ್ಯ ಸಾರಿಗೆಯಾಗಿದ್ದರಿಂದ ಆ ಕಾಲಕ್ಕೆ ಮಿರ್ಲೆಯಲ್ಲಿ ನಾಲ್ಕು ಬಾಡಿಗೆ ಬೈಸಿಕಲ್ ಶಾಪುಗಳಿದ್ದುವು. ಉಳಿದಂತೆ ತೆಪ್ಪ, ಹರಿಗೋಲು ಮತ್ತು ದೋಣಿ ಕಾವೇರಿ ನದಿಯ ಬಳಿಯಷ್ಟೆ ಸಾಧ್ಯವಿತ್ತು. ಕಾವೇರಿ ನದಿಗೆ 1956ರಲ್ಲಿ ಚುಂಚನಕಟ್ಟೆ ಬಳಿ ಒಂದು ಸೇತುವೆ ನಿರ್ಮಿಸಲಾಗಿ ಅಲ್ಲಿಯವರೆವಿಗೆ ಉತ್ತರಭಾಗದ ಊರುಗಳಿಂದ ಚುಂಚನಕಟ್ಟೆಗೆ ಬೇಸಿಗೆಯಲ್ಲಿ/ ಪ್ರವಾಹವಿಲ್ಲದಾಗ ತೆಪ್ಪ ಅಥವ ಹರಿಗಲದ ಮೇಲೆ ಅಥವ ಹೊಸ ಕಟ್ಟೆಯ ಮೇಲೆ ನಡೆದು ಹೋಗಬೇಕಿದ್ದವರಿಗೆಲ್ಲಾ ಚುಂಚನಕಟ್ಟೆಗೆ ನೇರ ಸಂಪರ್ಕ ದೊರೆತಂತಾಯಿತು. ಹೆಚ್ಚಿನ ಸರಕು ಸಾಗಣೆ ಎತ್ತಿನ ಬಂಡಿಗಳಲ್ಲೇ ನಡೆಯುತ್ತಿದ್ದಿತು. ಅಪರೂಪಕ್ಕೆ, ಕತ್ತೆ, ಕೋಣ ಮತ್ತು ಬೈಸಿಕಲ್ ಬಳಸಲಾಗುತ್ತಿತ್ತು. ಅಂದು ಬೈಸಿಕಲ್ ಶ್ರೀಮಂತರ ಸಾರಿಗೆ!

ರಸ್ತೆಗಳ ಸುಧಾರಣೆಗೆ ಬ್ರಿಟಿಶ್ ಕಮಿಶನರ್ 1831ರಿಂದಲೇ ಗಮನ ಹರಿಸಿದ್ದರೂ, ಸ್ವಾತಂತ್ರ್ಯಾ ನಂತರ ಮೂರು 20-ವರ್ಷಗಳ ಗ್ರಾಮೀಣ ಸಂಪರ್ಕ ಯೋಜನೆಗಳು ಕಳೆದು ಮಿರ್ಲೆಯ ಸುತ್ತಲಿನ ಬುಹುತೇಕ ಗ್ರಾಮಗಳಿಗೆ ಸರ್ವಋತು ಸಂಪರ್ಕ ರಸ್ತೆ ಲಭಿಸಿದವು. ಮಿರ್ಲೆಗೆ ವಿಧ್ಯುಛ್ಛಕ್ತಿ ಬರುವ ಮುಂಚಿನಿಂದಲೇ, ಅಂದರೆ ಸುಮಾರು 1920ರ ದಶಕದಿಂದಲೇ

ಖಾಸಗಿ ಬಸ್ ಗಳ ಸೌಕರ್ಯ ವಿತ್ತು. ಮುಂದೆ, 1950ರ ದಶಕದಷ್ಟರಲ್ಲಿ ಮೂರು-ನಾಲ್ಕು ಖಾಸಗಿ ಬಸ್ ಗಳ ಓಡಾಟವಿತ್ತು. SCVDS (ಮೈಸೂರು- ಅರಕಲಗೂಡು ನಡುವೆ), ವಿಜಯಲಕ್ಷ್ಮಿ (ಮೈಸುರು- ಕೇರಳಾಪುರದ ನಡುವೆ) ಮತ್ತು ಕೆ. ವಿ. ಮೋಟಾರ್ (ಮೈಸೂರು - ಅರಕಲಗೂಡು ನಡುವೆ?) ಸಂಚರಿಸುತ್ತಿದ್ದ ನೆನಪು. SCVDS ಬಸ್ ಮಿರ್ಲೆಗೆ ಸಂಜೆ ಸುಮಾರು 5/6ಕ್ಕೆ ಮೈಸೂರಿನಿಂದ ದಿನಪತ್ರಿಕೆ ತರುತ್ತಿತ್ತು. 1960ರ ಸುಮಾರಿಗೆ SCVDS ಬಸ್ ಮೂತಿ ಇಲ್ಲದ ಬಲು ದೊಡ್ಡ ಬಸ್ ಆಗಿ ಬರಲಾರಂಭಿಸಿದ್ದು ಮಕ್ಕಳಿಗೆಲ್ಲ ಒಂದು ಸಂಭ್ರಮ.

ಇನ್ನು ಮಿರ್ಲೆಯಲ್ಲಿ ನದಿ ಮತ್ತು ಏಳು ನಾಲೆಗಳಿದ್ದರೂ ರಾಜ್ಯದ ಬೇರೆ ಕಡೆಯಂತೆಯೇ ಜಲಮಾರ್ಗಗಳು ಇರಲೇ ಇಲ್ಲ, ಈಗಲೂ ಇಲ್ಲ.

ಮಿರ್ಲೆಯಲ್ಲಿ ಸ್ವಾತಂತ್ರ್ಯಾನಂತರ ಶ್ರೀ ಎಂ. ಟಿ. ತುಳಸೀರಾಮೇಗೌಡ ಅವರು foldable top ಇದ್ದ ಕಾರನ್ನು ಇಟ್ಟಿದ್ದು, ಅದನ್ನು ಮದುವೆ ಮೆರವಣಿಗೆಗೆ ಬಾಡಿಗೆಗೆ ಕೊಡುತ್ತಿದ್ದರು. ಈ ಕಾರು ಮತ್ತು ಶ್ರೀ ನಂಜುಂಡಶೆಟ್ಟರ ತಮ್ಮ ವಾಚ್ ಅಂಗಡಿ ಶ್ರೀ ದೇವು ಬಾಡಿಗೆಗೆ ಕೊಡುತ್ತಿದ್ದ ಪೆಟ್ರೊಮ್ಯಾಕ್ಸ್ ಗಳು ಮಿರ್ಲೆಯಲ್ಲಿ ನೂರಾರು (ನವ ದಂಪತಿಗಳ) ಮದುವೆ ಮೆರವಣಿಗೆಗಳನ್ನು ನಡೆಸಿವೆ.

ತಾಲೂಕಿನಲ್ಲಿ ವಿಸ್ತೃತ ಸಾರಿಗೆ ಸಂಪರ್ಕವಿದೆ ಎನ್ನಲಾಗಿದ್ದರೂ ತಾಲೂಕಿನ ನಕ್ಷೆಯಲ್ಲಿ ಮಿರ್ಲೆ ಕೇಂದ್ರದಲ್ಲಿದ್ದರೂ ಸಾರಿಗೆ ಸಂಪರ್ಕದಲ್ಲಿ ಹಿಂದೆ ಇದೆ. ಸುಮಾರು 103 ಮೈಲಿ ಉದ್ದದ ಮೈಸೂರು-ಅರಸೀಕೆರೆ ರೈಲು ಮಾರ್ಗದ ಕೆಲಸ 1913ರ ಆಕ್ಟೋಬರ್ 2ರಂದು ಆರಂಬಿಸಿ 1917ರ ಸೆಪ್ತಂಬರ್ ೧ರಂದು ಸರಕು ಸಾಗಣೆಗೆ ಮತ್ತು 1918ರ ಜನವರಿ 1 ರಂದು ಸಂಚಾರಕ್ಕೆ ಮುಕ್ತವಾಯಿತು. ಮಿರ್ಲೆಗೆ ಹೊಸಾಗ್ರಹಾರ ಮತ್ತು ಹಂಪಾಪುರ ಹತ್ತಿರದ ನಿಲ್ದಾಣಗಳಾದವು. ಮಿರ್ಲೆ ಶಾಶ್ವತವಾಗಿ ರೈಲು ಸಂಪರ್ಕದಿಂದ ವಂಚಿತವಾಯಿತು. ತಾಲ್ಲೂಕಿನಲ್ಲಿ ಒಟ್ಟು ಆರು ನಿಲ್ದಾಣಗಳಿದ್ದು, ನಂತರದ ವರ್ಷಗಳಲ್ಲಿ ಕಂಠೇನಹಳ್ಳೀ ಸೇರಿ ಏಳಾದವು. ಈ ಮಾರ್ಗವನ್ನು

1999 ರಲ್ಲಿ ಬ್ರಾಡ್ ಗೇಜ್ ಗೆ ಪರಿವರ್ತನೆ ಮಾಡಲಾಯಿತು. ಹೀಗೆ, ಚಾರಿತ್ರಿಕವಾಗಿ ರೈಲು ಮಾರ್ಗ ಬರಬೇಕಿದ್ದ ಒಂದೇ ಒಂದು ಅವಕಾಶದಿಂದ ಮಿರ್ಲೆ-ಸಾಲಿಗ್ರಾಮಗಳು ವಂಚಿತವಾದಾವು.

-----------------------------------------------------------------------

*ಪ್ರತಿಕ್ರಿಯೆಗಳು:*

**ಪ್ರಶಾಂತ್ :** ಬರೀ ಮಿರ್ಲೆ ಗ್ರಾಮದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ಸುಮಾರು 4000 ಅದರಲ್ಲಿ ನಮ್ಮ ಸರ್ಕಾರದ ಸಾರಿಗೆ ವ್ಯವಸ್ಥೆಯನ್ನು ನಂಬಿಕೊಂಡಿರುವವರು ಸುಮಾರು 400 ಪಾಲಿಟೆಕ್ನಿಕ್ ವಿದ್ಯ್ರರ್ಥಿಗಳು, ಸುಮಾರು 600 ಪ್ರೌಢಶಾಲಾ ವಿಧ್ಯಾರ್ಥಿಗಳು, 500 ಪ್ರಾಥಮಿಕ ಶಾಲಾ ವಿಧ್ಯಾರ್ಥಿಗಳು ನಮ್ಮ ಊರಿಗೆ ಬಂದು ಹೋಗುವವರು, ಸುಮಾರು 50 ವಿಧ್ಯಾರ್ಥಿಗಳು ಕೆ.ಆರ್.ಪೇಟೆ ಇಂಜಿನಿಯರಿಂಗ್ ಕಾಲೇಜಿಗೆ, ಸುಮಾರು 200 ವಿಧ್ಯಾರ್ಥಿಗಳು ಕೆ.ಅರ್.ನಗರದ ಮತ್ತು ಸಾಲಿಗ್ರಾಮದ ಪದವಿ ಕಾಲೇಜಿಗೆ ಓಡಾಡುವವರು. ಇಷ್ಟು ಬೇಡಿಕೆ ಇದ್ದರೂ ಬೆರಳೆಣಿಕೆಯಷ್ಟು ಬಸ್ಸುಗಳು. ದನಿ ಎತ್ತುವವರನ್ನು ನಾವು ಕಳೆದು ಕೊಂಡಿದ್ದೇವೆ ಅನ್ನಿಸುತ್ತಿದೆ. ಕೆ.ಆರ್.ನಗರ ಮಾರ್ಗವಾಗಿ ಮಿರ್ಲೆ ಮೂಲಕ ಕುಶಾಲನಗರಕ್ಕೆ ಸಂಪರ್ಕ ಕಲ್ಪಿಸಲು ಪ್ರಸ್ತಾಪ ಸಲ್ಲಿಸಿರುವುದನ್ನು ನಾನು ಕೇಳಿದ್ದೇನೆ. ಹೆಚ್ಚಿನ ಮಾಹಿತಿಗೆ ಪ್ರಯತ್ನಿಸಬೇಕಾಗಿದೆ.

**Malini:** yes, for the same reason, i have heard, so many road side shack like shops have been evacuated and dismantled. But, have no idea when the project is going to start.

-----------------------------------------------------------------

***ಚಾವಡಿ ಬೀದಿ ಮತ್ತು ಕಾಲುವೆ ಬೀದಿಗಳನ್ನು ಸೇರಿಸುವ ಮಿರ್ಲೆಯ ಬಹು ಬಳಕೆಯ ಸೊಂಪಲು:***

ಅಂದಹಾಗೆ ನಾಗರೀಕತೆಯ ಭರದಲ್ಲಿ ನಾವು ಕಳೆದುಕೊಂ*ಡ* ಹಲವಾರು ಅಪ್ಪಟ ಕನ್ನಡ ಶಬ್ಧಗಳ*ಲ್ಲಿ* ***ಸೋಂಪಲು ಒಂದು - ಓಣಿದಾರಿ, ಇದರ ಸುಧಾರಿತ ರೂಪ.*** ಹಳ್ಳಿಯಲ್ಲಿ ಅನಕ್ಷರಸ್ತ ಸಮಾಜದಲ್ಲಿ ಸಹಜವಾಗಿ, ಸರಾಗವಾಗಿ ಬಳಸುತ್ತಿದ್ದ ಅಪ್ಪಟ ಕನ್ನಡ

ಪದಗಾಳಾದ ಸೊಂಪಲು, ಹೊತ್ತಾರೆ, ಅಪಾರ, ದಿಟ, ಹಣತೆ, ಬೀದಿ, ಕದ, ಇತ್ಯಾದಿ ಪದಗಳು ವಿಧ್ಯಾಬ್ಯಾಸ ಮತ್ತು ಉದ್ಯೋಗಕ್ಕಾಗಿ ನಗರ ಸೇರಿ ನಾಗರೀಕತೆಯ ಭ್ರಮೆಯಲ್ಲಿ ಕ್ರಮೇಣ ಕಳೆದುಕೊಂಡು ಬದಲಿಗೆ ಕ್ರಮವಾಗಿ ಗಲ್ಲಿ, ಬೆಳಿಗ್ಗೆ, ಜಾಸ್ತಿ, ನಿಜ, ದೀಪ, ಬಾಗಿಲು,



ರಸ್ತೆ, ಇತ್ಯಾದಿ ಪದಗಳು ಬಳಕೆಗೆ ಬಂದುದು ಒಂದು ವಿಷಾದದ ಸಂಗತಿ.

ಮಿರ್ಲೆಯಲ್ಲೇ ನಾಗರೀಕತೆಯ ಧಾಳಿಯಿಂದಾಗಿ ಇಂತಹ ಅಪ್ಪಟ ಕನ್ನಡ ಪದಗಳು ಈಗ ಬಳಕೆಯಿಲ್ಲಿರುವ ಸಾದ್ಯತೆ ಕಡಿಮೆಯಲ್ಲವೆ? ಚಾರಿತ್ರಿಕವಾಗಿ ಶತಮಾನಗಳ ಕಾಲ ಪ್ರಭುತ್ವಕ್ಕೆ ತಕ್ಕಂತೆ ಉರ್ದು/ ಪರ್ಷಿಯನ್/ ಅರೇಬಿಕ್, ಹಿಂದಿ ಹಾಗೂ ಇಂಗ್ಲೀಷ್ ಪದಗಳು (ಸರ್ಕಾರ, ರಸ್ತೆ, ಇತ್ಯಾದಿ) ಎಲ್ಲ ಕಡೆ ಸಹಜವಾಗಿ ಸ್ಥಳೀಯ ಬಾಷೆಯೊಂದಿಗೆ ಬಳಕೆಗೆ ಬಂದಿರಬೇಕು.

**ಚಾವಡಿ ಬೀದಿಯ ಬಗೆಗೆ ಶ್ರೀ ಅರವಿನಂದನ್ ಶಟ್ಟಿಯವರು ಕೇಳಿದ ಪ್ರಶ್ನೆಗೆ ಉತ್ತರವಾಗಿ:**

ಚಾವಡಿ ಬೀದಿ ಬಗ್ಗೆ ನನ್ನ ಬಳಿ ಹೆಚ್ಚಿನ ಮಾಹಿತಿ ಇಲ್ಲ. ಹಿಂದೆ ಚಾವಡಿ ಪ್ರದೇಶ ವಿಶಾಲವಾಗಿತ್ತು. ಅಲ್ಲಿ ಹರಿಕಥೆ, ನಾಟಕ, ವಾರ್ತಾ(ಚಲನ) ಚಿತ್ರಗಳ ಪ್ರಧರ್ಶನ, ಇತ್ಯಾದಿ ಏರ್ಪಾಟಾಗುತ್ತಿತ್ತು. ರಾಮದೇವರ ರಥೋತ್ಸವದಂದು ರಥ ಚಾವಡಿಯಲ್ಲಿ ಸಂಜೆಯವರೆವಿಗೆ ಪೂಜೆ ಮತ್ತು ದರ್ಶನಕ್ಕಾಗಿ ನಿಂತಿರುತ್ತಿತ್ತು. ಶಿವಪ್ರಸಾದ್ ಹೇಳುವಂತೆ ಊರಿನ ಹಿರಿಯರನ್ನು ಕೇಳಿ ಹೆಚ್ಚಿನ ಮಾಹಿತಿ ಸಂಗ್ರಹಿಸಿ.

ಅವಿನಂದನ್ ಶಟ್ಟಿಯವರೆ, ಮಿರ್ಲೆಯ ಬಗೆಗೆ ಶಾಸನಗಳ ಮತ್ತು ಗೆಜೆಟಿಯರ್ ಗಳ ಸ್ಥೂಲ ಹಾಗೂ ಖನಿಷ್ಠ ದಾಖಲೆಗಳನ್ನು ಬಿಟ್ಟರೆ ಹೆಚ್ಚಿನ ವಿವರಗಳು ಲಿಖಿತರೂಪದಲ್ಲಿ

ದೊರೆಯುವುದಿಲ್ಲ.. ಕೆಲವು ಪುಸ್ತಕಗಳು ಆಕಸ್ಮಿಕವಾಗಿ ಹಾಗೂ ಪರೋಕ್ಷವಾಗಿ ಅಷ್ಟೇನು ನಿಖರವಲ್ಲದ ಮಾಹಿತಿಯನ್ನು ಒದಗಿಸಬಹುದು. ಆದ್ದರಿಂದ, ಮಿರ್ಲೆ ಇತಿಹಾಸವನ್ನು ಈ ಕನಿಷ್ಠ ಮಾಹಿತಿಗಳನ್ನಿಟ್ಟುಕೊಂಡೆ ಮುಂದಿನ ಪೀಳಿಗಾಗಿ ನಾವೇ ಈಗ ಬೆಳೆಸಬೇಕಿದೆ. ಹೀಗೆ ಮಾಹಿತಿ ಸಂಗ್ರಹಿಸಿ ದಾಖಲಿಸುವಾಗ ಬಹಳ ಜಾಗರೂಕತೆಯಿಂದ ಒಬ್ಬ ಸಂಶೋಧಕನಂತೆ ಮುಂದುವರೆಯಬೇಕಾಗುತ್ತದೆ. ಈ ಕಾರ್ಯದಲ್ಲಿ ಇಂಟರ್ ನೆಟ್ ಧಿಡೀರ್ ಸಂಸ್ಕೃತಿ ಅಷ್ಟು ಪ್ರಯೋಜನಕ್ಕೆ ಬಾರದು. ನಾನು ಮಿರ್ಲೆಯಲ್ಲಿ 50 ಮತ್ತು 60ರ ದಶಕದಲ್ಲಿದ್ದೆ. ಈ ಸೀಮಿತ ಕಾಲಮಾನದಲ್ಲಿ ನನ್ನ ಸಂಪರ್ಕಕ್ಕೆ ಬಂದ ವ್ಯಕ್ತಿಗಳ, ಓಡಾಡಿದ ಸ್ಥಳಗಳ ಬಗ್ಗೆ ನಾನು ಅಂದು ಗ್ರಹಿಸಿ ಇಂದು ನೆನಪು ಮಾಡಿಕೊಂಡಂತೆ ಮತ್ತು ಇತರರಿಂದ ಕೇಳಿದ್ದನ್ನು ಮಾತ್ರ ಹೇಳಲು ಸಾಧ್ಯ. ಹೀಗೆಯೇ ಅನೇಕರು ಪ್ರಯತ್ನಿಸಿ ಎಲ್ಲವನ್ನೂ ಒಟ್ಟುಗೂಡಿಸಿದರೆ ಮಿರ್ಲೆಯ ಒಂದು ಸ್ಥೂಲ ಚಿತ್ರ ಸಾಧ್ಯವಾಗಬುಹುದೇನೊ. ಆದರೂ ಅದು ಪೂರ್ಣ ಮತ್ತು ನಿಖರ ಇತಿಹಾಸ ಎನ್ನಿಸಿಕೊಳ್ಳಲಾರದು.

---

***<u>ಪ್ರತಿಕ್ರಿಯೆಗಳು:</u>***

**ಕಿಶೋರ್ ಕುಮಾರ್**: ಖಂಡಿತ ಭಾಷೆ ಬದಲಾಗುತ್ತಿದೆ., ಕಾರಣ ನಾವು ನಾಗರೀಕ ಸಮಾಜದಲ್ಲಿ ಗುರುತಿಸಿಕೊಳ್ಳುವ ಪ್ರಯತ್ನ!? ಆಡಳಿತದಲ್ಲಿ ಕನ್ನಡ ಭಾಷೆಯ ಮಿತಬಳಕೆ! ಪಾಶ್ಚಾತ್ಯ ಪ್ರಭಾವ? ಅಕ್ಷರಸ್ಥರ(ಕೆಲವರ) ಹಮ್ಮುಬಿಮ್ಮಿನ ಮಾತು., ಇವೆಲ್ಲಾ ಸೇರಿ ನಾವು ಇಂಪಾದ ಕನ್ನಡದ ಬದಲು ಕಂಗ್ಲೀಷ್ ಕೇಳುವಂತೆ ಮಾಡಿದೆ ಎಂಥಾ ವಿಪರ್ಯಾಸ??

**ಅವಿನಂದನ್ ಶಟ್ಟಿ:** ಶ್ರೀಧರ್ ಸರ್ ಥ್ಯಾಂಕ್ಸ್ ಫಾರ್ ದಿ ಇನ್ಫಾರ್ಮಶನ್ ಇ ಟ್ರೈ ಟು ಕಾಲೆಚ್ತ್ ಅಸ ಮುಚ್ ಅಸ ಇನ್ಫಾರ್ಮಶನ್ ಪಾಸಿಬಲ್ ಥ್ಯಾಂಕ್ಸ್ ಫಾರ್ ದಿ ರೆಸ್ಪೊಂದಿಂಗ್ ಟು ಮೈ ಸ್ಟೇಟಸ್ ರೆಗ್ರೆತ್ ಟು ಸೆ ಫ್ರಮ್ ಥಟ್ ಇ ದೋ ನೋ ಕನ್ನಡ ಲೆಪೆ ಸೊ ಇ ಟ್ರಾನ್ಸ್ಲಟೆ ಫ್ರಮ್ ಇಂಟರ್ನೆಟ್

**ಪ್ರಶಾಂತ**: ಚಾವಡಿ ಎನ್ನುವ ಪದವು ಸರ್ಕಾರಿ ಮಾಹಿತಿಗಳನ್ನು ಅಥವಾ ಸೂಚನೆಗಳನ್ನು ಸಾರ್ವಜನಿಕವಾಗಿ ಪ್ರಕಟಿಸುವ ಕೆಂದ್ರ. ಇಂತಹ ಸ್ಥಳಗಳನ್ನು ಚಾವಡಿ, ಅಗ್ರಹಾರ, ಕಟ್ಟೆ ಎನ್ನುವ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಪೂರ್ವಿಕವಾಗಿ ಇದೇ ಸ್ಥಳಗಳು ಯಾವುದೇ ಪಂಚಾಯಿತಿ ನಡೆಯಲು, ಸಂಗಿತ ಕಛೇರಿ, ನಾಟಕ, ನೃತ್ಯ ಗಳ ವೇದಿಕೆಯಾಗಿತ್ತು ಇಂದು ಅವುಗಳ ಮಹತ್ವ ಹಿಂದಿನಂತಿಲ್ಲ ಎನ್ನುವುದನ್ನಷ್ಟೆ ಹೇಳಬಹುದು.

**ಕಿಶೋರ್ ಕುಮಾರ್:** @prashanth, ಸದ್ಯದ ಮಟ್ಟಿಗೆ ಚಾಲ್ತಿಯಲ್ಲಿರುವುದು ನಿಜ ಅದು ಕೂಡ ಹಳ್ಳಿ ಸೊಗಡಿನಲ್ಲಿ ಕಾರ್ಯನಿರ್ವಹಿಸುತ್ತಿರುವ ರೈತಕುಟುಂಬಗಳಿಂದ.., ಆದರೆ ಮುಂದೆ? ಅಂದರೆ ಈ ತಲೆಮಾರಿನ ನಂತರ ಖಂಡಿತ ಉಳಿಯಲಾರದು ಕಾರಣ ಗ್ರಾಮೀಣ ಭಾಷೆ ಬಳಸಲು ಸ್ಥಾನಮಾನ, ಸ್ಥಳ ಅಡ್ಡಬರಬಹುದು ಮತ್ತು ನಮ್ಮ ಹಳ್ಳಿಗಳು ಕೂಡ ನಿಧಾನವಾಗಿ ಆಧುನಿಕಗೊಳ್ಳುತ್ತಿವೆ, ನಗರಭಾಷಾ ಪ್ರಾವೀಣ್ಯತೆ ಆವರಿಸುತ್ತಿದೆ., ಇದು ಒಂದು ರೀತಿಯಲ್ಲಿ ಸಂತೋಷ ಮತ್ತೊಂದು ರೀತಿಯಲ್ಲಿ ದುಃಖಕರ ಸಂಗತಿ.

**ಕಾಂತರಾಜು:** ಆ ಸೊಂಪಲಿನ ಚಿತ್ರ ನೋಡಿ ಅದಕ್ಕೆ ಒಂದು ಸದ್ಗತಿ ಕಾಣಿಸುವ ಒಂದು ಪ್ರಸ್ತಾವನೆಯ ಮಾತುಗಳಿರಬಹುದು ಎಂದುಕೊಂಡೆ. ಆದರೆ ಅದು ಹುಸಿಯಾಯಿತು ! ಸುಮ್ಮನೆ ಕಲ್ಪಿಸಿಕೊಂಡು ನೋಡಿದೆ: ಚಾವಡಿಬೀದಿ ಮತ್ತು ಕಾಲುವೆಬೀದಿಗಳನ್ನು ಆ ಸೊಂಪಲಿನ ಸ್ಥಳದಲ್ಲಿ ಸೇರುವಂತೆ ಮಾಡಿ ಒಂದೇ ಉದ್ದ ಬೀದಿಯನ್ನಾಗಿಸಿದರೆ ! ಇದನ್ನು ಕಾರ್ಯರೂಪಕ್ಕೆ ತರಬಲ್ಲ ಶಕ್ತಿಯುಳ್ಳ ಊರಪ್ರಮುಖರು ಇತ್ತ ಗಮನಹರಿಸಿ ಪರಿಶೀಲಿಸಿಯಾರೇ !!!

**ಕಿಶೋರ್ ಕುಮಾರ್**: @kantharaju: ಮೊದಲಿಗೆ ಒಂದು ಬೇಸರದ ವಿಷಯವೆನೆಂದರೆ ಊರಲ್ಲಿ ಹೇಳಿಕೊಳ್ಳುವಂತ ಪ್ರಮುಖರು ಹಿಂದೆ ಇದ್ದಿರಬಹುದು ಆದರೆ ಇಂದಿಲ್ಲ ಪ್ರಮುಖ ನಿರ್ಣಯ ಕೈಗೊಳ್ಳಲು. ಇನ್ನು ರಸ್ತೆಯ ವಿಷಯ ನೀವು ಹೇಳಿದಂತೆ ಮಾಡಿದರೆ ಊರಿನ ಎರಡು ಭಾಗಗಳನ್ನು ಸೇರಿಸುವ ಒಂದು ಉತ್ತಮ ಪ್ರಮುಖ ರಸ್ತೆಯಾಗುವುದರಲ್ಲಿ ಅನುಮಾನವಿಲ್ಲ ಆದರೆ ಕಾಡುವ ತೊಂದರೆಗಳು ಪುರಾತನ ಇತಿಹಾಸವಿರುವ ಮನೆಗಳನ್ನು ನೀಡಲು ಒಪ್ಪದಿರುವ ಸಾಧ್ಯತೆಯಿದೆ., ಆಕಸ್ಮಾತ್ ಒಪ್ಪಿದರೂ ಈ ಪ್ರಸ್ತಾವನೆಯನ್ನು ಸರ್ಕಾರಕ್ಕೆ ತಲುಪಿಸುವರಾರು? ತಲುಪಿದರೂ ಅವರು ಒಂದು ಊರಿನ ನಡುವೆ ವಾಣಿಜ್ಯ ಉದ್ದೇಶವಿಲ್ಲದೆ ರಸ್ತೆ ನಿರ್ಮಿಸಲು ಒಪ್ಪುವರೇ.?

**ಉ**: ಹತ್ತಿರದಲ್ಲೇ ದೊಡ್ಡ ಹಟ್ಟಿ ಮುಂದೆ ಬಹಳ ಹಿಂದೆಯೇ ಮನೆಗಳನ್ನು ಕೆಡವಿ ಕರೀಕಲ್ಲು ಬೀದಿ ಮತ್ತು ವಿನೋಬ ರಸ್ತೆಗಳನ್ನು ಸೇರಿಸಿರುವುದರಿಂದ ಈ ಸೊಂಪಲನ್ನು ರಸ್ತೆಗೆ ಬದಲಿಸುವ ಅವಶ್ಯಕತೆ ಈಗ ಇರಲಿಕ್ಕಿಲ್ಲ. ಅದು ಅಷ್ಟು ಸಾಧುವೂ ಅಲ್ಲ. ಈ ಸೊಂಪಲು ನಾಲ್ಕೈದು ದಶಕಗಳ ನಂತರ ಹೇಗಿರಬುಹುದೆಂಬ ಕುತೂಹಲದಿಂದ ಇಣುಕಿದಾಗ ತೆಗೆದ ಎರಡು ಫೋಟೋಗಳಿವು. ಆದರೆ ನನ್ನನ್ನು ಭಾವುಕನನ್ನಾಗಿಸಿ ನೆನಪು ಕೆರಳಿಸಿದ್ದು ಆಲ್ಲೇ ಪಕ್ಕದಲ್ಲಿ ಬೀಳುಬಿದ್ದ ರಾವಣೇಶ್ವರನ ಒಂದು ಪುಟ್ಟ ಮನೆ. ಚಿತ್ರದೊಂದಿಗೆ ಅದನ್ನು ಅಧ್ಯಾಯ 7ರಲ್ಲಿ  ಬೇರೆಯಾಗಿಯೇ ಬರೆದಿದ್ದೇನೆ.

**ಮಾಲಿನಿ:** Probably, Shridhar sir is making us realise that, even in those days, thoughts were given to planning a community. Sompalu would have been the means of connection, prob a short cut. I too remember ladies go

thro' these sompalu to reach the river to wash clothes & get back home faster of course shaded, sheltering them from scorching noon Sun.

---------------------------------------------------------------------------

## *ರಕ್ಷಣಾ ಇಲಾಖೆಯಲ್ಲಿ / ಸೈನ್ಯದಲ್ಲಿ ಸೇವೆಸಲ್ಲಿಸಿದ ಮಿರ್ಲೆಯವರು*

ಹೈದರಾಲಿಯ ಐವರು ಅಪ್ತರಲ್ಲಿ ಒಬ್ಬ (ಯೋಧ) ***ಅಬೂಮಹಮದ್ ಮಿರ್ಲೆ*** ಎಂದು ಓದಿದಾಗ ಪುಳಕಗೊಂಡೆನಾದರೂ ಧಾಖಲೆಗಳನ್ನು ಪರಿಶೀಲಿಸಿದಾಗ ಆತನ ಸರಿ ಹೆಸರು ಅಬೂಮಹಮದ್ ಮಿರ್ಧೆ ಎಂದು ತಿಳಿದು ನಿರಾಶೆಯಾಯಿತು (**ಅನುಬಂಧ ೬ - *ಐತಿಹಾಸಿಕ ವ್ಯಕ್ತಿ ಅಬೂಮಹಮದ್ ಮಿರ್ಲೆ*).**

ಸ್ವಾತಂತ್ರ್ಯಪೂರ್ವದ ಮಿರ್ಲೆ ಪುರಸಭಾಧ್ಯಕ್ಷರಾಗಿದ್ದ ಮಿರ್ಲೆ ಪುಟ್ಟೇ ಗೌಡರ ಮಗ **ಶ್ರೀಮಾನ್ ಗಿರಿಯಮ್ಮನ ಸಿದ್ಧಯ್ಯ.** ಇವರ ಪೂರ್ವಿಕರು, ಅಂದರೆ ಮುತ್ತಾತ, ಕನ್ನಂಬಾಡಿ ಬಳಿಯ ಕಠೇರಿಯವರು, ಟಿಪ್ಪು ಸುಲ್ತಾನನ ಸೈನ್ಯದಲ್ಲಿ ಸೇವೆ ಸಲ್ಲಿಸಿದ್ದವರು ಮತ್ತು ಆವರ ಮನೆಯಲ್ಲಿ ಅವರ ತಾತ ಸೈನ್ಯದಲ್ಲಿ ಬಳಸುತ್ತಿದ್ದ ಕತ್ತಿಯಿದೆ ಎಂದು ಗಿರಿಯಮ್ಮನ ಸಿದ್ಧಯ್ಯನವರ ಮೊಮ್ಮಗ ಡಾ. ಸುಗಂಧರಾಜ್ ಅವರಿಂದ ತಿಳಿದು ಖುಷಿಯಾಯಿತು.

**ಡಾ. ಮಿರ್ಲೆ ವಿ ಎಸ್ ರಾವ್ ಅವರು** Royal Indian Air Force ಸೇರಿ Squadron Leader ಆಗಿ 2ನೇ ಮಹಾಯುದ್ಧದಲ್ಲಿ ಭಾಗಿಯಾಗಿದ್ದರು. ಡಾ. ಮಿರ್ಲೆ ಎಸ್. ವಿ. ರಾವ್ (ಮಿರ್ಲೆ ಸುಬ್ಬರಾವ್ ವೆಂಕಟಸುಬ್ಬರಾವ್) ಅವರು ತಮ್ಮ 98ನೇ ವಯಸ್ಸಿನಲ್ಲಿ 18ನೇ ಏಪ್ರಿಲ್ 2014 ರಂದು ಅಮೆರಿಕಾದ ಇಂಡಿಯಾನಪೋಲಿಸ್ ನಲ್ಲಿ ನಿಧನರಾದ ವಾರ್ತೆಯಿಂದ ತಿಳಿಯಿತು. ಮೈಸೂರಿನಲ್ಲಿ ಜನಿಸಿದ ಎಸ್. ವಿ. ರಾವ್ ಅವರು ಮೈಸೂರು ವಿಶ್ವವಿಧ್ಯಾಲಯದಿಂದ B Sc ಮತ್ತು MSc (Pysics) ಪಧವಿ ಪಡೆದು Royal Indian Air Force ಸೇರಿ Squadron Leader ಆಗಿ 2ನೇ ಮಹಾಯುದ್ಧದಲ್ಲಿ ಭಾಗಿಯಾಗಿದ್ದರು. ಅವರು ಭಾರತೀಯ ಹವಾಮಾನ (India Meteorological) ಇಲಾಖೆಯೆ ಒಬ್ಬ ವಿಜ್ಞಾನಿ (project scientist) ಆಗಿ ಸೇರಿ ತಿರುವನಂತಪುರದ ಬಳಿಯ (ಇಂದಿನ ಇಸ್ರೊ) 'Thumba'ದ Rocket Launching Station

ನಲ್ಲಿ ಕೆಲಸ ನಿರ್ವಹಿಸಿದ್ದರು. ಕೇರಳ ವಿಶ್ವವಿದ್ಯಾಲಯದಿಂದ Ph D (Atmospheric Sciences) ಪಡೆದು 1979ರಲ್ಲಿ ಅಮೆರಿಕಾಗೆ ತೆರಳಿ ದಶಕಗಳ ಕಾಲ NASA ದಲ್ಲಿ , Satellite based Weather Analysis ವಿಷಯದ ಮೇಲೆ ಸಂಶೋಧನೆ ನಡೆಸಿ, 1983 ರಲ್ಲಿ ನಿವೃತ್ತಿ ಹೊಂದ್ದಿದ್ದರು (ನೋಡಿ *ಅನುಬಂಧ ೭ - ಮಿರ್ಲೆಯ ಸಾಧಕರು, ವಿಶಿಷ್ಟರು ಮತ್ತು ಸುದ್ಧಿಯಲ್ಲಿರುವ ಸಮಕಾಲೀನರು*).

## ಮಿರ್ಲೆಯ ಪ್ರವಾಸೊದ್ಯಮ ಸಾದ್ಯತೆಗಳು

ಮಿರ್ಲೆ ಒಂದು ಪ್ರವಾಸಿ ತಾಣ ಎಂದು ನೂರ ಇಪ್ಪತ್ತು ವರ್ಷಗಳ ಹಿಂದೆಯೇ ಅಧಿಕಾರಿ ನ. ರಾಮರಾವ್ ತಿಳಿಸಿದ್ದರು ಮತ್ತು ಮಿರ್ಲೆಯಲ್ಲಿ ಒಂದು ವಿಶಾಲವಾದ ಪ್ರವಾಸಿ ಮಂದಿರವನ್ನೂ ನಿರ್ಮಿಸಲಾಗಿತ್ತು.  ಹೀಗಿದ್ದೂ ಪ್ರವಾಸೋದ್ಯಮಕ್ಕೆ ಒತ್ತುಕೊಡುವ ಯಾವುದೇ ನಿರ್ಧಾರಗಳು ಅಥವ ಕಾರ್ಯಗಳು ಆದಂತಿಲ್ಲ. ಮಿರ್ಲೆಯ ಪ್ರವಾಸೋದ್ಯಮ ಸಾದ್ಯತೆಗಳ ಬಗೆಗೆ ಯೋಚಿಸಿದರೆ ಬರೀ ಪ್ರಶ್ನೆಗಳೇ ಹುಟ್ಟುತ್ತವೆ. ಚುಂಚನಕಟ್ಟೆ ಬಿಟ್ಟರೆ ಮಿರ್ಲೆ ಆಸುಪಾಸಿಗೆ ಪ್ರೇಕ್ಷಣೀಯ/ ಪ್ರವಾಸೀ ತಾಣಗಳಿಲ್ಲವೆ? ಶತಮಾನಕ್ಕೂ ಹಳೆಯದಾದ ಪ್ರವಾಸಿ ಮಂದಿರ ಕೆಡವಿ ಬಸ್ ನಿಲ್ದಾಣ ಮಾಡಲಾಗಿದೆ. ಹಿಂದೆ ಇದ್ದ ಪ್ರವಾಸಿ ಮಂದಿರದ ಅವಶ್ಯಕತೆ ಈಗ ಇಲ್ಲವೆ? ಮಿರ್ಲೆಯ 11 ಗುಡಿಗಳ ಪೈಕಿ ಯೋಗಾನರಸಿಂಹ ಮತ್ತು ಅಮೃತೇಶ್ವರ ದೇವಸ್ಥಾನಗಳು ಪ್ರವಾಸಿಗರನ್ನು ಆಕರ್ಷಿಸಲಾರವೆ? ಕಾವೇರಿ ತೀರದ ಸಣ್ಣ ಮಠ ಮತ್ತು ತಡಕಡಗಳಿಗೆ ಪ್ರವಾಸೀ ತಾಣಗಳಾಗುವ ಸಾದ್ಯತೆಗಳಿಲ್ಲವೆ? ಉತ್ತಮ ಪ್ರವಾಸೋದ್ಯಮ ಸಾದ್ಯತೆಗಳಿದ್ದೂ ಅಭಿವೃದ್ಧಿಪಡಿಸಲಾಗಲಿಲ್ಲ ಅಲ್ಲವೆ? ಸಾರಿಗೆ ಸಂಪರ್ಕದ ಕೊರತೆಯೂ ಇದಕ್ಕೆ ಒಂದು ಕಾರಣವಿರಬಹುದೆ? ಮಿರ್ಲೆ ರೈಲು ಸಂಪರ್ಕದಿಂದ 20ನೇ ಶತಮಾನದ ಆದಿಯಿಂದಲೇ ಖಾಯಂ ವಂಚಿತವಾದದ್ದಲ್ಲದೆ ತಾಲ್ಲೂಕಿನಲ್ಲಿ ವಿಸ್ತೃತ ಸಾರಿಗೆ ಸಂಪರ್ಕವಿದೆ ಎನ್ನಲಾಗಿದ್ದೂ, ಮಿರ್ಲೆ ತಾಲೂಕಿನ ನಕ್ಷೆಯ ಕೇಂದ್ರದಲ್ಲಿದ್ದೂ ಸಾರಿಗೆ ಸಂಪರ್ಕ ಅಸಮರ್ಪಕ ಎನಿಸದೆ?

***ಪ್ರವಾಸೀ ತಾಣಗಳಾಗುವ ಸಾದ್ಯತೆಗಳಿದ್ದ ಕಾವೇರಿ ತೀರ, ಸಣ್ಣ ಮಠ ಮತ್ತು ತಡಕಡ:*** *ಅಧ್ಯಾಯ 4ರಲ್ಲಿ ಈಗಾಗಲೇ ತಿಳಿಸಿರುವಂತೆ ಕಾವೇರಿ ತೀರದಲ್ಲಿರುವ ಸಣ್ಣ ಮಠದ* ಮೂಲ ಹೆಸರು *ಸಂಧ್ಯಾವಂದನ ಮಂಟಪ* , ಪಕ್ಕದಲ್ಲೇ ಒಂದು ಸಣ್ಣ ಗುಡಿಯೂ ಇದೆ, ಗುಡಿಯ

ಮುಂಭಾಗದಿಂದ ನದಿಗೆ ಇಳಿಯಲು ಮೆಟ್ಟಿಲುಗಳು/ ಸೋಪಾನಗಳು ಇದ್ದವು, ನದಿಯಲ್ಲಿ ಮೊಸಳೆಗಳಿದ್ದವು, ಶಿವರಾತ್ರಿಯಂದು ಇಲ್ಲಿ ಸುಮಾರು ಸಾವಿರಕ್ಕೂ ಹೆಚ್ಚು ಮಿರ್ಲೆಯವರು ಇಲ್ಲಿ ಸ್ನಾನ ಮಾಡುತ್ತಿದ್ದರು, ಶ್ರಾವಣದಲ್ಲಿ ಹೊಳೆ ಸಣ್ಣ ಮಠದ ಬಾಗಿಲವರೆವಿಗೂ ತುಂಬಿ ಹರಿಯುತ್ತದೆ, ನದಿಯ ಈ ಕಡೆಯ ದಂಡೆಯಲ್ಲಿ ಅಕ್ಕಪಕ್ಕಕ್ಕೆ ದಟ್ಟವಾದ ಕಾಡಿತ್ತು ಮತ್ತು ಅದರಲ್ಲಿ ನೇರಳೆ ಹಾಗೂ ಅತ್ತಿ ಹಣ್ಣು ಹೇರಳವಾಗಿ ದೊರೆಯುತ್ತಿದ್ದವು, ಇತ್ಯಾದಿ. ಇಲ್ಲಿಂದ ಸುಮಾರು ಒಂದು ಕಿಲೋಮೀಟರ್ ಮುಂದೆ ನದಿ ಬಲಕ್ಕೆ ಲಂಭವಾಗಿ ಹೊರಳುವಾಗ ಮರಳು ರಾಶಿಗಳನ್ನು ಸೃಷ್ಟಿಸಿ ವಿಶಾಲವಾಗಿ ಹರಿಯುತ್ತದೆ. ***ತಡಕಡ*** ಎನ್ನುತ್ತಿದ್ದ ಈ



ತಿರುವಿನ ಸ್ಥಳದಲ್ಲಿ ಬೇಸಿಗೆಯಲ್ಲಿ ಎತ್ತಿನ ಗಾಡಿಗಳು ಮರಳ ರಾಶಿಗಳ ಮೇಲೆ ಸಾಗಿನದಿಯನ್ನು ದಾಟಿ ನದಿಯ ಆಚಿನ ಊರುಗಳಿಗೆ ಹೋಗುತ್ತಿದ್ದ ರೂಢಿಯಿತ್ತು. ಕೇವಲ ಮೂರು ಕಿಲೋಮೀಟರ್ ದೂರವಿರುವ ಕಾವೇರಿ ನದಿ ತೀರ ಮಿರ್ಲೆಯ ಒಂದು ಅಪೂರ್ವ ನೈಸರ್ಗಿಕ ಸಂಪತ್ತು. ಮೋಟಾರು ವಾಹನಗಳು ಹೋಗಬುಹುದಾದ ರಸ್ತೆ ನಿರ್ಮಿಸಿದ್ದರೆ (ಅಥವ ಮುಂದೆ ನಿರ್ಮಿಸಿದರೆ) ಸಣ್ಣ ಮಠ ಮತ್ತು ತಡಕಡಗಳು ಪ್ರವಾಸೀ ತಾಣಗಳಾಗುವ, ಪಕ್ಕದಲ್ಲೇ ಅಧುನಿಕ ರೆಸಾರ್ಟಗಳನ್ನು ನಿರ್ಮಿಸಿ ದೋಣಿ ವಿಹಾರ ಕಲ್ಪಿಸುವ ಎಲ್ಲ ಸಾಧ್ಯತೆಗಳಿದ್ದುವು. ಊರಿನ ವಿಸ್ತರಣೆಯೇ ನದಿಗೆ ಅಭಿಮುಖವಾಗಿದ್ದಿದ್ದರೆ ಇನ್ನೂ ಉತ್ತಮವಾಗಿತ್ತಲ್ಲವೆ?

**"ಅಭಿವೃದ್ಧಿ" ವೆರ್ಸಸ್ "ಪರಿಸರ ನಾಶ"** ಬಹಳ ಚರ್ಚೆಗೆ ಗ್ರಾಸವಾದ ವಿಷಯ. ಯಾವುದೇ ವಾಣಿಜ್ಯೋದ್ಯಮ, ಕೈಗಾರಿಕೆ ಮತ್ತು ಪ್ರವಾಸೋಧ್ಯಮದಿಂದ ಪರಿಸರ ಹಾನಿ ನಮ್ಮ

ದೇಶದಲ್ಲಿ ಅನಿವಾರ್ಯ. ಆದರೆ ಇದಾವುದೂ ಇಲ್ಲದೆಯೂ, ಕಳೆದ 50 ವರ್ಷಗಳಲ್ಲಿ ಮಿರ್ಲೆಯ ಬಳಿ ಹರಿವ ಕಾವೇರಿ ನೀರು ಕಲುಷಿತವಾಗಿ, ದಂಡೆಯಲ್ಲಿದ್ದ ಕಾಡು ನುಣ್ಣಗಾಗಿ ದಡ ಕೊಚ್ಚಿಹೋಗಿರುವುದು ಮಾತ್ರ ವಿಪರ್ಯಾಸ! ಮೇಲೆ ತಿಳಿಸಿದ ನನ್ನ ನೆನಪಿನಲ್ಲಿರುವ ಕಾವೇರಿ ತೀರದ ಚಿತ್ರ ಮುಂದಿನ ಪೀಳಿಗೆಗಿರಲಿ ಇಂದಿನ ಪೀಳಿಗೆಗೆ ಅಲ್ಲಿ ಕಾಣಸಿಗದು. ಅಲ್ಲದೆ ಮೂಲ ಸೌಕರ್ಯಗಳನ್ನು ಕಲ್ಪಿಸದೇ ಇದ್ದರೆ ಮಿರ್ಲೆಯವರೂ ಈಗ ಇರುವುದನ್ನೂ ಅನುಭವಿಸಲಾರರು. ಅಂದರೆ ಪರಿಸರ ಹಾನಿಯನ್ನು ಆದಷ್ಟು ಖನಿಷ್ಠಗೊಳಿಸುವ ಪ್ರಯತ್ನದೊಂದೆಗೆ ಅಭಿವೃದ್ಧಿಯಿರಬೇಕು. ಅಭಿವೃದ್ಧಿಯ ಸಂಪೂರ್ಣ ನಿರಾಕರಣೆ ಸರಿಯೆ?. ಮಿರ್ಲೆಯ ಅರ್ಧಕ್ಕೂ ಹೆಚ್ಚು ಭಾಗ, ಅಂದರೆ ಚಾಮರಾಜ ನಾಲೆಯ ಕೆಳಭಾಗವೆಲ್ಲಾ, ನೀರಾವರಿಗೆ ಒಳಪಡಬಹುದಾಗಿದ್ದ ಫಲವತ್ತಾದ ಭೂಮಿ. ಅಮೃತೆಶ್ವರ ದೇವಸ್ಥಾನ ಸ್ಥಳಾಂತರಿಸಿದ್ದೂ ಫಲವತ್ತಾದ ಭೂಮಿ ಹಿಂಪಡೆಯಲೇ ಅಲ್ಲವೆ? ಈ ಕುರಿತ ಸವಿಸ್ತಾರ ಪ್ರತಿಕ್ರಿಯೆ ಮತ್ತು ಚರ್ಚೆಗೆ **ಅನುಬಂಧ 8** ನೋಡಿ.

## ಕೈಗಾರಿಕೋದ್ಯಮ

ಕೆ. ಆರ್.ನಗರ ತಾಲ್ಲೂಕನ್ನು 2009-14ರ ನೂತನ ಕೈಗಾರಿಕಾ ನೀತಿಯಂತೆ ಕೈಗಾರಿಕಾ ದೃಷ್ಟಿಯಿಂದ ಹಿಂದುಳಿದ ತಾಲ್ಲೂಕು ಎಂದು ಗುರುತಿಸಲಾಗಿದೆ. ತಾಲ್ಲೂಕು ಕೇಂದ್ರ, ಸಾಲಿಗ್ರಾಮ, ಬೇರ್ಯ ದಂತಹ ಊರುಗಳಿಗೆ ಹೋಲಿಸಿದರೆ ಮಿರ್ಲೆ ಕೃಷಿ ಪ್ರಧಾನತೆಯಲ್ಲೆ ಸಂಪೂರ್ಣ ಮುಳುಗಿದಂತೆ ಭಾಸವಾಗುತ್ತದೆ. ಮಿರ್ಲೆಯಲ್ಲಿ ಕೈಗಾರಿಕೋಧ್ಯಮ, ಗುಡಿ ಕೈಗರಿಕೆಯೂ ಸೇರಿದಂತೆ, ಅತ್ಯಂತ ಖನಿಷ್ಠದ್ದಾಗಿದೆ. ಸಬ್ಸಿಡಿಯೂ ಸೇರಿದಂತೆ ಕೈಗಾರಿಕೆಗೆ ಸರ್ಕಾರದ ಉತ್ತೇಜನೆಗಳು ಹಲವಾರು. ಕೈಗರಿಕೆಗೆ ಬೇಕಾದ ನೀರು, ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲ, ವಿದ್ಯುಚ್ಛಕ್ತಿ, ಬ್ಯಾಂಕ್, ಸಾರಿಗೆ, ಇತ್ಯಾದಿಗಳು ಇದ್ದೂ ಮಿರ್ಲೆಯವರು ಆಸಕ್ತಿ ತೋರಿಸಿಲ್ಲವೊ ಅಥವ ಪೂರಕ ಕೌಶಲ ಮತ್ತು ಮನಃಸ್ಥೈರ್ಯವಿಲ್ಲವೊ, ಮಿರ್ಲೆಯಲ್ಲಿ ಉಧ್ಯಮಶೀಲತೆ ಇರಲಿಲ್ಲ ಮತ್ತು ಈಗಲೂ ಇದ್ದಂತಿಲ್ಲ. ಕೃಷಿ ಆಧಾರಿತ ಉದ್ಯಮಗಳಾದ ರೇಷ್ಮೆ, ಆಲೆಮನೆ, ತೋಟಗಾರಿಕೆ, ಇತ್ಯಾದಿ ವಾಣಿಜ್ಯ ಬೆಳೆಗಳತ್ತಲೂ (ಚುಂಚನ ಕಟ್ಟೆ ಸಕ್ಕರೆ ಕಾರ್ಖಾನೆಗಾಗಿಯೆ ಕಬ್ಬುಬೆಳೆಯುವುದು ಹೊರತು

ಪಡಿಸಿ) ಹೆಚ್ಚು ತೊಡಗಿಸಿಕೊಂಡಿಲ್ಲ . ಕೃಷಿಯ ಉಪ ಉದ್ಯೋಗಗಳಾದ ಹೈನುಗಾರಿಕೆ, ಕುಕ್ಕಟೋದ್ಯಮ, ಮೀನುಗಾರಿಕೆ, ಉತ್ಪನ್ನಗಳ ಸಂಸ್ಕರಣೆ, ಇತ್ಯಾದಿಯೂ ದೊಡ್ಡಪ್ರಮಾಣದಲ್ಲಿ ಇಲ್ಲ.

ಮೂರು ಅಕ್ಕಿ ಗಿರಣಿಗಳನ್ನು ಮತ್ತು ತಾತ್ಕಾಲಿಕ ಆಲೆಮನೆಗಳಲ್ಲಿ ತಯಾರಿಸುತ್ತಿದ್ದ ಬೆಲ್ಲ ಹೊರತುಪಡಿಸಿ ಯಾವುದೇ ಕೈಗಾರಿಕೆ ಮಿರ್ಲೆಯಲ್ಲಿರಲಿಲ್ಲ. ಸ್ವತಂತ್ರ್ಯ ಪೂರ್ವದಿಂದಲೇ ಸುಮಾರು 20-30 ವರ್ಷಗಳ ಕಾಲ ಎಳೆಂಟು ಮಂದಿ ಕಬ್ಬು ಬೆಳೆದು ಹೊರಗಿನ ಕೆಲಸಗಾರರು ಮತ್ತು ಸಲಕರಣೆಗಳನ್ನು ಕರೆಯಿಸಿ/ ತರಿಸಿ ತಾತ್ಕಾಲಿಕ ಆಲೆಮನೆಗಳನ್ನು ನಿರ್ಮಿಸಿ ಬೆಲ್ಲ ತಯಾರಿಸುತ್ತಿದ್ದರು. ಇವರಲ್ಲಿ ಬೆಲ್ಲದ ಶಟ್ಟರೂ ಎಂದೇ ಕರೆಯುತ್ತಿದ್ದ (ಕರೀಕಲ್ಲು ಬೀದಿ) ಅಂಗಡಿ ದೊಡ್ಡಣ್ಣನವರ ಮನೆ ಪಕ್ಕದ ಮನೆಯವರು ಮತ್ತು D K ಚನ್ನಶಟ್ಟರು ಪ್ರಮುಖರು. ಇವರುಗಳು ಬೆಲ್ಲವನ್ನು ಮೈಸೂರಿಗೆ ಕೊಂಡೊಯ್ದು ಮಾರುತ್ತಿದ್ದರು ಎಂದು ಕೇಳಿದ್ದೇನೆ. ಇತ್ತೀಚಿನ ವರ್ಷಗಳಲ್ಲಿ ಚುಂಚನಕಟ್ಟೆಯ ಶ್ರೀರಾಮ ಸಕ್ಕರೆ ಕಾರ್ಖಾನೆ ನಿಂತಮೇಲೆ ಕೆಲವರು, ಅನಿವಾರ್ಯವಾಗಿ, ಬೆಳೆದ ಕಬ್ಬಿನಿಂದ ಬೆಲ್ಲ ತಯಾರಿಸಿರಬಹುದು.

ಬಡಗಿ, ಅಕ್ಕಸಾಲಿಗ, ಎಣ್ಣೆಗಾಣ, ನೇಕಾರಿಕೆ, ಬಿದಿರು ಉತ್ಪನ್ನ, ಕಮ್ಮಾರಿಕೆ, ಸುಣ್ಣ, ಹೆಂಚು ಮತ್ತು ಇಟ್ಟಿಗೆ ತಯಾರಿಕೆ, ಇತ್ಯಾದಿ ವಂಶಪಾರಂಪರಿಕ ಉದ್ಯಮೆಗಳಿದ್ದಿರಬಹುದು ಕುಂಬಾರಿಕೆ, ನೇಕಾರಿಕೆ, ಹೆಂಚು ತಯಾರಿಕೆ ಮಿರ್ಲೆಯಲ್ಲಿ ಇರಲಿಲ್ಲವೆನ್ನಿಸುತ್ತದೆ. ಖನಿಜ ಸಂಪನ್ಮೂಲದ ಕೊರತೆ ಮತ್ತು ಸೀಮಿತ ಕೈಗಾರಿಕೆ ತಾಲ್ಲೂಕು ಹಾಗೂ ಜಿಲ್ಲೆಯಲ್ಲಿಯೇ ಇದ್ದದ್ದರಿಂದ (ಜಿಲ್ಲೆಯನ್ನು ಕೈಗರಿಕಾ ಹಿಂದುಳಿದ ಪ್ರದೇಶವೆಂದು 1971ರಲ್ಲೇ ಗೋಷಿಸಲಾಗಿತ್ತು) ಸ್ವಾಭಾವಿಕವಾಗಿ ಮಿರ್ಲೆಯೂ ಕೈಗಾರಿಕೆಯಲ್ಲಿ ಹಿಂದೆ ಬಿದ್ದಿದೆ. ಹತ್ತಿರದ ಚುಂಚನಕಟ್ಟೆಯ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆಯೊಂದನ್ನು ಇಲ್ಲಿ ಸ್ಮರಿಸಬಹುದು. ಭತ್ತ ಬೆಳೆಯುವುದರಿಂದ ತಾಲ್ಲೂಕಿನ 65ಕ್ಕೂ ಹೆಚ್ಚು ಅಕ್ಕಿ ಗಿರಣಿಗಳಲ್ಲಿ ಮೂರು ಮಿರ್ಲೆಯಲ್ಲಿವೆ. ಸಕ್ಕರೆ ಕಾರ್ಖಾನೆ ಸ್ಥಾಪನೆಯಾದ ಮೇಲೆ ಕಬ್ಬು ಬೆಳೆಯಲಾರಂಬಿಸಿದ್ದು

ಬಹಳ ಸ್ವಾಭಾವಿಕವಾದ ಬೆಳವಣಿಗೆ. ಚುಂಚನಕಟ್ಟೆಯಲ್ಲಿ 1973 ರಲ್ಲಿ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ಆರಂಬಿಸಿ ಸುತ್ತಲಿನ ಸುಮಾರು 1705 ಗ್ರಾಮಗಳಿಂದ ಕಬ್ಬು ಸರಬರಾಜು ಗೊಳ್ಳುವಂತಾಯಿತು. ಪ್ರತಿದಿನ ಸುಮಾರು 1250 ಟನ್ ಕಬ್ಬು ಅರೆಯುವ ಸಾಮರ್ಥ್ಯವಿದ್ದರೂ ಕಬ್ಬಿನ ಮತ್ತು ಆಡಳಿತ ಕೊರತೆಗಳಿಂದಾಗಿ ಸುಮಾರು 30 ವರ್ಷಗಳ ನಂತರ ಸತತ ನಷ್ಟ ಅನುಬವಿಸಿದ ಕಾರ್ಖಾನೆಯನ್ನು ಖಾಸಗಿಯವರಿಗೆ ವಹಿಸಲಾಯಿತು. ತಮಿಳುನಾಡಿನ ಅಂಬಿಕಾ ಶುಗರ್ಸ 169 ಕೋಟಿಗೆ ಕಾರ್ಖಾನೆಯನ್ನು 22 ವರ್ಷಕ್ಕೆ ಗುತ್ತಿಗೆ ಪಡೆದು ಕೇವಲ 5 ವರ್ಷಗಳಲ್ಲಿ ಸ್ಥಳೀಯ ರಾಜಕಾರಣಿಗಳ ಕಿರುಕುಳದಿಂದ ಖಾಲಿ ಮಾಡಿದರು ಎನ್ನಲಾಗಿದೆ. ಒಂದು ಸರ್ಕಾರ ಪುನರಾರಂಬಿಸುವುದಾಗಿ ಹೇಳಿದ್ದರೂ, ಮತ್ತೊಂದು ಲೇ ಆಫ್ ಮಾಡುವುದಾಗಿ ಗೋಷಿಸಿದೆ (ನವೆಂಬರ್ 2013).

## ಕಿರು ಉಧ್ಯಮ/ ಗುಡಿ ಕೈಗಾರಿಕೆ

ಉಧ್ಯಮಶೀಲತೆಯ ಕೊರತೆಯಿಂದಾಗಿ ಯಾವ ಸಣ್ಣ ಮತ್ತು ಗುಡಿ ಕೈಗಾರೆಕೆಗಳೂ ಮಿರ್ಲೆಯಲ್ಲಿ ತಲೆಯೆತ್ತದಿರುವುದು ಸೋಜಗವೇನಲ್ಲ. ಅಕ್ಕಿ ಗಿರಣಿಗಳು, ಒಂದೆರಡು ವಂಶಪಾರಂಪರಿಕ ವೃತ್ತಿಗಳಾದ ಬಡಗಿ, ಕಮ್ಮಾರಿಕೆ ಬಿಟ್ಟರೆ  ಮಿರ್ಲೆಯಲ್ಲಿ ಸ್ವಾತಂತ್ರ್ಯಾನಂತರ ಯಾವ ಸಣ್ಣ ಮತ್ತು ಗುಡಿ ಕೈಗಾರಿಕೆ ಆರಂಭವಾಗಲಿಲ್ಲ. ಅಕ್ಕಿ ಗಿರಣಿ ಮತ್ತು ಸಕ್ಕರೆ ಕಾರ್ಖಾನೆ ಬೈಪ್ರಾಡಕ್ಟಗಳಾದ ಹೊಟ್ಟು, ಜೊಳ್ಳು, ಮೊಲಾಸಿಸ್, ಕಬ್ಬಿನ ಸಿಪ್ಪೆ, ಇತ್ಯಾದಿ ಬಳಸಿದ ಕೈಗಾರಿಕೆ ಸಾದ್ಯವಿರಲಿಲ್ಲವೆ? ಮಿರ್ಲೆಭತ್ತದ ಕಣಜ ಎನಿಸಿ ಸುಮಾರು 5000 ಎಕರೆ ನೀರಾವರಿ ಪ್ರದೇಶದಲ್ಲಿ ವರ್ಷಕ್ಕೆ ಸುಮಾರು 50000 ಕ್ವಿಂಟಾಲ್ ಭತ್ತ ಬೆಳದರೂ ಅದರಿಂದ ದೊರೆವ ಹೊಟ್ಟು ಮತ್ತು ಜೊಳ್ಳು ಬಳಸುವ ದಿಕ್ಕಿನಲ್ಲಿ ಚಿಂತನೆ ನಡೆಯಲಿಲ್ಲವೆ? ಭತ್ತದ ಹೊಟ್ಟಿನಿಂದ ಎಣ್ಣೆ ತಯಾರಿಸುತ್ತಾರೆಂದು ಕೇಳಿದ್ದೇನೆ. ಇತ್ತೀಚೆಗೆ ಹೆಚ್ಚು ಚಾಲ್ತಿಗೆ ಬಂದ ಸೂರ್ಯನ ಶಾಖ ಮತ್ತು ಬೀಸುವ ಗಾಳಿಯಿಂದಷ್ಟೇ ಅಲ್ಲದೆ ಸಗಣಿಯಿಂದ ಉತ್ಪತ್ತಿಯಾಗುವ ಮೀತೇನ್ ಮತ್ತು ಭತ್ತದ ಜೊಳ್ಳಿನಿಂದ ಸಣ್ಣಪ್ರಮಾಣದ ವಿದ್ಯುಚ್ಛಕ್ತಿ ಉತ್ಪಾದನೆ ಮಾಡಬಹುದಾಗಿದೆ ಎಂದು ಕೇಳಿದ್ದೆ. ಕೃಷಿ ಉತ್ಪನ್ನ ಸಂಸ್ಕರಣೆಯಾದರೂ ನಡೆದಿದೆಯೆ? ಅಥವ ಮಿರ್ಲೆಯಲ್ಲಿ ಬೆಳೆಯುವುದೆಲ್ಲವೂ ಇತರರಿಗೆ

ಕಚ್ಚಾವಸ್ತುವಾಗುವುದರಲ್ಲಿಯೇ ತೃಪ್ತಿಪಡೆದೆದ್ದೇವೆಯೆ?

ಮಿರ್ಲೆಯಲ್ಲಿ ಯತೇಚ್ಛವಾಗಿ 'ಕಾಗೆ ಬಂಗಾರ' (mica), ವಿಭೂತಿ ಮಣ್ಣು ಮತ್ತು ಬಟ್ಟೆ ಒಗೆಯಲು ಉಪಯೋಗಿಸುತ್ತಿದ್ದ ಚೌಳು ಮಣ್ಣು ದೊರೆಯುತ್ತಿದ್ದವು. ಹಿರಿ ಕಾಲುವೆ ಏರಿಮೇಲೆ ಮತ್ತು ಹಲವಾರೆಡೆ ಸಿಕ್ಕುತ್ತಿದ್ದ ಚೌಳು ಮಣ್ಣನ್ನು ಸೋಪು ಬರುವ ಮುಂಚಿನಿಂದಲೂ ಬಟ್ಟೆ ಒಗೆಯಲು ಬಳಸಲಾಗುತ್ತಿತ್ತು. ಕೊಪ್ಪಲ ಹೊಲಗಳಲ್ಲಿ ಮತ್ತು ಹಿರಿ ಕಾಲುವೆ ಏರಿಮೇಲೆ ಕಾಗೆ ಬಂಗಾರ ದೊರೆಯುತ್ತಿತ್ತು. ಹಾಗೆಯೇ ಸಣ್ಣಮಠದ ಬಳಿ ಮತ್ತು ಇತರೆಡೆಗಳಲ್ಲಿ ವಿಬೂತಿ ಮಣ್ಣು ದೊರೆಯುತ್ತಿತ್ತು.

## *ನಮ್ಮ 'ಗ್ರಾಮ ಕೈಗಾರಿಕೆ ಸಮಿ ತಿ"ಗಳ ಯೋಜನೆ, ಅನುಷ್ಠಾನ ಮತ್ತು ಸಾಧನೆಗಳೇನು?*

ಪಂಚಾಯತ್ ರಾಜ್ ಕಾಯ್ದೆಯಡಿ ಗಾಮ ಪಂಚಾಯಿತಿ ಕಡ್ಡಾಯವಾಗಿ ಕೃಷಿ, ಆರೋಗ್ಯ, ಗ್ರಾಮ ಕೈಗಾರಿಕೆ ಮತ್ತು ಸಾಮಾಜಿಕ ನ್ಯಾಯ ಎಂಬ ನಾಲ್ಕು ಸಮಿತಿಗಳನ್ನು ಹೊಂದಿರಬೇಕು. ಮೂರ್ನಾಲ್ಕು ಧಶಕಗಳ ಕೈಗಾರಿಕಾ ಸಮಿತಿಗಳಿಂದ ಮಿರ್ಲೆಯಲ್ಲಿ ಎನಾದರೂ ಗುಡಿಕೈಗಾರಿಕಾ ಅಭಿವೃದ್ಧಿಯಾಗಿದೆಯೆ? ಹಲವು ಉಪ ವೃತ್ತಿಗಳು ಮಿರ್ಲೆಯಲ್ಲಿ ಹಿಂದೆ ನಡೆದಿದ್ದವು. ಇವುಗಳಲ್ಲಿ ಕೆಲವಾದರೂ ಸಣ್ಣ ಪ್ರಮಾಣದ ಗುಡಿ ಕೈಗಾರಿಕೆ ಅಥವ ಕಿರು ಉಧ್ಯಮಗಳಾಗಬಹುದಿತ್ತು.

### *ಉಪವೃತ್ತಿಗಳು:*

***ಊಟದ ಎಲೆ ಕಟ್ಟುವುದು:*** ನರಸನ ಹಳ್ಳಿ , ಕೊಡೆಯಾಲ, ಇತ್ಯಾದಿ ಹೆಚ್ಚು ಹೊಲಗಳೆ ಇದ್ದ ಕಡೆಯಲ್ಲಿ ಹೇರಳವಾಗಿ ಬೆಳೆಯುತ್ತಿದ್ದ ಮುತ್ತುಗದ ಮರದ ಎಲೆಗಳನ್ನ ಅಲ್ಲಿಯ ಕೆಲಸಗಾರರಿಂದ ತರಿಸಿಕೊಂಡು (ಬೆಲೆ ಕೊಟ್ಟು ಪಡೆದು) ಹೆಂಗಸರು ಎಲೆ ಚುಚ್ಚುವ ಕೆಲಸ ಮಾಡಿ ಉಟದ ಎಲೆ ತಯಾರಿಸಿ ಅಂಗಡಿಗಳಿಗೆ

***ಊಟದ ಎಲೆ ಕಟ್ಟುವುದು:*** ನರಸನ ಹಳ್ಳಿ , ಕೊಡೆಯಾಲ, ಇತ್ಯಾದಿ ಹೆಚ್ಚು ಹೊಲಗಳೆ ಇದ್ದ ಕಡೆಯಲ್ಲಿ ಹೇರಳವಾಗಿ ಬೆಳೆಯುತ್ತಿದ್ದ ಮುತ್ತುಗದ ಮರದ ಎಲೆಗಳನ್ನ ಅಲ್ಲಿಯ

ಕೆಲಸಗಾರರಿಂದ ತರಿಸಿಕೊಂಡು (ಬೆಲೆ ಕೊಟ್ಟು ಪಡೆದು) ಹೆಂಗಸರು ಎಲೆ ಚುಚ್ಚುವ ಕೆಲಸ ಮಾಡಿ ಊಟದ ಎಲೆ ತಯಾರಿಸಿ ಅಂಗಡಿಗಳಿಗೆ ಮಾರುತ್ತಿದ್ದರು. ಇಂತಹ ಊಟದ ಎಲೆ ಪಿಂಡಿಗಳನ್ನ ಅಂಗಡಿಯವರು ಮೈಸೂರಿಗೂ ಕಳಿಸುತ್ತಿದ್ದದ್ದು ಉಂಟು.

**ಬೆಲ್ಲ ತಯಾರಿಸುವುದು:** ಈ ಹಿಂದೆ ತಿಳಿಸಿದಂತೆ, ಸ್ವತಂತ್ರ್ಯ ಪೂರ್ವದಿಂದಲೇ ಸುಮಾರು 20-30 ವರ್ಷಗಳ ಕಾಲ ಎಳೆಂಟು ಮಂದಿ ಕಬ್ಬು ಬೆಳೆದು ಹೊರಗಿನ ಕೆಲಸಗಾರರು ಮತ್ತು ಸಲಕರಣೆಗಳನ್ನು ಕರೆಯಿಸಿ/ ತರಿಸಿ ತಾತ್ಕಾಲಿಕ ಆಲೆಮನೆಗಳನ್ನು ನಿರ್ಮಿಸಿ ಬೆಲ್ಲ ತಯಾರಿಸಿ ಮೈಸೂರಿಗೆ ಕೊಂಡೊಯ್ದು ಮಾರುತ್ತಿದ್ದರು.

***ಕಬ್ಬು ಮತ್ತು ಕಬ್ಬಿನಹಾಲು ಮಾರಾಟ:*** ಕುಳ್ಳಕ್ಕನ ಗುಜ್ಜಯ್ಯನ ಶ್ರೀ ಲಕ್ಷ್ಮಣ ಎಂಬುವರು ತಿನ್ನುವ ರಸದಾಳೆ ಮತ್ತು ಪಟಾಪಟಿ ಕಬ್ಬನ್ನು ಮಾರುವುದಕ್ಕಾಗಿಯೆ ಬೆಳೆದು ಕಬ್ಬು ಮತ್ತು ಕಬ್ಬಿನ ರಸವನ್ನ ಊರಿನಲ್ಲಿ ಹಾಗೂ ಹತ್ತಿರದ ಸಂತೆಗಳಲ್ಲಿ ಮತ್ತು ಜಾತ್ರೆಗಳಲ್ಲಿ ಮಾರುತ್ತಿದ್ದರು. ಇದಕ್ಕಾಗಿಯೇ ಎತ್ತುಗಳನ್ನು ಕಟ್ಟಿ ಕಬ್ಬು ಅರೆಯುವ ಒಂದು ಗಾಣವನ್ನು ಇಟ್ಟಿದ್ದರು.

***ಕರಿಮೀನು ಮತ್ತು ಸೀಗಡಿ ಉದ್ಯಮ:*** ದೊಡ್ಡ ಹಟ್ಟಿಯ ಮುಂದಿನ ರಸ್ತೆ ವಿಸ್ತರಣೆಗಾಗಿ ಮನೆ ತೆರವುಗಳಿಸಿದ ಶ್ರಿ ಚಿಕ್ಕರಾಮಣ್ಣ, ಶ್ರೀ ಗುಜ್ಜೇಗೌಡಣ್ಣ ಮತ್ತು (ಗೌಡಣ್ಣ/ ಪಾಪಣ್ಣ?) ಸಹೋದರರು ಕರಿಮೀನು ಮತ್ತು ಸೀಗಡಿಗಳನ್ನ ಹಿಡಿದು/ಸಂಗ್ರಹಿಸಿ, ಒಣಗಿಸಿ ಮಾರುತ್ತಿದ್ದರು. ರಸ್ತೆ ಮತ್ತು ಪಕ್ಕದ ಮಾಳದಲ್ಲಿ ಒಣಗಿಸುವಾಗ ಪಕ್ಷಿ, ಕೋಳಿ , ಬೆಕ್ಕು ಇತ್ಯಾದಿಗಳಿಂದ ಸಂರಕ್ಷಿಸಲು ಕಟ್ಟುತ್ತಿದ್ದ ಬಲೆಗಳ ದೃಶ್ಯ ಕರಾವಳಿಯ ಮೀನುಗಾರರನ್ನು ಹೋಲುವಂತಿತ್ತು.




**ಬೂಸಾ (ಭತ್ತದ ಜೊಳ್ಳು) ಮಾರಾಟ:** ಶ್ರೀ ಕುಳ್ಳಯ್ಯ ಎಂಬುವರು ಗಾಡಿಯಲ್ಲಿ **ಬೂಸಾ (ಭತ್ತದ ಜೊಳ್ಳು)** ತುಂಬಿಕೊಂಡು ಸಾಲಿಗ್ರಾಮದಲ್ಲಿ ಹೋಟಲ್ಲುಗಳಿಗೆ ಮಾರುತ್ತಿದ್ದರು.

**ಹಗ್ಗ ಮತ್ತು ಚಾಪೆ ತಯಾರಿಕೆ:** ಗಂಡು ಭೂತಾಳೆ ಮತ್ತು ತೆಂಗಿನ ನಾರಿನ ಹಗ್ಗ ನೇಯುವುದು, ಹೊಳೆ ದಂಡೆಯ ಚೇಣಿಕಡ್ಡಿಯಿಂದದ ಚಾಪೆ (ಮಂದಲಿಗೆ) ತಯಾರಿಸುವುದು, ಇತ್ಯಾದಿ ನಡೆದೇ ಇತ್ತು.

***ಎಣ್ಣೆ ಗಾಣಗಳು:*** ಮಿರ್ಲೆಯಲ್ಲಿ ಎರಡು ಎಣ್ಣೆ ಗಾಣಗಳಿದ್ದವು. ಅದರ ಒಡೆಯರು ಶ್ರೀ ಸೂರ ಶೆಟ್ಟಿ ಮತ್ತು ಅವರ ತಮ್ಮ ಕೃಷ್ಣ ಶೆಟ್ಟಿ. ಶ್ರೀ ಸೂರಶೆಟ್ಟರು ಉಳುಕು ತೆಗೆಯುವುದು ಮತ್ತು ನರ-ಮೂಳೆಗಳ ತೊಂದರೆಗೆ ನಾಟಿ ವೈಧ್ಯ ಮಾಡುತ್ತಿದ್ದರು.



ಒಟ್ಟಿನಲ್ಲಿ, ಪ್ರವಾಸೋದ್ಯಮದಂತೆಯೆ, ಕೈಗಾರಿಕೆ ಅಥವ ಗುಡಿ ಕೈಗಾರಿಕೆಗಳಲ್ಲಿಯೂ, 'ಗ್ರಾಮ ಕೈಗಾರಿಕಾ ಸಮಿತಿ" ಯನ್ನು ಕಾಯ್ದೆಯನ್ವಯ ಗ್ರಾಮಪಂಚಾಯಿತಿ ಹೊಂದಿದ್ದರೂ ಈ ದಿಕ್ಕಿನಲ್ಲಿ ಮಿರ್ಲೆ ಹೆಚ್ಚೇನು ಸಾಧಿಸಲಿಲ್ಲ ಎಂಬುದು ವಿಷಾದದ ಸಂಗತಿ.

## ವಾಣಿಜ್ಯ

ಶತಮಾನಗಳ ಹಿಂದೆ ಮಿರ್ಲೆ ಒಂದು ಪ್ರಮುಖ ವಾಣಿಜ್ಯ ಕೇಂದ್ರವಾಗಿದ್ದಿರಬೇಕು. ಏಕೆಂದರೆ ಯೋಗನರಸಿಂಹ ದೇವಸ್ಥನದಲ್ಲಿನ ಉಲ್ಲೇಖವೊಂದು ಮಿರ್ಲೆಯನ್ನು 'ದಕ್ಷಿಣ ಅಯ್ಯಾವಳೆ' ಎಂದು ಕರೆದು ಮಿರ್ಲೆಯ ವಾಣಿಜ್ಯ ಪ್ರಾಮುಖ್ಯತೆಯನ್ನು ಶ್ಲಾಘಿಸಿದೆ. ಮಿರ್ಲೆಯಲ್ಲಿನ ನನ್ನ ಬಾಲ್ಯದ ದಿನಗಳ (ಇಪ್ಪತ್ತನೇಶಮಾನದ ಮದ್ಯಭಾಗ) ಮಾರಾಟ ಮತ್ತು ಕೊಳ್ಳುವಿಕೆ ಸಂತೆಗಳು, ಜಾತ್ರೆಗಳು, ಚಿಲ್ಲರೆ ದಿನಸಿ ಅಂಗಡಿಗಳು, ಜವಳಿ ಅಂಗಡಿಗಳು, ಬೀದಿಯಲ್ಲಿ ಸುತ್ತಿ ಮಾರುವ ವ್ಯಾಪಾರಿಗಳು ಮತ್ತು ರಸ್ತೆ ಬದಿ ವ್ಯಾಪಾರಗಳಿಗೆ ಸೀಮಿತಗೊಂಡಿತ್ತು. ಎಲ್ಲ ಕಾಲದಲ್ಲಿಯೂ ಆಯಾ ಕಾಲದ ಬಿಡಿಸಿದ/ ಕೊಯ್ದ ಹಣ್ಣಿನ ಅಂಗಡಿಯನ್ನು ಶ್ರೀ ಕರೀ ಶಟ್ಟರು ನಡೆಸುತ್ತಿದ್ದರು. ಜಾತ್ರೆ, ಸಂತೆ ಮತ್ತು ಉತ್ಸವದ ದಿನಗಳಲ್ಲಿ ಎರಡು ಮಿಠಾಯಿ (ಸಿಹಿತಿಂಡಿ) ಅಂಗಡಿ ಗಳು ಇರುತ್ತಿದ್ದವು ( ಶ್ರೀ ಆಂಜನೀ ಗೌಡ ಮತ್ತು ಶ್ರೀ ಅಪ್ಪೇಗೌಡ). ಶ್ರೀ ರಾಮ ಶೆಟ್ಟರ ಮತ್ತು ಶ್ರೀ ಪಾಪಣ್ಣನವರ ಎರಡು ಪೆಟ್ಟಿಗೆ ಅಂಗಡಿಗಳಿದ್ದುವು. ಚಿಲ್ಲರೆ

ದಿನಸಿ ಅಂಗಡಿಗಳಲ್ಲಿ ಮುಖ್ಯವಾದುವು ರಾಮುಸ್ವಾಮೀಗೌಡರು, ದೊಡ್ಡಣ್ಣನವರು, ಗಿರೀ ಶಟ್ಟರು, ಚನ್ನಶಟ್ಟರು/ ರಾಮಲಿಂಗಯ್ಯನವರ (ತೆಂಗಿನಮರದ ಅಂಗಡಿ) ಅಂಗಡಿಗಳು. ಪಠ್ಯಪುಸ್ತಕಗಳಿಗೆ ಕೇಶವ ಮೂರ್ತಿಯವರ Book Depot ಒಂದೇ ಅಂಗಡಿ. ಸ್ವಾತಂತ್ರ್ಯಪೂರ್ವದಿಂದಲೇ ವಿಧ್ಯುಚ್ಛಕ್ತಿ ಇಲ್ಲದಾಗ ಸೀಮೆ ಎಣ್ಣೆ, ಸಿಮೆಂಟ್ ಮತ್ತು ಛಾಪಾ ಕಾಗದಗಳನ್ನು ಮೇಲ ಅಧಿಕಾರಿಗಳಿಂದ ಪರ್ಮಿಟ್ ಪಡೆದು ಶ್ರಿ ಚನ್ನಶೆಟ್ಟರು ವಿತರಿಸುತ್ತಿದ್ದರು.

***ಶ್ರೀ ದೇವು: A multi-faceted self-made technician***: ಸಾಧಾರಣವಾಗಿ ಯಾವುದೇ ಒಂದು ತಾಂತ್ರಿಕ ಕೆಲಸವನ್ನು ತರಬೇತಿ ಪಡೆದು ಅಥವ ಹಿರಿಯ ತಾಂತ್ರಿಕನಲ್ಲಿ ಕೆಲಕಾಲ apprentice ಆಗಿ ಕೆಲಸ ಕಲಿತು ಮಾಡುವುದು ರೂಢಿ. ಹೀಗಿರುವಾಗ ಆ ಕಾಲಕ್ಕೆ ನಾಲ್ಕು ವೃತ್ತಿಗಳನ್ನ ಯಾವುದೇ ಔಪಚಾರಿಕ ತರಬೇತಿ ಇಲ್ಲದೆ ನಾಲ್ಕನೇ ತರಗತಿಯಷ್ಟೇ ವಿಧ್ಯಾಭಾಸ ಮಾಡಿದ ವ್ಯಕ್ತಿ ನಡೆಸುತ್ತಿದ್ದ ಒಂದು ವಿಶಿಷ್ಟ ಅಂಗಡಿಯೆಂದರೆ ಶ್ರೀ ದೇವು ಅವರ ಬನಶಂಕರಿ ಕಾಫಿ ಪುಡಿ, ವಾಚ್ ರಿಪೇರಿ, ಫೋಟೊ ಫ್ರೇಮಿಂಗ್, ಪೆಟ್ರೊಮ್ಯಾಕ್ಸ್ ದೀಪಗಳು, ಇತ್ಯಾದಿಗಳ ಒಂದು ಪುಟ್ಟ ಅಂಗಡಿ. ಇವರ ಪೂರ್ಣ ಹೆಸರು ಶ್ರೀ ದೇವನಂಜರಾಜಯ್ಯ. ಬಹುಶಃ ಸಂಸ್ಥಾನದ ಅರಸರುಗಳ ಹೆಸರಿನಿಂದ ಪ್ರಭಾವಿತವಾದ ಹೆಸರು. ಇವರು ಮಾಧ್ಯಮಿಕ ಶಾಲಾ ಮುಖ್ಯೋಪಾಧ್ಯರಾದ ಶ್ರೀ ನಂಜುಂಡಶಟ್ಟರ ತಮ್ಮಂದಿರು ಮತ್ತು ಮಿರ್ಲೆಯ ಅಂದಿನ ಒಬ್ಬ ವಿಶಿಷ್ಟ multifaceted technician.



## ಮಿರ್ಲೆಯಲ್ಲಿ ಎತ್ತಿನ ಗಾಡಿ ರಿಪೇರಿ/ ಕಾರ್ಖಾನೆಗಳು



ರೈತಾಪಿ ಜನರಿಂದಲೇ ತುಂಬಿದ್ದ ಮತ್ತು 5000 ಎಕರೆ ನೀರಾವರಿ ಜಮೀನಿನಲ್ಲಿ ಬರೀ ಬತ್ತವನ್ನೇ ಬೆಳೆಯುತ್ತಲಿದ್ದ (ಭತ್ತದ ಕಣಜ ಎನಿಸಿದ್ದ) ಮಿರ್ಲೆಯಲ್ಲಿ ಸ್ವಾಭವಿಕವಾಗಿ ಜೋಡೆತ್ತಿನ ಗಾಡಿಗಳಿಗೆ ಬಹಳ ಬೇಡಿಕೆ ಇದ್ದಿತು. ಆ

ದಿನಗಳಲ್ಲಿ ಎತ್ತುಗಳು ಮತ್ತು ಎತ್ತಿನ ಗಾಡಿ ಗ್ರಾಮೀಣ ಪ್ರದೇಶದ ಪ್ರಮುಖ ಸಾರಿಗೆ ವ್ಯವಸ್ಥೆ. ಆಗ ಶ್ರೀರಂಗಪಟ್ಟಣದ ಬಳಿಯ ಗಂಜಾಮ್ ನಲ್ಲಿ ಉತ್ಕೃಷ್ಟ ಎತ್ತಿನ ಬಂಡಿ ತಯಾರಿಸುತ್ತಿದ್ದರು. ಉಳ್ಳವರು ಪ್ರಖ್ಯಾತ ಗಂಜಾಮ ನಿಂದಲೇ ಹೊಸ ಎತ್ತಿನ ಗಾಡಿಗಳನ್ನು ಕೊಳ್ಳುತ್ತಿದ್ದರೂ, ಇತರರು ಹಳೇ ಗಾಡಿಗಳನ್ನೆ ರಿಪೇರಿ ಮಾಡಿಸಿ ಅಥವ ಮರುಜೋಡನೆ ಮಾಡಿಸಿ ಉಪಯೋಗಿಸುತ್ತಿದ್ದರು. ಆಶ್ಚರ್ಯದ ಸಂಗತಿ ಎಂದರೆ ಇಷ್ಟೆಲ್ಲಾ ಬೇಡಿಕೆಯಿದ್ದೂ ಮಿರ್ಲೆ ಅಥವ ತಾಲ್ಲೂಕಿನಲ್ಲೆಲ್ಲೂ ಗಂಜಾಮ್ ಗೆ ಪ್ರತಿಸ್ಪರ್ಧಿ ಎತ್ತಿನ ಭಂಡಿ ತಯಾರಕರು ಹುಟ್ಟಿಕೊಳ್ಳಲಿಲ್ಲ. ಮಿರ್ಲೆಯಲ್ಲಿ ಸರ್ಕಾರಿ ಪ್ರೌಢಶಾಲೆಯ ಮುಂಭಾಗದ ಮೈದಾನದಲ್ಲಿ ಶ್ರೀ ಮಳ್ಳಿ ಆಚಾರಿ ಮತ್ತು ಶ್ರೀ ಅಪ್ಪಾಜಿ ಎಂಬ ಎರಡು ಪ್ರಮುಖ ಎತ್ತಿನಗಾಡಿ ರಿಪೇರಿ ಕಾರ್ಯಾಗಾರವಿತ್ತು. ಈ ಇಬ್ಬರೂ ಮಿರ್ಲೆಯವರ ಎತ್ತಿನ ಗಾಡಿ ರಿಪೇರಿ ಅವಶ್ಯಕತೆಗಳನ್ನು ಪೂರೈಸುತ್ತಿದ್ದರು. ಎತ್ತುಗಳ ಕಾಲಿಗೆ ಲಾಳ ಕಟ್ಟುವ ಮತ್ತು ಎತ್ತನ ಗಾಡಿಯ ಚಕ್ರಕ್ಕೆ ಕಬ್ಬಿಣದ ಪಟ್ಟಿ ಹಾಕುವ ಕಾರ್ಯಾಗಾರ ಒಂದು ಕರೆಯಬಳಿಯ ಹುಣಸಮ್ಮನ ಸಿಡಿಗಾಲಿ ನಿಲ್ಲಿಸುವ ಶೆಡ್ ಬಳಿ ಇತ್ತು. ಮುಂದೆ ಫೋಟೊ ರಾಜು ಎಂಬುವರ ತಂದೆ ಆಚಾರಿ ಶ್ರೀ ಶಿವಣ್ಣ ಎಂಬುವರೂ ಗಾಡಿ ತಯಾರಿಸುತ್ತಿದ್ದರು ಎಂದು ಶ್ರೀ ಕಿಶೋರ್ ಕುಮಾರ್ ಗೌಡ ಪ್ರತಿಕ್ರಿಯೆಯಲ್ಲಿ ತಿಳಿಸಿದ್ದಾರೆ.

ಮರದ ಕೆಲಸಗಳಿಗೆ, ವಿಶೇಷವಾಗಿ ರೈತರ ನೇಗಿಲು, ನೊಗ ಇತ್ಯಾದಿಗಳಿಗಾಗಿ ಸ್ಥಳೀಯ ಸಾಂಪ್ರದಾಯಿಕ ಬಡಗಿಗಳಾದ ಶ್ರೀ ಅಣ್ಣಯ್ಯಾಚಾರಿ, ಶ್ರೀ ಗೋಪಾಲಾಚಾರಿ, ಇತ್ಯಾದಿಗಳ ಜೊತೆಗೆ ತಮಿಳುನಾಡಿನಿಂದ ಬಂದ ಶ್ರೀ ಕೃಷ್ಣಾಚಾರಿ ಸೇರಿದರು. ಅಲ್ಲದೆ ಅಕ್ಕಸಾಲಿಗರಾದ ಶ್ರೀ ಶ್ರೀಕಂಠಾಚಾರಿ, ಶ್ರೀ ಕೃಷ್ಣಾಚಾರಿ ಮತ್ತು ಶ್ರೀ ನಂಜುಂಡಾಚಾರಿ (ಎಲ್ಲರೂ ಕರೀಕಲ್ಲು ಬೀದಿ ನಿವಾಸಿಗಳು) ಇದ್ದರು. ಫೇಸ್ ಬುಕ್ ನಲ್ಲಿ ಶ್ರೀ ಶ್ರೀನಿವಾಸಾಚರ್ಯರು ಪ್ರತಿಕ್ರಿಯಿಸಿ, ಅವರ ದಾಯಾದಿಗಳೇ ಸುಮಾರು ೩೦ ಕುಟುಂಬಗಳಿದ್ದು, ತಾಲ್ಲೂಕಿನಲ್ಲೇ ಅತೀ ಹೆಚ್ಚು ವಿಶ್ವಕರ್ಮಜನಾಂಗದವರು ಮಿರ್ಲೆಯಲ್ಲಿದ್ದರು ಎಂಬುದು ತಿಳಿಯಿತು.

---

**ಎಂ ಪಿ ಶ್ರೀನಿವಾಸಾ ಚಾರ್ಯ**; ಮಿರ್ಲೆ ಟೌನ್ ನಲ್ಲಿದ್ದ ಕೆಲವು ವಿಶ್ವಕರ್ಮಜನಾಂಗದವರನ್ನು ಮಾತ್ರವೇ ಉಲ್ಲೇಖಿಸಿರುವಿರಿ, ಮಾಹಿತಿ ಕೊರತೆಯಿರಬಹುದು. ಭತ್ತದ ಖಣಜವೆನಿಸಿದ್ದ ಮಿರ್ಲೆಯಲ್ಲಿ

ಅಂದಿನ ಸಮಯಕ್ಕೆ ಸುಮಾರು 30ಕ್ಕೂ ಹೆಚ್ಚಿನ ಕುಟುಂಬಗಳು(ತಾಲೂಕಿನಲ್ಲಿಯೇ ಹೆಚ್ಚಿನ ವಿಶ್ವಕರ್ಮ ಜನಾಂಗ) ಆದಿಯಿಂದಲೂ ಇದ್ದಿತು. ನಮ್ಮ ಪೂರ್ವೀಕರು ಮಿರ್ಲೆ ಕಾಳಪ್ಪಾಚಾರ್ಯ,ದೊಡ್ಡಹೊನ್ನಪ್ಪಾ ಚಾರ್ಯ,ಚಿಕ್ಕಹೊನ್ನಪ್ಪಾಚಾರ್ಯ ಸ್ಥಿತಿವಂತರಾಗಿದ್ದವರು ಅಂದರೆ ತರೀ ಜಮೀನು ಜೋಡಿ ತೊಟ್ಟಿಹಟ್ಟಿಗಳನ್ನ ಹೊಂದಿದ್ದವರು.ಕಾಳಪ್ಪಾಚಾರ್ಯರ ಮಗ ಕರಿಯಪ್ಪಾಚಾರ್ಯ ಇವರ ಮಕ್ಕಳೆ ನಮ್ಮ ತಂದೆ ಬಡಗಿ ಪುಟ್ಟಸ್ವಾಮಾಚಾರ್ಯ, ಹೊನ್ನಾಚಾರ್ಯ ಮಾಸ್ಟರ್, ಮಂಚಾಚಾರ್ಯ, ರಾಮಾಚಾರ್ಯ ಮಾಸ್ಟರ್ ಆಗಿದ್ದವರು.ದೊಡ್ಡ ಹೊನಪ್ಪನವರ ಮಕ್ಕಳೇ ನಮ್ಮ ಸಮಾಜದ ಯಜಮಾನ್ ಮಂಚಾಚಾರ್ಯರು ಈಗಿನ ಸುಬ್ಬಾಚಾರ್ಯ ಮಾಸ್ಟರ್ ತಂದೆ,ವಿರೂಪಾಕ್ಷೇಶ್ವರ ರಸ್ತೆಯಲ್ಲಿ ಸಾಹುಕಾರ್ ಕೋಟೇಗೌಡರ ಮನೆಯ ಸಮೀಪದಲ್ಲಿ ನಮ್ಮ ಮನೆ ಇದೆ, ಇದೇ ರಸ್ತೆಯಲ್ಲಿದ್ದ ನಂಜಪ್ಪಾಚಾರ್ಯ(ಅಯ್ಯ), ಕೊಪ್ಪಲಿನಲ್ಲಿದ್ದ ಉಗ್ರಾಚಾರ್ಯರ ತಮ್ಮಪ್ಪಾಚಾರ್ಯ,ಅಣ್ಣಾಚಾರ್ಯರ ಮಕ್ಕಳಾದ ಚಲುವಾಚಾರ್ಯ, ಹಾಗೂ ನಾಗರಾಜಾಚಾರ್ಯ, ಚಿಕ್ಕಹೊನ್ನಪ್ಪನವರ ಮಕ್ಕಳೆ ಹೊನ್ನಾಚಾರ್ಯ,ಕೋರ್ಟನಲ್ಲಿ ಗುಮಾಸ್ತರಾಗಿದ್ದ ಕಾಳಾಚಾರ್ಯ, ಶಂಕರಾಚಾರ್ಯ ಮಾಸ್ಟರ್,ರಾಮಕೃಷ್ಣಾಚಾರ್ಯ, ನಾಗಣ್ಣಾ ಚಾರ್ಯ,ರಾಮಾಚಾರ್ಯ.ಒಟ್ಟಿನಲ್ಲಿ ನಮ್ಮ ದಾಯಾದಿಗಳೇ 20 ಕುಟುಂಬಕ್ಕೂ ಹೆಚ್ಚಾಗಿದ್ದರು. ಇವರಲ್ಲಿ ಕೆಲವರು ತಮ್ಮ ಜಮೀನು ಗಳ ವ್ಯವಸಾಯವಲ್ಲದೆ ಕುಲಕಸುಬಿನಿಂದ ಸಮಾಜ ಮುಖಿಗಳಾಗಿ ರೈತಾಪಿಜನಾಂಗಕ್ಕೆ ವರ್ಷ ಪೂರ್ತಿ ಕೃಷಿ ಉಪಕರಣಗಳನ್ನ ಮಾಡಿಕೊಡುತ್ತಿದ್ದರು. ಎಲ್ಲರೂ ಬಡಗಿ ಕೆಲಸ ಮಾಡುವವರು - ನೇಗಿಲು, ಮನೆಕಟ್ಟಲು ಅಗತ್ಯ ಬಾಗಿಲು ತೊಲೆ ಇತ್ಯಾದಿ ಮಾಡುತ್ತಿದ್ದಲ್ಲದೆ ,ಕೋದಂಡರಾಮ ರಥದ ಸಿದ್ಧತೆ.ಹಿಯಣ್ಣ ದೇವತೆ ಕಾಷ್ಟಶಿಲ್ಪ,ಹುಣಸಮ್ಮ ದೇವರ ಸಿಡಿ ಸಿದ್ದತೆ ಇತ್ಯಾದಿಗಳಲ್ಲಿ ಸಹಕರಿಸುತ್ತಾ ಸಮಾಜ ಮುಖಿಗಳಾಗಿದ್ದವರು. ಈ ಹಿಂದೆ ಹೊಸ ಸೇತುವೆ ಹತ್ತಿರವಿದ್ದ ಮಿರ್ಲೆ ಭದ್ರಾಚಾರ್ ಬೆಂಗಳೂರು ಸೇರಿದ್ದರಂತೆ ಅವರ ಮಕ್ಕಳು ರಾಜ್ಯ ಪ್ರಶಸ್ತಿ ವಿಜೇತ ***ಶಿಲ್ಪಿ ಪರಮೇಶ್ವರಾಚಾರ್***, ರಾಜ್ಯ ಶಿಲ್ಪ ಅಕಾಡಮಿ ಮಾಜಿ ಅಧ್ಯಕ್ಷರಾಗಿದ್ದರು.










-----------------------------------------------------------------------

## ಸಿವಿಲ್ ಕೆಲಸಗಳ ಕಂಟ್ರಾಕ್ಟರ್ ಗಳು

ಆ ಕಾಲಕ್ಕೆ ಮಿರ್ಲೆಯಲ್ಲಿ ಕಾಂಟ್ರಾಕ್ಟ್ ಕೆಲಸವನ್ನು ಶ್ರೀ ಹಿರಿಯಣ್ಣಯ್ಯ, ಶ್ರೀ ಚನ್ನ ಶೆಟ್ಟರು, ಅವರ ತಮ್ಮ ಶ್ರೀ ಕೇಶವ ಶೆಟ್ಟರು ಮತ್ತು ಶ್ರೀ ತಿರುಮಲೇ ಗೌಡರು ನಡೆಸುತ್ತಿದ್ದರು. ಅವರುಗಳೆ ಮುಂದೆ ನೀರು ಮತ್ತು ವಿಧ್ಯುಚ್ಛಕ್ತಿ ಸಂಪರ್ಕ ಕೊಡಿಸುವ ಕೆಲಸವನ್ನೂ ಕೈಗೆತ್ತಿಕೊಳ್ಳುತ್ತಿದ್ದರು.

## ಮಿರ್ಲೆಯ ವಾರದ ಸಂತೆ ಸೋಮುವಾರವೇ ಏಕೆ?

ಒಂದು ಕೃಷಿ ಪ್ರಧಾನ ಊರಾಗಿ ಮಿರ್ಲೆಯಲ್ಲಿ ಸೋಮುವಾರದಂದು ಉಳುಮೆ ಮಾಡದೆ ಎತ್ತುಗಳಿಗೆ ರಜೆ ಕೊಡುವುದರಿಂದ ರೈತಾಪಿ ಜನರಿಗೆ ಅಂದು ಬಿಡುವಿರುತ್ತದೆ. ಅದೇಕಾರಣಕ್ಕೆ ಸಂತೆ ನಡೆಸಲು ಸೋಮುವಾರವನ್ನೇ ಆಯ್ಕೆಮಾಡಿರಬಹು ಎಂದು ಹಿರಿಯರು ಹೇಳುತ್ತಿದ್ದರು.

## *ಅಂದಿನ ವಾಣಿಜ್ಯ-ವ್ಯವಹಾರದಲ್ಲಿ ವಸ್ತು ವಿನಿಮಯ ವ್ಯವಸ್ಥೆ (*Barter system):

ಕೃಷಿಕರ ಮಿರ್ಲೆ ಬಹಳ ಕಾಲದ ವರೆವಿಗೆ Barter system (ವಸ್ತು ವಿನಿಮಯ ವ್ಯವಸ್ಥೆ) ವ್ಯವಹಾರ ಅನುಸರಿಸುತ್ತಿತ್ತು. ಬುಹುವಾಗಿ ಬೆಳೆಯುತ್ತಿದ್ದ ಭತ್ತ ಮತ್ತು ಅದರಿಂದಲೇ ದೊರೆಯುತ್ತಿದ್ದ ಒಣ ಹುಲ್ಲನ್ನು ಕೊಟ್ಟು ಹಣ್ಣು, ಸೊಪ್ಪು, ತರಕಾರಿ, ಇತ್ಯಾದಿಗಳನ್ನು ಮತ್ತು ಸುಗ್ಗಿ ಅಂಗಡಿಗಳಲ್ಲಿ ತಿನಿಸುಗಳನ್ನು ಕೊಳ್ಳುತ್ತಿದ್ದರಲ್ಲದೆ ಬಡಗಿ, ಅಗಸ, ಕ್ಷೌರಿಕ ಇತ್ಯಾದಿ ಸೇವೆಗಳಿಗಾಗಿ ವಾರ್ಷಿಕ ಸುಗ್ಗಿಯಲ್ಲಿ ಭತ್ತವನ್ನೇ ಕೊಡುವ ಪದ್ದತಿಯಿತ್ತು.

## *ಮಿರ್ಲೆಯ ದುರ್ಭಲ ವಾಣಿಜ್ಯೋಧ್ಯಮದ ನಡುವೆ ಜವಳಿ ಅಂಗಡಿಗಳ ಭರಾಟೆ!*

ಬಹಳ ಕಾಲ (1950ರ ದಶಕದಲ್ಲಿ) ಮಿರ್ಲೆಯಲ್ಲಿ ಸೀಮಿತ ವಾಣಿಜ್ಯೋದ್ಯಮ ನಡೆದಿತ್ತು. ಸುಮಾರು ಹತ್ತು ಚಿಲ್ಲರೆ (ಕಿರಾಣಿ/ ದಿನಸಿ) ಅಂಗಡಿಗಳು, ಮೂರ್ನಾಲ್ಕು ಹೋಟೆಲ್ ಗಳು (ಅಯ್ಯರ್ ಹೋಟೆಲ್, ಗೌಡಯ್ಯನ ಹೋಟೆಲ್, ರಾಮಣ್ಣನ ಹೋಟೆಲ್, ಬಸ್ ಸ್ಟ್ಯಾಂಡ ಹೋಟೆಲ್), ಕೊಪ್ಪಲಿನಲ್ಲಿ ಒಂದೆರಡು ಟೀ ಅಂಗಡಿ (ಶ್ರೀ ಕಾಫ್ರಿ ರಾಮಣ್ಣ ಮತ್ತು ಶ್ರೀ

ಕುಳ್ಳಯ್ಯ) ಇದ್ದವು [ನಂತರದ ವರ್ಷಗಳಲ್ಲಿ ಕೊಪ್ಪಲಿನಲ್ಲಿ ಶ್ರೀ ಅಣ್ಣಾತಿ (ತಮಿಳುನಾಡಿನವರು) ಮತ್ತು ಶ್ರೀ ಮುದ್ದಪ್ಪ ಅವರುಗಳ ಹೋಟೇಲ್ಗಳು ಮತ್ತು 1970 ಸುಮಾರಿಗೆ ಚೌಡೀ ಮಾಳದಲ್ಲಿ ಪೂರ್ಣಪ್ರಮಾಣದ ಎಂ. ಸಿ. ರಾಮಲಿಂಗಯ್ಯನವರ 'ಶ್ರೀ ಮಾರುತಿ ಹೋಟೆಲ್" ಆರಂಭವಾದುವು].



ಇದೇ ಕಾಲಕ್ಕೆ (1950) ಏಳು-ಎಂಟು ಜವಳಿ ಅಂಗಡಿಗಳಿದ್ದುದ್ದು ವಿಶೇಷ. ಅವುಗಳ ಒಡೆತನ ವ್ಯಾಪರಸ್ಥ ಶೆಟ್ಟರಿಗಷ್ಟೇ ಸ್ಥೀಮಿತವಾಗಿರದೆ ಭ್ರಾಹ್ಮಣರು, ಒಕ್ಕಲಿಗರು, ಮರಾಠರು ಮತ್ತು ಮುಸಲ್ಮಾನರಿಗೂ ಜವಳಿ ಅಂಗಡಿಗಳಿದ್ದದ್ದು ಕುತೂಹಲಕರ (ಅಂಗಡಿ ರಾಮಯ್ಯ, ದಾದಾ ಸಾಹೇಬ್, ಈಶ್ವರ ರಾವ್, ಗಿರೀ ಶಟ್ಟರು, D K ಚನ್ನಶೆಟ್ಟರು, ಕೃಷ್ಣೇ ಗೌಡ, ಸಿದ್ಧೇ ಗೌಡ). ಮತ್ತೂ ಕುತೂಹಲದ ಸಂಗತಿಯೆಂದರೆ, ಪ್ರತೀ ಜವಳಿ ಅಂಗಡಿಗೆ ಸೇರಿದಂತೆ ಒಂದಿಬ್ಬರು ದರ್ಜಿಗಳಿರುತ್ತಿದ್ದರು ಮತ್ತು ಈ ಅಂಗಡಿಗಳು ಸುತ್ತಲಿನ ಹತ್ತಾರು ಹಳ್ಳಿಗಳಲ್ಲಿ ತಿಂಗಳು-ಎರಡು ತಿಂಗಳು ದರ್ಜಿಯೊಂದಿಗೆ ಕ್ಯಾಂಪ್ ಹಾಕಿ ವ್ಯಾಪಾರ ನಡೆಸುತ್ತಿದ್ದವು (ಜವಳಿ ಅಂಗಡಿ ಮಾಹಿತಿ: ಸ್ನೇಹಿತ-ಸಹಪಾಠಿ M R ಶಂಕರಯ್ಯ). ಮೈಸೂರಿನ ಸಂಪರ್ಕ ಹೆಚ್ಚಿದಂತೆ ಮಿರ್ಲೆಯ ಜವಳಿ ವ್ಯಾಪಾರ ಕ್ಷೀಣಿಸಿತೆ? ಅಥವ ಸಾಲಿಗ್ರಾಮ ಮತ್ತು ಕೆ. ಆರ್. ನಗರದ ಜವಳಿ ಅಂಗಡಿಗಳು ಹೆಚ್ಚು ಆಕರ್ಷಿಸಿದುವೆ? ಮತ್ತೊಂದು ಸೋಜಿಗವೆಂದರೆ ಇಷ್ಟು ಜವಳಿ ಅಂಗಡಿಗಳಿದ್ದೂ ಗಂಟುಮೂಟೆ ಹೊತ್ತು ಬೀದಿಯಲ್ಲಿ ಸೀರೆ ಮಾರಾಟ ಮಾಡುವ ಹೊರ ಊರಿನ (ಹೆಚ್ಚಾಗಿ ತಮಿಳುನಾಡಿನ) ವ್ಯಾಪಾರಸ್ಥರ ಗಸ್ತು ವಿಫುಲವಾಗಿಯೇ ಇತ್ತು. ಬಹಶಃ ಹೆಂಗಸರು ಸ್ವಂತ ಊರಿನ ಜವಳಿ ಅಂಗಡಿಗಳಿಗೆ ಹೋಗಿ ಸೀರೆ ವ್ಯಾಪಾರ ಮಾಡಲು ಹಿಂಜರಿಯುತ್ತಿದ್ದದ್ದರಿಂದ ಮನೆಗೇ ಹೊತ್ತು ತರುವ ವ್ಯಾಪಾರಿಗಳಿಗೆ ಅವಕಾಶವಿತ್ತು. ಅಲ್ಲದೆ ಅಂಗಳದಲ್ಲಿ ಗಂಡಸರಿಲ್ಲದ ಮದ್ಯಾನ್ಹದ ವೇಳೆ ಹೆಂಗಸರು ಗುಂಪಾಗಿ ಚೌಕಾಶಿ ವ್ಯಾಪಾರ ಮಾಡಲು ಅನುಕೂಲವಾಗಿತ್ತು. ಇದೆಲ್ಲದರ ಜೊತೆಗೆ ಸಂತೆ ಮತ್ತು ಜಾತ್ರೆಗಳಲ್ಲಿ ಬಟ್ಟೆ ಮಾರಾಟ ಸ್ವಲ್ಪ ಮಟ್ಟಿಗೆ ಇದ್ದಿತು. ಬಟ್ಟೆ ವ್ಯಾಪರ ಕ್ಷೀಣಿಸಿದರೆ ಪೂರ್ಣ ನಶಿಸಿದ ಮತ್ತೊಂದು ಕಿರು ವೃತ್ತಿ ಹರಿದ ಬಟ್ಟೆಗಳನ್ನು ಕೈಯ್ಯಲ್ಲೇ ಹೊಲೆದು ಕೊಡುವುದು.

---

**ಪ್ರತಿಕ್ರಿಯೆಗಳು:**

**Mirle Surappa:** Food for thoughts. Revisiting Mirle in late 50,s and 60,s is very enchanting and strengthens our roots and help in recapitulating how I used to spend my idle and copious spare time in front of those shops and often listening to gossiping , routine pastime of our elderly friends and relatives

**Mirle Satyanarayana Sudarshan:** ಹೌದು ಶ್ರೀಧರ್ ರವರೆ, ನಮ್ಮ ಊರಿನ ಬಗ್ಗೆ ಎಲ್ಲವನ್ನೂ ಜ್ಞಾಪಕ ಮಾಡಿಕೊಡುತ್ತಿದ್ದೀರ. ಬಹುಶಃ ನಿಮ್ಮ ಸಂಶೋಧನೆ ಜೊತೆ ನಿಮ್ಮ ನೆನಪಿನ ಶಕ್ತಿ ಯೂ ಅಗಾಧ ಎಂದು ಅನಿಸಿದೆ.  ಆಗ (60 ರ ದಶಕ) ಬಹುಶಃ 2-3 ಮುಸಲ್ಮಾನ ಕುಟುಂಬ ಇದ್ದಿರಬೇಕು. ಒಂದು ಜವಳಿ ಅಂಗಡಿ (ದಾದ ಸಾಹೇಬ್), ಇನ್ನೊಬ್ಬರು ಅಂಚೆ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದ ಸಾಬ್ ಜಾನ್. ಅಂದಹಾಗೆ ನಮ್ಮ ಊರಿನ ಹೋಟೆಲ್ ಅಯ್ಯರ್ ಮಗಳು ಶ್ರೀಮತಿ ಭಾರತಿ ಸುಬ್ರಮಣಿಯನ್ ಈ ಗುಂಪಿನ ಒಬ್ಬ ಸದಸ್ಯೆ. ಸದ್ಯ ಅಮೇರಿಕ ದಲ್ಲಿದ್ದಾರೆ

---

## ಬಟ್ಟೆಗಳಿಗೆ ಕೈಹೊಲಿಗೆ ಹಾಕುವುದನ್ನೇ ವೃತ್ತಿಯಾಗಿಸಿಕೊಂಡಿದ್ದ ಶಾಬಾಳಿನ ಬೂಬಮ್ಮಂದಿರು:

ನನ್ನ ತಲೆಮಾರಿನವರು ಮತ್ತು ಅದಕ್ಕೂ ಹಿಂದಿನವರು (ಶ್ರೀಮಂತರನ್ನು ಹೊರತು ಪಡಿಸಿ) ಬಟ್ಟೆ ಹರಿದರೆ ಹೊಲೆದು/ ರಿಪೇರಿ ಮಾಡಿ ಉಪಯೋಗಿಸುವುದು ಸ್ವಾಭಾವಿಕ ಎಂದು ಭಾವಿಸಿದ್ದರು. ಆದರೆ ಇಂದು ಬಹುಶಃ ಆರ್ಥಿಕ ಮುನ್ನಡೆಯಿಂದಲೋ ಅಥವ ಸಮಯದ ಅಭಾವದಿಂದಲೋ ಮುಂದಿನ ಪೀಳಿಗೆಯಲ್ಲಿ ಅಷ್ಟಾಗಿ ಚಾಲ್ತಿಯಲ್ಲಿಲ್ಲವಾಗಿದೆ. ಈಗ ಒಡೆದ ಗುಂಡಿ ಹಾಕಿಕೊಳ್ಳುವುದು, ಹರಿದ ಚಪ್ಪಲಿ, ಷೂ ರಿಪೇರಿ ಮಾಡಿಸಿಕೋಳ್ಳುವುದೇ ದುರ್ಲಭ. ಮಿರ್ಲೆಯಲ್ಲಿ ಶಾಬಾಳಿನ ಬೂಬಮ್ಮಂದಿರು ಮನೆ ಮನೆಗೆ ಹೋಗಿ ರಾಶಿ ರಾಶಿ ಹರಿದ ಬಟ್ಟೆಗಳಿಗೆ ಕೈಹೊಲಿಗೆ ಹಾಕುವುದನ್ನೇ ಒಂದು ವೃತ್ತಿಯಾಗಿಸಿಕೊಂಡಿದ್ದರು ಎಂಬುದು ಈಗ ಒಂದು ನೆನಪಷ್ಟೇ!

# 9

# ಆಡಳಿತ ಮತ್ತು ರಾಜಕೀಯ

ಗಂಗರ ಅಧೀನದಲ್ಲಿದ್ದಾಗ ಎಡತೊರೆಯನ್ನು ಪಾಳೇಗಾರರು ಆಳುತ್ತಿದ್ದರು. ಆಗ ಎಡತೊರೆ ಎಂಬ ಪ್ರಾಂತ್ಯದಲ್ಲಿ ಮಿರ್ಲೆ ಸೇರಿತ್ತು. ಚೋಳರ ಆಳ್ವಿಕೆಯಲ್ಲಿ ಮುಡಿಗೊಂಡ ಚೋಳಮಂಡಲದ ರಾಜೇಂದ್ರ ಚೋಳನ ಇಡ್ಯೆನಾಡಿನಲ್ಲಿತ್ತು. ಒಂದನೆ ರಾಜರಾಜ ಚೋಳನು ಈ ಪ್ರದೇಶವನ್ನು ಭೂಸರ್ವೇಕ್ಷಣಕ್ಕೆ ಒಳಪಡಿಸಿದ್ದ. ಅರಸರ ಕಾಲದಲ್ಲಿ ಮೈಸೂರು ಜಿಲ್ಲೆಯ ಭಾಗವಾಗಿ 1862ರ ವೇಳೆಗೆ ಎಡತೊರೆ ಒಂದು ತಾಲ್ಲೂಕಾಯಿತು.

ಟಿಪ್ಪುವಿನ ಸಾವಿನ ನಂತರ (1799) ಒಡೆಯರ ಕಾಲದಲ್ಲಿ 1800ರ ಸುಮಾರಿಗೆ ಸಂಸ್ಥಾನದಲ್ಲಿ ಸುಮಾರು 120 ತಾಲ್ಲೂಕುಗಳಿದ್ದು, ಪ್ರತಿ ತಾಲ್ಲೂಕಿಗೂ ಅಮುಲ್ದಾರರು ಮತ್ತು ಪೌಜುದಾರರು ಆಡಳಿತ ನಡೆಸುತ್ತಿದ್ದರು. ತಾಲ್ಲೂಕು ಮಂಡಳಿಗಳು 1883ರಲ್ಲಿ, ನಂತರ ಜಿಲ್ಲಾ ಮಂಡಳಿಗಳೂ ರಚನೆಗೊಂಡವು. ಗ್ರಾಮಗಳ ಆಡಳಿತ ಕಂದಾಯ ನೌಕರರು, ಗ್ರಾಮದ ಪಟೇಲರು ಮತ್ತು ಶಾನುಭೋಗರ ಮೂಲಕ ನಡೆಸುತ್ತಿದ್ದರು.
ಸ್ವಾತಂತ್ರ್ಯಾನಂತರ ತಾಲ್ಲೂಕಿನಲ್ಲಿ ಆರು ಕಂದಾಯ ಹೋಬಳಿಗಳಿದ್ದುವು ಮತ್ತು ಕಂದಾಯ ವಸೂಲಿಗೆ ಮಿರ್ಲೆ, ಸಾಲಿಗ್ರಾಮ ಮತ್ತು ಚುಂಚನ ಕಟ್ಟೆಗಳಲ್ಲಿ ನಾಡಕಚೇರಿಗಳಿದ್ದವು.
ಹಳೇ ಮೈಸೂರು ಪ್ರಾಂತ್ಯದ ಬಹುತೇಕ ಗ್ರಾಮಗಳೂ ಅರಸರು, ಮಂತ್ರಿಗಳು ಅಥವ ಸೈನಿಕರ ಬೀಡು ಬಿಟ್ಟದ್ದರಿಂದಾಗಲಿ ಅಥವ ಯೋಧ, ಅಧಿಕಾರಿ, ಕಲಾವಿದ, ಬ್ರಾಹ್ಮಣರಿಗೆ ಬಳುವಳಿ/ ಜಾಗಿರ್ದಾರಾಗಿ ಕೊಟ್ಟವುಗಳು. ಮಿರ್ಲೆಯೂ ಇಂತಹುದೇ ಒಂದು ಅಗ್ರಹಾರವಾಗಿದ್ದಿರಬೇಕು. ಕಾರಣ ಇದು ದೇವಸ್ಥಾನಗಳ ಊರು ಮತ್ತು ಮೂಲದಲ್ಲಿ ಇಲ್ಲಿನ ಹೆಚ್ಚಿನ ಆಸ್ತಿ (ಜಮೀನು) ಬ್ರಾಹ್ಮಣರಿಗೆ ಸೇರಿದ್ದಾಗಿತ್ತು. ನೂರಾರು ವರ್ಷಗಳ ಕಾಲ ಆಳುವವರು ಕೆರೆ ಕಟ್ಟೆ, ದೇವಸ್ಥಾನ, ಛತ್ರ, ರಸ್ತೆ, ಸಾಲು ಮರಗಳು ಇತ್ಯಾದಿಗಳನ್ನು ಸಾರ್ವಜನಿಕರಿಗಾಗಿ ನಿರ್ಮಿಸುತ್ತಿದ್ದರು. ನಂತರದ ವರ್ಷಗಳಲ್ಲಿ ಕೃಷಿಗೆ ಒತ್ತು ನೀಡಿ ನೀರಾವರಿ ವ್ಯವಸ್ಥೆ ಕಲ್ಪಿಸತೊಡಗಿದರು. ಮುಂದೆ 19ನೇ ಶತಮಾನದ ಅಂತ್ಯ ಮತ್ತು

20ನೇ ಶತಮಾನದ ಆದಿಯಲ್ಲಿ ಶಿಕ್ಷಣ, ಆರೋಗ್ಯ, ಗ್ರಾಮನೈರ್ಮಲ್ಯಗಳಿಗಾಗಿ ಶ್ರಮಿಸಿ, ದಾನಮಾಡಿದ ನಾಯಕರುಗಳು ಕಾಣುತ್ತಾರೆ. ಆದರೆ ವಾಣಿಜ್ಯ ವ್ಯವಹಾರಗಳೂ ಎಲ್ಲ ಕಾಲದಲ್ಲಿಯೂ ಇದ್ದವುಗಳೆ.

ಈ ಹಿನ್ನೆಲೆಯಲ್ಲಿ ಈ ಹಿಂದೆ ತಿಳಿಸಿದಂತೆ ಸ್ವಾತಂತ್ರ್ಯಪೂರ್ವದಲ್ಲಿ ಶ್ರೀ ಬಲರಾಮೇಗೌಡರು ಕಟ್ಟಿಸಿದ ಬಾಲಕಿಯರ ಪಾಠಶಾಲೆಯಲ್ಲದೆ, ಶ್ರೀ ಕೋಟೇಗೌಡರು ಕಟ್ಟಿಸಿದ ಸಾರ್ವಜನಿಕ ಆಸ್ಪತ್ರೆ ಮತ್ತು ಶ್ರೀಮತಿ ತುಳಸಮ್ಮನವರು ಕಟ್ಟಿಸಿದ ಹೆರಿಗೆ ಆಸ್ಪತ್ರೆ ಕಟ್ಟಡಗಳು ಮೂಲಭೂತ ಶಿಕ್ಷಣ ಮತ್ತು ಆರೋಗ್ಯಕ್ಕಾಗಿ ನೀಡಿದ ಆ ಕಾಲದ ವಿಶಿಷ್ಠ ಕೊಡಿಗೆಗಳು. ಅಂದಿನ ಇಂತಹ  ಕೊಡಿಗೆಗಳು,ಧೇವಸ್ಥಾನದ / ಗೋಪುರದ ರಿಪೇರಿಗಳನ್ನು ಹೊರತು ಪಡಿಸಿ, ಮಿರ್ಲೆಯಲ್ಲಿ ಮುಂದಿನ 70 ವರ್ಷಗಳಲ್ಲಿ ಇಲ್ಲಿಯವರೆವಿಗೆ ನಡೆದೇ ಇಲ್ಲ ಎನ್ನಬಹುದು. ಸರ್ಕಾರ ಮತ್ತು ಪಂಚಾಯಿತಿ ಸಂಪನ್ಮೂಲಗಳಿಂದಲೇ ಮಾಡಬಹುದಾಗಿದ್ದ ದೇವಸ್ಥಾನ ಮತ್ತದರ ಕಳಸ, ಗೋಪುರಗಳ ರಿಪೇರಿ ಮಾಡಿಸಿ ದಾನಿಗಳೆಂದು ತಮ್ಮನ್ನು ಗುರುತಿಸಿಕೊಳ್ಳುವ ಹಂಬಲದ ಸಂಸ್ಕೃತಿ ಬೆಳೆದಿದೆ.

## ಮಿರ್ಲೆ ಗ್ರಾಮ ಪಂಚಾಯಿತಿ




ಕಾನುನು ಬದ್ಧ ಗ್ರಾಮ ಪಂಚಾಯಿತಿಗಳು 1918ರಲ್ಲಿ ಗ್ರಾಮ ಅಭಿವೃದ್ಧಿ ಸಮಿತಿಗಳ ರೂಪದಲ್ಲಿ ನಾಮಾಂಕಿತ ಅಧ್ಯಕ್ಷರೊಂದಿಗೆ  ಆರಂಭವಾದುವು. ಶಾಸನಬದ್ಧ ಗ್ರಾಮ ಪಂಚಾಯಿತಿಗಳು 1927ರಲ್ಲಿ ಗ್ರಾಮ ಅಭಿವೃದ್ಧಿ ಸಮಿತಿಗಳಿಗೆ ಬದಲಾಗಿ ಅಸ್ಥಿತ್ವಕ್ಕೆ ಬಂದವು. ಇವುಗಳಲ್ಲಿ 5 ರಿಂದ 12 ಸದಸ್ಯರಿದ್ದು,  ಅರ್ಧದಷ್ಟು ಸದಸ್ಯರನ್ನು ಚುನಾವಣೆ  ಮೂಲಕ ಆಯ್ಕೆ ಮಾಡಲಾಗುತ್ತಿತ್ತು. ಅಲ್ಲದೆ 1946 ರಿಂದ 1959 ರ ವರೆವಿಗೆ ಗ್ರಾಮ ಪಂಚಾಯಿತಿಗಳು ಜಿಲ್ಲಾಮಂಡಳಿ ಕಾಯ್ದೆಯನ್ವಯ ಕಾರ್ಯ ನಿರ್ವಹಿಸುತ್ತಿದ್ದವು. ಮುಂದೆ 1959ರ ಕರ್ನಾಟಕ ಗ್ರಾಮ ಪಂಚಾಯಿತಿ ಮತ್ತು ಸ್ಥಳೀಯ ಸಂಸ್ಥೆಗಳ ಕಾಯ್ದೆಯನ್ವಯ 1985ರ ವರೆವಿಗೆ ಜನಸಂಖ್ಯೆಯ ಆಧಾರದ ಮೇಲೆ ಒಂದು ಅಥವ ಹೆಚ್ಚು ಗ್ರಾಮಗಳನ್ನು ಸೇರಿಸಿ 11 ರಿಂದ 19 ಸಧಸ್ಯರನ್ನು ಹೊಂದಿರುವ ಗ್ರಾಮ

ಪಂಚಾಯಿತಿಗಳು ಇದ್ದವು. ಆನಂತರ ಗ್ರಾಮ ಸ್ವರಾಜ್ ಆದರ್ಶದ ಕರ್ನಾಟಕ ಜಿಲ್ಲಾ ಪರಿಷತ್ ಕಾಯ್ದೆ (1983) ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯಿತಿ ಸಮಿತಿ ಮತ್ತು ಗ್ರಾಮ ಮಟ್ಟದ ಮಂಡಲ ಪಂಚಾಯಿತಿಗಳನ್ನು ಹುಟ್ಟುಹಾಕಿತು. 1993ರ ಪಂಚಾಯತ್ ರಾಜ್ ಕಾಯ್ದೆಯ ನಂತರವೂ ಅದೇ ಗಾಮ ಪಂಚಾಯಿತಿ ವ್ಯವಸ್ಥೆ ಮುಂದುವರೆಯಿತು. ಪಂಚಾಯಿತಿಗಳಿಗೆ ಭೂಕಂದಾಯದ ಶೇ.30 ಮತ್ತು ವಿವಿಧ ಉದ್ದೇಶಗಳಿಗೆ ವಿವೇಚನೆಯ ಶೇ.10 ಅನುದಾನ ದೊರೆಯುವುದು, ಮೀಸಲಾತಿಗಳು, ನಾಲ್ಕು ಸಮಿತಿಗಳಿಗಾಗಿ (ಕೃಷಿ, ಆರೋಗ್ಯ, ಗ್ರಾಮ ಕೈಗಾರಿಕೆ ಮತ್ತು ಸಾಮಾಜಿಕ ನ್ಯಾಯ) ಪ್ರಜಾಪ್ರಭುತ್ವ ನೆಲೆಯ ಚುನಾವವಣೆ ಮತ್ತು ಆಗಿಂದಾಗ್ಯೆ ಗ್ರಾಮದ ಎಲ್ಲಾ ಮತದಾರರೂ ಭಾಗವಹಿಸಲು ಅವಕಾಶವಿರುವ 'ಗ್ರಾಮಸಭೆ' ನಡೆಸಬೇಕಾದ್ದು ಬಹಳ ಮುಖ್ಯವಾಗಿ ಗಮನಿಸಬೇಕಾದ ಅಂಶಗಳು. ಗ್ರಾಮಕಲ್ಯಾಣಕ್ಕಾಗಿ ಯೋಜನೆಗಳ, ಕಾರ್ಯಕ್ರಮಗಳ ನಿರ್ಧಾರ, ಫಲಾನುಭವಿಗಳ ಆಯ್ಕೆಮಾಡಿ ಮಂಡಲ ಪಂಚಾಯಿತಿಗೆ ಶಿಫಾರಸ್ಸು ಮಾಡುವುದು ಗ್ರಾಮ ಸಭೆ.

**ಮಿರ್ಲೆ ಮುನಿಸಿಪಾಲಿಟಿ** 1898ರಲ್ಲಿಸ್ಥಾಪಿಸಲಾಯಿತು. ಸುಮಾರು 60 ವರ್ಷಕ್ಕೂ ಹೆಚ್ಚು ಕಾಲ ಅದಕ್ಕೆ ಸ್ವಂತಕಟ್ಟಡವಿರಲಿಲ್ಲ. ಪಂಚಾಯಿತಿ ಕಟ್ಟಡ ನಿರ್ಮಿಸಲು 1950ರಲ್ಲಿ ಅನುಮತಿ ದೊರೆಯಿತು. ಬಲರಾಮೇಗೌಡರು ಚೇರ್ಮನ್ ಆಗಿ ಅವರ ಕಾಲದಲ್ಲಿ ಖಾಸಗಿ ಮನೆಯೊಂದರಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಪಂಚಾಯಿತಿಯನ್ನು ವಿಶೇಷವಾಗಿ ನಿರ್ಮಿಸಿದ ಸ್ವಂತಕಟ್ಟಡಕ್ಕೆಅಂದಿನ ಮುಖ್ಯಮಂತ್ರಿಗಳಾಗಿದ್ದ ಶೀನಿಜಲಿಂಗಪ್ಪನವರಿಂದ 1963ರ ಡಿಶಂಬರ್ 4 ರಂದು ಉದ್ಘಾಟಿಸಿ ಸ್ಥಳಾಂತರಿಸಿದರು.

**ಪಂಚಾಯಿತಿ ಅಧ್ಯಕ್ಷರುಗಳು:**

ನನಗೆ ದೊರಕಿದ ಇಬ್ಬರು ಅಧ್ಯಕ್ಷರುಗಳ ಬಗೆಗೆ ಬರೆದಿದ್ದೇನೆ. ಮಿರ್ಲೆ ಪುರಸಭೆಯ ಹಿಂದಿನ ಇತರ ಅಧ್ಯಕ್ಷರುಗಳ ಹೆಸರು, ಅವಧಿ, ಫೋಟೊ ಪಂಚಾಯಿತಿ ಕಾರ್ಯಾಲಯದಲ್ಲಿ ಸುಲಭದಲ್ಲಿ ದೊರಕುವಂತೆ ಹಳೇ ಕಡತಗಳಿಂದ ತೆಗೆದು ಒಂದು ನಾಮ ಫಲಕ ಹಾಕುವುದು ಉತ್ತಮ.

**ಶ್ರೀಮಾನ್ ಗಿರಿಯಮ್ಮನ ಸಿದ್ಧಯ್ಯ** (1894-1981) ಅವರು ಸುಮಾರು 5 ವರ್ಷಗಳ ಕಾಲ, ಅಂದರೆ 1930 ರಿಂದ 1935ರವರೆವಿಗೆ ಮಿರ್ಲೆ ಪುರಸಭೆಯ ಅಧ್ಯಕ್ಷರಾಗಿದ್ದರು. ಸ್ವಾತಂತ್ರ್ಯಪೂರ್ವದ ಪುರಸಭಾಧ್ಯಕ್ಷರಾಗಿದ್ದ ಶ್ರೀಮಾನ್ ಗಿರಿಯಮ್ಮನ ಸಿದ್ಧಯ್ಯ ಅವರು ಅಂದಿನ ಮಿರ್ಲೆಯ ಕೆಲವೇ ಬುದ್ಧಿಜೀವಿಗಳಲ್ಲಿ ಪ್ರಮುಖರು ಮತ್ತು ಅಮರಕೋಶ ಪ್ರಖರ ಪಂಡಿತರು. ಇವರ ಪೂರ್ವಿಕರು, ಅಂದರೆ ಮುತ್ತಾತ, ಕನ್ನಂಬಾಡಿ ಬಳಿಯ ಕಠೇರಿಯವರು ಮತ್ತು ಟಿಪ್ಪು ಸುಲ್ತಾನನ ಸೈನ್ಯದಲ್ಲಿ ಸೇವೆ ಸಲ್ಲಿಸಿದ್ದವರು. ಆವರ ಮನೆಯಲ್ಲಿ ಸೈನ್ಯದಲ್ಲಿ ಬಳಸುತ್ತಿದ್ದ ಕತ್ತಿಯಿದೆ.




***ಮಿರ್ಲೆ ಕಾಮರಾಜ್' - ಹೊಸಹಟ್ಟಿ ಎಂ. ಆರ್. ಬಲರಾಮೇ ಗೌಡ:***




ಮಿರ್ಲೆ ಆಡಳಿತದ ಬಗ್ಗೆ ಹೇಳುವಾಗ, ಅದರಲ್ಲೂ ಪಂಚಾಯಿತಿ ಬಗೆಗೆ ಹೇಳುವಾಗ ಪಂಚಾಯಿತಿ ಚೇರ್ಮನ್ **ಹೊಸಹಟ್ಟಿ ಬಲರಾಮೇಗೌಡರು** ಅತ್ಯಂತ ಪ್ರಮುಖರಾಗಿ ಕಾಣುತ್ತಾರೆ. ಅತಿ ವಿರಳ-ವಿಶಿಷ್ಟರಲ್ಲಿ ಒಬ್ಬರು. ನಾನು 50 ಮತ್ತು 60ರ ದಶಕಗಳಲ್ಲಿ ಗಮನಿಸಿದ ಮತ್ತು ಬಹಳ ವರ್ಷಗಳ ಕಾಲ ಪಂಚಾಯತಿ ಚೇರ್ಮನ್ ಆಗಿದ್ದ ಹೊಸಹಟ್ಟಿ ಶ್ರೀ ಎಮ್. ಆರ್. ಬಲರಾಮೇಗೌಡ ಅವರ ಬಗೆಗೆನ ಖನಿಷ್ಟ ಮಾಹಿತಿಯನ್ನೊಳಗೊಂಡ ಅಪೂರ್ಣ ಟಿಪ್ಪಣಿ ಎಂಬ ಅರಿವಿನೊಂದಿಗೆ ಕೆಲವು ಸಂಗತಿಗಳನ್ನು ತಿಳಿಸ ಬಯಸುತ್ತೇನೆ.

ಶ್ರೀ ಬಲರಾಮೇಗೌಡ ಅವರು ಕಾರ್ಯಧಕ್ಷತೆ ಮತ್ತು ಸೇವಾಮನೋಭಾವಕ್ಕೆ ಮತ್ತೊಂದು ಹೆಸರಾಗಿದ್ದವರು. ಅವರು ಸ್ವತಃ ಪ್ರತಿ ಮುಂಜಾನೆ ಊರಿನ ಸ್ವಚ್ಛತೆ/ನೈರ್ಮಲ್ಯ ಕಾರ್ಯವನ್ನು ತಮ್ಮ ಕರ್ತವ್ಯವೆಂಬಂತೆ ಪರಿವೀಕ್ಷಿಸುತ್ತಿದ್ದದ್ದು ದಿನ ನಿತ್ಯದ ಅವರ ಕೆಲಸವಾಗಿತ್ತು. ಹೆಚ್ಚು ವಿದ್ಯಾವಂತರಲ್ಲದ ಇವರು ಸಾರ್ವಜನಿಕವಾಗಿ ಊರಿನ ಮತ್ತು ಜನಗಳ ಏಳಿಗೆಗೆ ನಿಸ್ಪೃಹರಾಗಿ ದುಡಿದವರು ಮತ್ತು ಜನಾನುರಾಗಿ ನಾಯಕರು. ಅಲ್ಪಸ್ವಲ್ಪ

ವಿದ್ಯಾವಂತರಾದವರು ಮೌನಿಗಳಾಗಿ (ಅಂತರ್ಮುಖಿಗಳಾಗಿ?) ಸಮಾಜದಿಂದ ದೂರವಿರುವುದು ಅಥವ ಚತುರ ಮಾತುಗಾರರಾಗಿ ಅದನ್ನೇ ಬಂಡವಾಳವಾಗಿಸಿಕೊಂಡು ಸತತ ಪರಾವಲಂಬಿ (ಪ್ಯಾರಸೈಟ್)ಗಳಾಗುವುದು ರೂಢಿ. ಆದರೆ ಅವಿದ್ಯಾವಂತರಾಗಿಯೂ ಬಲರಾಮೇಗೌಡರು ಊರಿನ ಕೈಂಕರ್ಯದಲ್ಲಿ ಮತ್ತು ಜನಸೇವೆಯಲ್ಲಿ ಸಂಪೂರ್ಣ ತೊಡಗಿಸಿಕೊಂಡವರು. ಇವೆಲ್ಲಕ್ಕಿಂತ ಮಿಗಿಲಾಗಿ, ಬಲರಾಮೇಗೌಡರು ನಿಷ್ಪಕ್ಷಪಾತವಾಗಿ ಸ್ವಯಂಪ್ರೇರಿತರಾಗಿ ಊರಿನ ಜಗಳ, ವ್ಯಾಜ್ಯಗಳನ್ನು ಬಗೆಹರಿಸಿ ಸಾಂತ್ವನ ಹೇಳುತ್ತಿದ್ದರು ಎಂದು ಪ್ರತೀತಿ. ಹೀಗಾಗಿ ಬಲರಾಮೇಗೌಡರನ್ನು 'ಮಿರ್ಲೆಯ ಕಾಮರಾಜ್' ಎನ್ನಬಹುದು.

ಮಿರ್ಲೆಯಲ್ಲಿ ಅವರ ಕಾಲದಲ್ಲಿ ಖಾಸಗಿ ಮನೆಯೊಂದರಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಪಂಚಾಯಿತಿಯನ್ನು ವಿಶೇಷವಾಗಿ ನಿರ್ಮಿಸಿದ ಸ್ವಂತ ಕಟ್ಟಡಕ್ಕೆ ವರ್ಗಾಯಿಸಿದರು. ಅವರು ಪಂಚಾಯಿತಿ ಅಧ್ಯಕ್ಷರಾಗಿ ಧೀರ್ಘಕಾಲ ಮಾಡಿದ ಕಾರ್ಯ-ಸೇವೆಗಳು ಅವರ ಹೆಸರನ್ನು ಊರಿನಲ್ಲಿ ಚಿರಸ್ಥಾಯಿಯಾಗಿಸಿವೆ. ಪಂಚಾಯಿತಿ ಕಾರ್ಯಾಲಯದಲ್ಲಿ ಬಲರಾಮೇಗೌಡರ ಒಂದು ದೊಡ್ಡ ಭಾವಚಿತ್ರವನ್ನು ಪ್ರದರ್ಶಿಸಿರುವುದು ಸಂತಸದ ವಿಷಯ. ಆದರೆ ಅದರಲ್ಲಿ ಅವರ ಹೆಸರಿನ ಜೊತೆಗೆ ಅವರ ಜನನ ಮತ್ತು ಮರಣ ದಿನಾಂಕಗಳನ್ನು ಹಾಗೂ ಅವರ ಚೇರ್ಮನ್ ಅವಧಿಯನ್ನೂ ನಮೂದಿಸಿ ಹೆಚ್ಚಿನ ಮಾಹಿತಿಯನ್ನು ಮುಂದಿನ ಪೀಳಿಗೆಗೆ ದೊರಕಿಸುವುದು ಸೂಕ್ತ. ಬಲರಾಮೇಗೌಡರ ನಂತರ ಪಂಚಾಯಿತಿ ಅಧ್ಯಕ್ಷ ಸ್ಥಾನವನ್ನಲಂಕರಿಸಿದವರಾರೂ ಆ ಸ್ಥಾನಕ್ಕೆ ಅಷ್ಟೊಂದು ಘನತೆ-ಗೌರವ ತರಲಿಲ್ಲ ಮತ್ತು ನಂತರದ ದಿನಗಳಲ್ಲಿ ಪಂಚಾಯಿತಿ ಆಡಳಿತ ಅಧೋಗತಿಗೆ ದೌಡಾಯಿಸುವಂತಾಯಿತು ಎಂದು ಕೆಲವರು ಹೇಳಿದ್ದನ್ನು ಕೇಳಿದ್ದೇನೆ. ಈಗಿನಂತೆ ಪಂಚಾಯಿತ್ ರಾಜ್ಯ ಕಾಯಿದೆಯಿಂದಾದ ಅಧಿಕಾರ ವಿಕೇಂದ್ರೀಕರಣವಾಗಲಿ, ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ವಿವಿದ ಯೋಜನೆಗಳಾಗಲಿ, ಅನುದಾನ, ತಂತ್ರಜ್ಞಾನ ಮತ್ತಿತರ ಸಂಪನ್ಮೂಲ ಸೌಲಭ್ಯಗಳಿಲ್ಲದ ಆಕಾಲದಲ್ಲಿ (50 ವರ್ಷಗಳ ಹಿಂದೆ) ಇರಲಿಲ್ಲವಾದರೂ ಅವರ ಕೊಡುಗೆ ಸ್ಮರಣೀಯ ಮತ್ತು ಇಂದಿನವರಿಗೆ ಆದರ್ಶಪ್ರಾಯ. ಉದಾಹರಣೆಗೆ ಇಂದು ಒಂದೇ ವರ್ಷದಲ್ಲಿ (2010-11) ಒಂದು ಯೋಜನೆಯಡಿ ಸುಮಾರು 21 ಲಕ್ಷ ರೂಪಾಯಿಗಳು ವ್ಯಯವಾಗಿರುವುದನ್ನು ಗಮನಿಸಬಹುದು.

ಶ್ರೀ ಬಲರಾಮೇಗೌಡರ ಆಡಳಿತಾವಧಿಯಲ್ಲಿ 1956ರಲ್ಲಿ ಮಾಧ್ಯಮಿಕ ಶಾಲಾ ಕಟ್ಟಡ ಮತ್ತು 1962ರಲ್ಲಿ ಪ್ರೌಢಶಾಲಾ ಕಟ್ಟಡಗಳನ್ನು ನಿರ್ಮಿಸಲಾಯಿತು. ಮಾನ್ಯ ಬಲರಾಮೇಗೌಡರು ಸ್ವಂತ ಖರ್ಚಿನಿಂದ ಅಕಾಲ ಮರಣಕ್ಕೆ ತುತ್ತಾದ ತಮ್ಮ ಮಗ ಶ್ರೀ ಜಯರಾಮ್ ಅವರ ನೆನಪಿನಲ್ಲಿ 50ರ ದಶಕದಲ್ಲಿಯೇ ಕಾಣಿಕೆಯಾಗಿ ಕಟ್ಟಿಸಿದ ಬಾಲಕಿಯರ ಪ್ರಾಥಮಿಕ ಶಾಲೆ ಕಟ್ಟಡ ಮುಂದೆ ತಾತ್ಕಾಲಿಕವಾಗಿ 1958ರಿಂದ 1962ರ ವರೆವಿಗೆ ಸರ್ಕಾರಿ ಪ್ರೌಢಶಾಲೆಯಾಗಿಯೂ ಬಳಕೆಯಾಯಿತಲ್ಲದೆ ಈಗ 2007ರಿಂದ ಕೆಲ ವರ್ಷಗಳು ಸರ್ಕಾರಿ ಪಾಲಿಟೆಕ್ನಿಕ್ ಆಗಿಯೂ ಬಳಕೆಯಾಯಿತು. ಊರಿಗೆ ಸರ್ಕಾರಿ ಪ್ರೌಢಶಾಲೆ ತಂದು, ಪರಊರಿನ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಉಳ್ಳವರ ಮನೆಗಳಲ್ಲಿ ಪುಕ್ಕಟೆ ವಸತಿ ಮತ್ತು ಊಟದ ವ್ಯವಸ್ಥೆ ಮಾಡಿ, ನಂತರದ ದಿನಗಳಲ್ಲಿ ಒಂದು ಸಾರ್ವಜನಿಕ ವಿಧ್ಯಾರ್ಥಿನಿಲಯ ಸ್ಥಾಪಿಸಿದ ಹೆಗ್ಗಳಿಕೆ ಅವರದು.

ಇಂದು ಮಿರ್ಲೆಯಲ್ಲಿ ಖಾಸಗಿ ಶಾಲೆಗಳೂ ಸೇರಿದಂತೆ ನಾಲ್ಕಾರು ಶಾಲೆಗಳಿವೆ ಮತ್ತು ಮಕ್ಕಳು ನಗರದ ಶಾಲಾ ಮಕ್ಕಳಂತೆ ಸಮವಸ್ತ್ರ ಧರಿಸಿ ಓಡಾಡುವುದನ್ನು ಕಾಣಬಹುದು. ಆದರೆ ಕೂಲಿ ಮಠದಿಂದ ಸರ್ಕಾರೀ ಶಾಲೆಗೆ ಬಡ್ತಿ ಪಡೆಯಬೇಕಿದ್ದ 60 ವರ್ಷಗಳ ಹಿಂದಿನ ಶಿಕ್ಷಣ ಸ್ಥಿತಿಯೇ ಬೇರೆ ಇತ್ತು. ಸರ್ಕಾರಿ ಶಾಲೆ ಆರಂಭವಾಗದ ಮುನ್ನ ಹಲವಾರು ವರ್ಷಗಳು ಕೂಲಿ ಮಠಗಳಿದ್ದವು ಮತ್ತು ನಂತರದ ದಿನಗಳಲ್ಲಿ ಪ್ರೌಡಶಾಲಾ ವಿದ್ಯಾಬ್ಯಾಸಕ್ಕಾಗಿ ಪರ ಊರಿಗೆ ಹೋಗಬೇಕಿದ್ದ ಕಾಲವದು.  ಸರ್ಕಾರಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಿದ್ದಾಗಲೇ 1950ರ ದಶಕದಲ್ಲಿ ವಿನೋಬ ರಸ್ತೆಯ ಒಂದು ಮನೆಯ ದೊಡ್ಡ ಜಗುಲಿಯಮೇಲೆ ಕೂಲಿ ಮಠವೊಂದಿತ್ತು. ಶ್ರೀ ಬಲರಾಮೇಗೌಡರ ಕಾಲದಲ್ಲಿ ಕೆರೆ ನೀರನ್ನು ಸ್ವಚ್ಛವಾಗಿಡಲು ವಿಶೇಷವಾಗಿ ಬೇಸಿಗೆಯಲ್ಲಿ ಕಾವಲಿಟ್ಟು ಕಟ್ಟೆಚ್ಚರ ವಹಿಸಲಾಗಿತ್ತು. ಮಿರ್ಲೆ ಕೆರೆ ಸದಾ ಕಾಲ ಸ್ವಚ್ಛ ಹಾಗೂ ಸಮ್ರೃದ್ಧ ನೀರು ಮತ್ತು ತಾವರೆ ಹೂವುಗಳಿಂದ ತುಂಬಿರುತ್ತಿತ್ತು. ನೋವಿನ ಸಂಗತಿ ಎಂದರೆ, ಇಂದು ಕೆರೆಯ ನೀರನ್ನು ಉಪಯೋಗಿಸಲಾಗದ ಸ್ಥಿತಿ ತಲುಪಿದ್ದೇವೆ.

ಶಿಕ್ಷಣ, ಆರೋಗ್ಯ, ಗ್ರಾಮನೈರ್ಮಲ್ಯಗಳಿಗಾಗಿ ಶ್ರಮಿಸಿದ ಒಂದು ಸಾದಾರಣ ಗ್ರಾಮದ

ಪುಟ್ಟ ರಾಜಕೀಯ ನಾಯಕನಾಗಿಯೂ ಸಮಾಜದ ಒಳಿತಿಗಾಗಿ ಸದಾ ಸ್ಪಂದಿಸಿದವರು ಬಲರಮೇಗೌಡರು. ಮುಂದಿನ ದಶಕಗಳಲ್ಲಿ ಕರ್ತವ್ಯಲೋಪ, ಸ್ವಜನ ಪಕ್ಷಪಾತ, ಅಧಿಕಾರ ದುರುಪಯೋಗ ಮತ್ತು ಭ್ರಷ್ಟಾಚಾರ ಗ್ರಾಮಾಂತರ ಪ್ರದೇಶದಲ್ಲೂ ವಿಪುಲವಾಗಿ ವ್ಯಾಪಿಸಿ ಈಗ ಸರ್ಕಾರದ ಯೋಜನೆಯಡಿಯಲ್ಲಿ ಸಾರ್ವಜನಿಕ ಹಣದಿಂದಲೇ ನಡೆದ ಕಾರ್ಯ, ಕಾಮಗಾರಿಗಳನ್ನೂ (ದೇವಸ್ಥಾನ ಜೀರ್ಣೋದ್ಧಾರ, ವಿಧ್ಯಾರ್ಥಿನಿಲಯ, ಶಾಲೆ, ಅಸ್ಪತ್ರೆ ರಿಪೇರಿ/ ನವೀಕರಣ/ ವಿಸ್ತರಣೆ ಇತ್ಯಾದಿಗಳನ್ನು) ಅದು ತಮ್ಮ ಕೊಡುಗೆಯೆಂದೇ ಡಂಗೂರ ಸಾರುವ ಪುಡಿ ರಾಜಕಾರಣಿಗಳಿರುವಾಗ ಬಲರಾಮೇಗೌಡರು ಒಬ್ಬ ಅಪರೂಪದ ಆದರ್ಶಪ್ರಾಯ ಜನನಾಯಕರಾಗಿ ನಿಲ್ಲುತ್ತಾರೆ.



## *ಮಿರ್ಲೆ ರಸ್ತೆಗಳಿಗೆ ರಾಷ್ಟ್ರನಾಯಕರುಗಳ ಹೆಸರು!*




ಸುಮಾರು 70 ವರ್ಷಗಳ ಹಿಂದೆ 50ರ ದಶಕದಲ್ಲೇ ಮಿರ್ಲೆಯ ಬೀದಿಗಳಿಗೆ ಗಾಂಧಿ, ಕಸ್ತುರ್ ಬಾ, ವಿನೊಬಾ, ವಿವೇಕಾನಂದ, ನೆಹರು, ಇತ್ಯಾದಿ ಸ್ವಾತಂತ್ರ್ಯಪೂರ್ವ ರಾಷ್ಟ್ರನಾಯಕರುಗಳ ಹೆಸರಿನ್ನಿರಿಸಿ ಕಡಪ ಕಲ್ಲಿನ ನಾಮಫಲಕಗಳನ್ನು ಕೆತ್ತಿಸಿ ಪ್ರತಿಷ್ಠಾಪಿಸಿದ ಕೀರ್ತಿ ಬಹಳ ಕಾಲ ಮಿರ್ಲೆ ಪಂಚಾಯಿತಿ ಅಧ್ಯಕ್ಷರಾಗಿದ್ದ ಹೊಸಹಟ್ಟಿ ಬಲರಾಮೇಗೌಡರಿಗೆ ಸಲ್ಲಬೇಕು. ಅವರ ಕಾಲದಲ್ಲೇ ಪಂಚಾಯಿತಿಗೆ ಸ್ವಂತ ಕಟ್ಟಡ ಮತ್ತು ಪಂಚಾಯಿತಿ ಮುಂಭಾಗದ ವೃತ್ತದಲ್ಲಿ ಒಂದು ಅಶೋಕ ಸ್ಥಂಭವನ್ನೂ ನಿರ್ಮಿಸಲಾಯಿತು. ಜನಾನುರಾಗಿ, ಧಕ್ಷ ಹಾಗೂ ನಿಸ್ಪೃಹ ನಾಯಕನಾಗಿ ಮಿರ್ಲೆ ಗ್ರಾಮದ ಅಭಿವೃದ್ಧಿಗೆ ಇವರ ಕಾಣಿಕೆ ಸ್ಮರಣೀಯ.

---

*ಪ್ರತಿಕ್ರಿಯೆ:*

**Manjunath Mirle:** It was all done by under the supervision of Mirle Srinivasmurthy . He  was the vice president at that time.

---

## ಮಿರ್ಲೆ ಹೋಬಳಿಗೆ ಸೇರಿದ ಕಂದಾಯ ಗ್ರಾಮ/ ಉಪಗ್ರಾಮಗಳು:

1. ಅಲಲಕುಪ್ಪೆ
2. ಕಟ್ಣಾಳು
3. ಕುಚೇನಹಳ್ಳಿಬಿ
4. ಕುಪ್ಪಹಳ್ಳಿ
5. ಕುರುಬಹಳ್ಳಿ
6. ಕೆಂಚನಹಳ್ಳಿ
7. ಕೊಡಿಯಾಲ
8. ತಂಡ್ರೆ, ತಂಡ್ರೆಕೊಪ್ಪಲು ೧ ಮತ್ತು ೨
9. ತಂಡ್ರೆಅಂಕನಹಳ್ಳಿ
10. ನರಚನಹಳ್ಳಿ
11. ನಾಟನಹಳ್ಳಿ
12. ಬಾಚಹಳ್ಳಿ
13. ಬಾಚಹಳ್ಳಿಕೊಪ್ಪಲು
14. ಬೀಚನಹಳ್ಳಿ
15. ಬೀಚನಹಳ್ಳಿಕೊಪ್ಪಲು
16. ಮಿರ್ಲೆಕುಪ್ಪೆಬೋರೆ
17. ಮುದಿಗುಪ್ಪೆ
18. ಮೇಲೂರು
19. ಯಲೆಮುದ್ದನಹಳ್ಳಿ
20. ಶ್ಯಾಬಾಲು
21. ಸಂಕನಹಳ್ಳಿ
22. ಹನುಮನಹಳ್ಳಿ
23. ಹಳೇಮಿರ್ಲೆ
24. ಹಳೇಮಿರ್ಲೆ ವಡ್ಡರ ಕೊಪ್ಪಲು

25.ಹುಲ್ಲೆಬೋರೆಕೊಪ್ಪಲು

## *ಮಿರ್ಲೆಯಲ್ಲಿ ಮುಖ್ಯಮಂತ್ರಿಗಳು:*

ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ನಿಜಲಿಂಗಪ್ಪನವರು 4ನೇ ಡಿಶಂಬರ್ 1965 ರಂದು ಮಿರ್ಲೆ ಸಾರ್ವಜನಿಕರನ್ನುದ್ದೇಶಿಸಿ ಬಾಷಣ ಮಾಡಿದ್ದರು. ಅದು ಚುನಾವಣೆ ಪ್ರಚಾರವಲ್ಲ, ಪಂಚಾಯಿತಿ ಕಟ್ಟಡ ಉಧ್ಘಾಟನೆ ಸಂದರ್ಭ. ಮುಂದಿನ ಈ 48 ವರ್ಷಗಳಲ್ಲಿ ಮುಖ್ಯಮಂತ್ರಿಗಳು, ಮಂತ್ರಿಗಳು, ಸಂಸದರು ಮತ್ತು ಶಾಸಕರು ಚುನಾವಣೆ ಪ್ರಚಾರ ಹಾಗೂ ಖಾಸಗಿ ಭೇಟಿ (ಆಪ್ತರ ಮನೆಗಳಲ್ಲಿ ಮದುವೆ, ಔತಣ, ಇತ್ಯಾದಿ ಸಮಾರಂಭ) ಹೊರತು ಪಡಿಸಿ  ಊರಿಗೆ ಭೇಟಿ ನೀಡಿ ಹೀಗೆ ಸಾರ್ವಜನಿಕರಿಗೆ ವರ್ಷಕ್ಕೆ ಎಷ್ಟು ಬಾರಿ ನೇರ ಸಂಪರ್ಕ ಕಲ್ಪಿಸಿರಬಹುದು ಎಂಬುದು ನನ್ನ ಕುತೂಹಲದ ಪ್ರಶ್ನೆ. ಹೆಚ್ಚೆಂದರೆ ಶಾಸಕರು 2ನೇ ಹಂತದ ರಾಜಕಾರಣಿಗಳ/ ಹಿಂಬಾಲಕರ ಮನೆಗೆ ಖಾಸಗಿಯಾಗಿ ಭೇಟಿ ನೀಡುತ್ತಿದ್ದರು. ಶ್ರೀ ಪ್ರಶಾಂತ್ ಅವರು ಪ್ರತಿಕ್ರಿಯಿಸಿ ಮುಂದಿನ ದಶಕಗಳಲ್ಲಿ ನೀರಿನ ಟ್ಯಾಂಕ್ ಉದ್ಘಾಟನೆಗಾಗಿ ಶ್ರೀ ದೇವರಾಜ್ ಅರಸು ಅವರು ಮತ್ತು ಕಾವೇರಿ ನೀರಿನ ಸಂಪರ್ಕದ ಉದ್ಘಾಟನೆಗಾಗಿ ಶ್ರೀ  ಕುಮಾರಸ್ವಾಮಿ ಅವರು ಗ್ರಾಮಕ್ಕೆ ಭೇಟಿ ನೀಡಿದ್ದರು ಎನ್ನುವ ಮಾಹಿತಿ ತಿಳಿಸಿದ್ದಾರೆ.



## *ಮಿರ್ಲೆಯ 'ಗ್ರಾಮ ಸಭೆ" ಕ್ರಮವಾಗಿ ಕಾಲಕಾಲಕ್ಕೆ ನಡೆಯುತ್ತಿದೆಯೆ?*

ಗ್ರಾಮದ ಎಲ್ಲಾ ಮತದಾರರೂ ಸಕ್ರಿಯವಾಗಿ ಭಾಗವಹಿಸಲು ಅವಕಾಶವಿರುವ ಗ್ರಾಮ ಸಭೆಗಳ ಚಿತ್ರಗಳನ್ನು ಪತ್ರಿಕೆಗಳಲ್ಲಿ ಯತೇಚ್ಛವಾಗಿ ಕಾಣಬಹುದಾದರೆ ಅದು ತಮಿಳುನಾಡು ಮತ್ತು ಕೇರಳದ 'ಗ್ರಾಮಸಭೆ'ಗಳು. ಕೆಲವೆಡೆ ಮಕ್ಕಳ ಗ್ರಾಮಸಭೆಗಳನ್ನೂ ನಡೆಸುತ್ತಿದ್ದಾರೆ. Abdul Nazir Sab State Institute of Rural Development (Government of Karnataka) ನಡೆಸಿದ ವಿಚಾರ ಸಂಕಿರಣವೊಂದರಲ್ಲಿ (2010) ಬಹುತೇಕ ಪ್ರಭಂದಗಳು ತಮಿಳು ನಾಡು, ಕೇರಳ, ಆಂದ್ರಪ್ರದೇಶ ಮತ್ತು ಪಶ್ಚಿಮ ಬಂಗಾಳದವು. ಎರಡು ಕರ್ನಾಟಕದಿಂದ ಮಂಡಿಸಲ್ಪಟ್ಟ ಪ್ರಭಂದಗಳು: ೧. ವಿಲ್ ಫ್ರೆಡ್ ಡಿ'ಸೋಜ ಅವರ " ಯೋಜನಾ ಪ್ರಕ್ರಿಯೆಯಲ್ಲಿ ಗ್ರಾಮ ಸಭೆಗಳ ಪಾತ್ರ' ಮತ್ತು ೨. Grama Sabha experience in

four districts of Karnataka state by Sundar Naik K. ಕರ್ನಾಟಕದ ಪ್ರಬಂಧಗಳನ್ನು ಅವಲೋಕಿಸಿದರೆ ದಕ್ಷಿಣ ಕನ್ನಡದ ಗ್ರಾಮಸಭೆಗಳನ್ನು ಹೊರತು ಪಡಿಸಿ ಮಿಕ್ಕೆಡೆ ಈ ಸಭೆಗಳನ್ನು ಕ್ರಮವಾಗಿ ನಡೆಸುತ್ತಿಲ್ಲ ಮತ್ತು ನಡೆಸಿದಾಗಲೂ ಹಾಜರಾತಿ ಬಹಳ ಕಡಿಮೆ ಎಂದು ತಿಳಿಯುತ್ತದೆ. ಕೇರಳದಲ್ಲಿ ಮಾತ್ರ ತಳಹಂತದಿಂದ ಜನರ ಸಹಭಾಗತ್ವದ ಮೂಲಕ ಅಭಿವೃದ್ಧಿ ಯೋಜನೆಗಳನ್ನು ರೂಪಿಸುವ ಪ್ರಯತ್ನವನ್ನು ಗಂಭೀರವಾಗಿ ಮಾಡಲಾಗುತ್ತಿದೆ. ಹಾಗಾಗಿ ಪಂಚಾಯಿತ್ ರಾಜ್ಯ ಮಸೂದೆಯನ್ನು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತಂದ ಏಕೈಕ ರಾಜ್ಯ ಕೇರಳ ಎನ್ನಲಾಗಿದೆ. ಕರ್ನಾಟಕದಲ್ಲಿ ಹತ್ತನೇ ಪಂಚವಾರ್ಷಿಕ ಯೋಜನೆಯಲ್ಲಿ ಕೈಕೊಂಡ ನಿರ್ಧಾರಗಳು ಸುತ್ತೋಲೆಗಳಲ್ಲಿ ಮಾತ್ರ ಉಳಿದುಕೊಂಡುವು ಎನ್ನಲಾಗಿದೆ!

ಮಿರ್ಲೆಯ ವಿಧ್ಯಾವಂತ ತರುಣರು ಪಂಚಾಯಿತಿ ಸದಸ್ಯರಾಗುವುದು (ಶೀಘ್ರದಲ್ಲೇ ಚುನಾವಣೆ ಬರಲಿದೆ!) ಅಥವ ಗ್ರಾಮಸಭೆಗಳಲ್ಲಿ ತಪ್ಪದೆ ಭಾಗವಹಿಸುವುದು ಬದಾಲಾವಣೆಯತ್ತ ಇಡುವ ಮೊದಲ ಹೆಜ್ಜೆಯಾದೀತು.

## 'ಮಿರ್ಲೆಯ ಗತ ವೈಭವ' ನೆನೆದು, "ನಮ್ಮ ಊರು ನಮ್ಮ ಹೆಮ್ಮೆ' ಎಂದು ಹೇಳಿ ಖುಷಿಪಡುವುದು ಸ್ವಾಭಾವಿಕ, ಆದರೆ ಕಳೆದ ಒಂದು ಶತಮಾನದ ಮಿರ್ಲೆಯ ಅಭಿವೃದ್ಧಿ?

ಪ್ರವಾಸೋಧ್ಯಮ, ಕೈಗಾರಿಕೋಧ್ಯಮ, ವಾಣಿಜ್ಯೋಧ್ಯಮಗಳ ಅಧ್ಯಾಯವನ್ನು ಎಷ್ಟೇ ಧನಾತ್ಮಕ ಧೃಷ್ಟಿಯಿಂದ ಅವಲೋಕಿಸಿದರೂ ಕಳೆದ ಒಂದು ಶತಮಾನದ ಮಿರ್ಲೆಯ ಬೆಳವಣಿಗೆ ಅಷ್ಟು ತೃಪ್ತಿಕರವಾಗಿಲ್ಲ ಎನ್ನುವುದು ಸ್ಪಷ್ಟ. ಮಿರ್ಲೆಯ ಪ್ರವಾಸೋಧ್ಯಮ ಮತ್ತು ಕೈಗಾರಿಕೋಧ್ಯಮಗಳು (ಏಳೆಂಟು ತಾತ್ಕಾಲಿಕ ಆಲೆಮನೆಗಳಲ್ಲಿ ತಯರಿಸುತ್ತಿದ್ದ ಬೆಲ್ಲ ಹೊರತು ಪಡಿಸಿದರೆ) ಬಹುತೇಕ ಶೂನ್ಯ, ಸಾಧ್ಯತೆಗಳನ್ನ ಚರ್ಚಿಸಬಹುದಷ್ಟೆ, ಸಾಧನೆಗಳನ್ನಲ್ಲ. ವಾಣಿಜ್ಯೋಧ್ಯಮ, ಮಿರ್ಲೆಯವರ, ಹೆಚ್ಚೆಂದರೆ ಹೋಬಳಿಯವರ, ಬಳಕೆಗೆ ಇದೆಯೇ ಹೊರತು, ಸಾಲಿಗ್ರಾಮದಂತೆ ಹೊರಗಿನವರನ್ನು ಆಕರ್ಷಿಸುವಷ್ಟು

ಬೆಳೆಯಲಿಲ್ಲ, ವಾಣಿಜ್ಯೋಧ್ಯಮ ಕೇಂದ್ರವಾಗಲಿಲ್ಲ. ಇವೆಲ್ಲವೂ ಮಿರ್ಲೆಯಲ್ಲಿ ಇಪ್ಪತ್ತನೇ ಶತಮಾನದಲ್ಲಿ ಕಂಡು ಬಂದ ರಾಜಕೀಯ ಇಚ್ಛಾಶಕ್ತಿ ಮತ್ತು ನಾಯಕತ್ವದ ಶೂನ್ಯತೆಯನ್ನು ಪ್ರತಿಬಿಂಬಿಸುತ್ತವೆ.

| ವರ್ಷ | ವಿಧಾನ ಸಭೆಗೆ ಆಯ್ಕೆಯಾದವರು | ಊರು |
|---|---|---|
| 1952 | ಎಸ್. ಹೆಚ್. ತಿಮ್ಮಯ್ಯ | ಸಾಲಿಗ್ರಾಮ |
| 1957 | ಹೆಚ್. ಎಂ. ಚನ್ನಬಸಪ್ಪ | ಹರಳಹಳ್ಳಿ (ಪಿರಿಯಾಪಟ್ಟಣ) |
| 1962 | ಕೆ. ಎಸ್. ಗೌಡಯ್ಯ | ಕೆ.ಆರ್. ನಗರ |
| 1967 | ಎಂ. ಬಸವರಾಜು | ಗಂಧನಹಳ್ಳಿ |
| 1972 | ಹೆಚ್. ಬಿ. ಕೆಂಚೇಗೌಡ | ಕೆಂಚನ ಹಳ್ಳಿ ? |
| 1978 | ಹೆಚ್. ವಿಶ್ವನಾಥ್ | ಆಡಗೂರು |
| 1983 | ಎಸ್. ನಂಜಪ್ಪ | ಕೆ.ಆರ್. ನಗರ |
| 1985 | ಎಸ್. ನಂಜಪ್ಪ | ಕೆ.ಆರ್. ನಗರ |
| 1989 | ಹೆಚ್. ವಿಶ್ವನಾಥ್ | ಆಡಗೂರು |
| 1994 | ಎಸ್. ನಂಜಪ್ಪ | ಕೆ.ಆರ್. ನಗರ |
| 1999 | ಹೆಚ್. ವಿಶ್ವನಾಥ್ | ಆಡಗೂರು |
| 2004 | ಮಹದೇವ | ಮಂಚನಹಳ್ಳಿ |
| 2008 | ಎಸ್. ಆರ್. ಮಹೇಶ್ | ಸಾಲಿಗ್ರಾಮ |
| 2013 | ಎಸ್. ಆರ್. ಮಹೇಶ್ | ಸಾಲಿಗ್ರಾಮ |
| 2019 | ಎಸ್. ಆರ್. ಮಹೇಶ್ | ಸಾಲಿಗ್ರಾಮ |

ಮೈಸೂರು ಸಂಸ್ಥಾನದ ಸೀಮಿತ ಪ್ರಜಾಪಭುತ್ವ ವ್ಯವಸ್ಥೆಯಾಗಿ 1881 ರಲ್ಲಿ ಆರಂಭಗೊಂಡ ಪ್ರಜಾಪ್ರತಿನಿಧಿಸಭೆಗೆ ಮಿರ್ಲೆ ರಾಮೇಗೌಡರು, ಮುಂದೆ 1897ರಲ್ಲಿ ಮಿರ್ಲೆ ಸುಬ್ಬರಾವ್ ಆಯ್ಕೆಯಾಗಿದ್ದರೂ, ಸ್ವಾತಂತ್ರ್ಯಾನಂತರ ಮಿರ್ಲೆಯಿಂದ ಯಾರೂ ಸಚಿವರಾಗಲಿ ಅಥವ ಲೋಕಸಭಾ ಸದಸ್ಯರಾಗುವುದಿರಲಿ ವಿಧಾನಸಭೆಗೂ ಕಳೆದ 70 ವರ್ಷಗಳಲ್ಲಿ ಆಯ್ಕೆಯಾಗಲಿಲ್ಲ. ಸ್ಪರ್ಧಿಸಲೂ ಇಲ್ಲ ಎಂಬುದು ದುರಧೃಷ್ಟಕರ (2004ರಲ್ಲಿ ಶ್ರೀ **ಶ್ರೀನಿವಾಸಗೌಡರು**

ಸ್ಪರ್ಧಿಸಿದ್ದರು ಎಂದು ಶ್ರೀ ಪ್ರಶಾಂತ್ ಪ್ರತಿಕ್ರಿಯೆಯಲ್ಲಿ ತಿಳಿಸಿದ್ದರೆ). ಇದುವರೆಗಿನ ವಿಧಾನ ಸಭೆ ಚುಣಾವಣೆಯಲ್ಲಿ ಕೆ.ಆರ್. ನಗರ ನಾಲ್ಕು ಭಾರಿ, ಅಡಗೂರು ಮೂರು ಭಾರಿ, ಸಾಲಿಗ್ರಾಮ ಮೂರು ಭಾರಿ, ಗಂಧನಹಳ್ಳಿ, ಮಂಚನಹಳ್ಳಿ, ಶ್ರೀ H B ಕೆಂಚೇಗೌಡರ ಊರು (ಕೆಂಚನ ಹಳ್ಳಿ?), ಹಾಗೂ ತಾಲ್ಲೂಕಿನ ಹೊರಗಿನ ಹರಳಹಳ್ಳಿ (ಪಿರಿಯಾಪಟ್ಟಣ) ತಲಾ ಒಮ್ಮೆ ತಾಲ್ಲೂಕಿನ ಪ್ರತಿನಿಧಿಗಳನ್ನ ವಿಧಾನ ಸಭೆಗೆ ಕಳಿಸಿವೆ. ಮಿರ್ಲೆಯ ಸ್ಥಳೀಯ ನಾಯಕರೆಲ್ಲರೂ ತಮ್ಮ ಕಾರ್ಯ ಕ್ಷೇತ್ರವನ್ನು ಪಂಚಾಯಿತಿ ಮತ್ತು ತಾಲ್ಲೂಕು ಬೋರ್ಡ ಮಟ್ಟಕ್ಕೇ ಸೀಮಿತ ಗೊಳಿಸಿ ಪಕ್ಷದ ವಿಧಾನಸಭಾ ಸದಸ್ಯರ ಹಿಂಬಾಲಕರಾಗುವುದರಲ್ಲೇ ತೃಪ್ತಿ ಹೊಂದಿದರು ಎನ್ನುವುದು ಕಹಿ-ಕಟು-ಅಪ್ರಿಯ ಸತ್ಯ. ಯಾವುದೋ ಊರಿನ ಮನೆದೇವರ ದೇವಸ್ಥಾನದ ಜೀರ್ಣೋದ್ಧಾರಕ್ಕೋ, ತಾಲ್ಲೂಕು ಕೇಂದ್ರದಲ್ಲಿ ಸ್ವಜಾತೀಯ ಅದ್ದೂರಿ ಛತ್ರ ನಿರ್ಮಾಣಕ್ಕೋ ತಂಡ ಕಟ್ಟಿಕೊಂಡು ವಂತಿಗೆ ಸಂಗ್ರಹಿಸುವಷ್ಟಕ್ಕೆ ಸಿಮಿತರಾದರೆ ನಮ್ಮ ನಾಯಕರು! ವಸ್ತುಸ್ಥಿತಿ ಹೀಗಿರುವಾಗ ಮಿರ್ಲೆಯ ಅಭಿವೃದ್ಧಿ ಕಾರ್ಯಗಳು ತೃಪ್ತಿಕರವಾಗಿ ನಡೆದಿಲ್ಲ ಎನ್ನುವುದಕ್ಕೆ ಬೇರೆ ಕಾರಣಗಳ ಶೋಧ ಅನವಶ್ಯಕವಲ್ಲವೆ? ಅಭಿವೃದ್ಧಿಗೆ ಒಂದು ಪರೋಕ್ಷ ಅಳತೆಗೋಲು ಶತಮಾನದ ಜನಸಂಖ್ಯೆಯ ಏರಿಕೆ. ಜನಗಣತಿಯಂತೆ 1876 ರಲ್ಲಿ ತಾಲ್ಲೂಕಿನಲ್ಲಿ ಅತ್ಯಂತ ಹೆಚ್ಚು ಜನಸಂಖ್ಯೆ ಇದ್ದ ಊರು ಸಾಲಿಗ್ರಾಮ (3788), ನಂತರದ ಊರು ಮಿರ್ಲೆ (2511) ಮತ್ತು ಮೂರನೆ ಸ್ಥಾನದಲಿ ಎಡತೊರೆ (2413) ಇತ್ತು. ಈಗ 2011ರ ಜನಗಣತಿಯಂತೆ ಕೆ. ಆರ್. ನಗರ, ಸಾಲಿಗ್ರಾಮ ಮತ್ತು ಮಿರ್ಲೆ ಜನಸಂಖ್ಯೆ ಕ್ರಮವಾಗಿ 35,805, 11,836 ಮತ್ತು 5,845 ಆಗಿರುತ್ತದೆ. ಅಲ್ಲದೆ ತಾಲ್ಲೂಕಿನ ಇತರ ಗ್ರಾಮಗಳಾದ ಹಳೆಯೂರು (5,700), ಕೆಸ್ತೂರು (5,642), ಹೆಬ್ಬಾಳು (4,973), ಭೇರ್ಯ (4,915), ಹಂಪಾಪುರ (4,288), ಮತ್ತು ಕುಪ್ಪೆ

| ***2011ರ*** | ***ಜನಗಣತಿ*** |
|---|---|
| ಕೆ. ಆರ್ ನಗರ | 35,805 |
| ಸಾಲಿಗ್ರಾಮ | 11,836 |
| ಮಿರ್ಲೆ | 5,845 |
| ಹಳೆಯೂರು | 5,700 |
| ಕೆಸ್ತೂರು | 5,642 |
| ಹೆಬ್ಬಾಳು | 4,973 |
| ಭೇರ್ಯ | 4,915 |
| ಹಂಪಾಪುರ | 4,288 |
| ಕುಪ್ಪೆ | 4,363 |

(4,363) ಗ್ರಾಮಗಳು ಮಿರ್ಲೆಗೆ ಸರಿಸಾಟಿಯಾಗುವಷ್ಟು ಒಂದು ಶತಮಾನದಲ್ಲಿ ಬೆಳೆದಿವೆ. ಸ್ವಾತಂತ್ರ್ಯ ಸಂಗ್ರಾಮದ ಯಾವುದೇ ಹಂತದಲ್ಲಿ ಮಿರ್ಲೆಯವರು ಭಾಗಿಯಾಗದಿರುವುದು ಸೂಕ್ತ, ಸಮರ್ಥ ನಾಯಕತ್ವದ ಬೀಜಾಂಕುರಕ್ಕೆ ಒಂದು ಕೊರತೆಯಾಯಿತೆ?

------------------------------------------------------------------------

*ಪ್ರತಿಕ್ರಿಯೆಗಳು:*

**ಪ್ರಶಾಂತ್:** ಮಾನ್ಯರೇ, ನಿಮ್ಮ ಸಂದೇಶ ಸಾಕಷ್ಟು ವಾಸ್ತವದಿಂದ ಕೂಡಿದೆ. ಇಂದಿಗೂ ನಮ್ಮ ಸಮಾಜದಲ್ಲಿ ಅಂತಹ ಪ್ರಬಲ ನಾಯಕತ್ವವನ್ನು ರೂಢಿಸಿಕೊಳ್ಳದಿರುವುದು ಬೇಸರದ ಸಂಗತಿ. ಕೆಲವು ಸನ್ನಿವೇಷಗಳಲ್ಲಿ ಸಂದರ್ಭಿಕವಾಗಿ ಹೊರಹೊಮ್ಮಿರುವ ಕೆಲವು (ರಾಜಕೀಯ) ನಾಯಕರುಗಳು ಜನರ ಸಹಕಾರ ಪಡೆಯುವುದರಲ್ಲಿ ವಿಫಲರಾಗಿರುವುದು ವಾಸ್ತವ. ತಮಾಷೆಗೆ ಮಾತಾಡುವುದಾದರೆ 'ನಮ್ ಮಿರ್ಲೆಯಲ್ಲಿ ಸ್ವಲ್ಪ ತಲೆ ಪ್ರತಿಷ್ಠೆಗಳು ಜಾಸ್ತಿನೆ ಸಿಕ್ತಾರೆ ಮತ್ತೆ ಪ್ರಪಂಚದ ಎಲ್ಲಾ ವಿಷಯ ತಿಳಿದವರ ರೀತಿ ವರ್ತಿಸುವವರು ನಮ್ಮಲ್ಲಿ ಹೆಚ್ಚಾಗಿ ಸಿಕ್ತಾರೆ' ಅನ್ನುವುದೇ ನನ್ನ ಭಾವನೆ. ಅಂದಹಾಗೆ, ನನಗೆ ಇರುವ ಮಾಹಿತಿ ಪ್ರಕಾರ **೨೦೦೪ನೇ ಇಸವಿಯಲ್ಲಿ ಬಿ.ಜೆ.ಪಿ ಪಕ್ಷದಿಂದ ಮಿರ್ಲೆ ಶ್ರೀನಿವಾಸಗೌಡರು ನಮ್ಮ ವಿಧಾನಸಭಾ ಕ್ಷೇತ್ರಕ್ಕೆ ಸ್ವರ್ಧಿಸಿದ್ದರು**. ತದನಂತರ ವಿಧಾನ ಪರಿಷತ್ತಿನ ಮೈಸೂರು ವಿಭಾದ ಪದವೀಧರರ ಕ್ಷೇತ್ರದಿಂದ ಮಿರ್ಲೆ ರಾಮಸ್ವಾಮಿ ಸ್ವರ್ಧಿಸ ಬಯಸಿದ್ದರು ನಂತರದ ಬದಲಾವಣೆಯಲ್ಲಿ ನಾಮಪತ್ರ ಹಿಂಪಡೆದರು (ಇವರ ನಡೆ ಹಾಸ್ಯಾಸ್ಪದಕ್ಕೆ ಎಡೆಮಾಡಿಕೊಟ್ಟಿತ್ತು ಎಂದರೆ ಸರಿ). ಪ್ರಸ್ತುತ ಮೈಸೂರು ಜಿಲ್ಲಾ ಪಂಚಾಯತಿಗೆ ನಮ್ಮೂರಿನವರೇ ಆದ ಶ್ರೀಮತಿ. ಕಲ್ಪನ ಧನಂಜಯರವರು ಆಯ್ಕೆಯಾಗಿರುತ್ತಾರೆ. ಈ ಅವಕಾಶವು ಸಹಾ ೧೯೯೧ರಲ್ಲಿ ಮಾನ್ಯ (ಉರಿಯಪ್ಪ) ಕ್ರಿಷ್ಣೇಗೌಡ ಆಯ್ಕೆ ಹೊರತು ಪಡಿಸಿ ೨೦ ವರ್ಷಗಳ ನಂತರ ಈ ಅವಧಿಯಲ್ಲಿ ಸಾಧ್ಯವಾಗಿದೆ.

**ಅನಿಲ್ ಕುಮಾರ್:** Now it is the high time that all of us Join together and collectively we can bring the Change..It is good to see the Younger generation of our village are doing great in different fields. All of us can share their ideas which can be implemented in our village to bring back the old glory. Definetly it is possible if we all work together for one cause.. Most of our people are good hearted, innocent and intelligent only some people need little education in correcting their mistake and it is possible. Together we can make difference -

**Mirle Surappa:** It is very sad that we have not been able to send even one legislature in the last 70 years

-----------------------------------------------------------------------

## ಅಮುಲ್ದಾರರ ಧೃಷ್ಟಿಯಲ್ಲಿ ತಾಲ್ಲೂಕಿನ ಮುಖಂಡರ ಗುಣಲಕ್ಷಣಗಳು

ಎಡತೊರೆ ಮತ್ತು ಟಿ ನರಸೀಪುರ ತಾಲ್ಲೂಕುಗಳಲ್ಲಿ ನೂರು ವರ್ಷಕ್ಕೂ ಹಿಂದೆ ಅಮುಲ್ದಾರರಾಗಿ ಸೇವೆ ಸಲ್ಲಿಸಿದ ಶ್ರೀಮಾನ್ ನ. ರಾಮರಾವ್ ಅವರು ತಮ್ಮ ಅನುಭವದಿಂದ ಎರಡೂ ತಾಲ್ಲೂಕ್ಕಿನ ಮುಖಂಡರುಗಳಲ್ಲಿನ ಒಂದು ದೊಡ್ಡ ವ್ಯತ್ಯಾಸವನ್ನು ಹೀಗೆ ಗುರುತಿಸುತ್ತಾರೆ: ಎಡತೊರೆಯವರು [ಹೆಚ್ಚಿನವರು ಒಕ್ಕಲಿಗರು] ಎದರು ಬಿದ್ದು ತಮ್ಮ ಮನೋಭಾವವನ್ನು ಬೈಲು ಮಾಡುವರು; ನರಸೀಪುರದವರು [ಹೆಚ್ಚಿನವರು ಲಿಂಗಾಯಿತರು] - ಅಧಿಕಾರಿಗಳ ಸ್ವಭಾವವನ್ನೂ, ಇಂಗಿತವನ್ನೂ ಪರೀಕ್ಷಿಸಿ ತಿಳಿದು ಅವರನ್ನು ವಶಪಡಿಸಿಕೊಳ್ಳುವುದಕ್ಕೋ, ಹಳ್ಳಕ್ಕೆ ತಳ್ಳುವುದಕ್ಕೋ, ಯತ್ನಮಾಡತಕ್ಕ ತರಲೆ ಮುಖಂಡರು. ಮುಂದುವರೆದು ಕೋಮಿನ ಹಂತಕ್ಕೆ ಹೋಗಿ ಕೊಂಚ sensitive ಅನ್ನಿಸಬಹುದಾದ observation ಮಾಡುತ್ತಾ 'ಈ ಪ್ರಾಂತ್ಯದ [ನರಸೀಪುರ] ಹೆಗ್ಗಡೆ ಗೌಡರು ಬಹಳ ಉದಾರ ಸ್ವಭಾವದವರು, ಅಭಿಮಾನದ ಜನ - ಒಕ್ಕಲಿಗರಷ್ಟು ವ್ಯವಹಾರ ಜ್ಞಾನವುಳ್ಳವರಲ್ಲ; ಲಿಂಗಾಯಿತರಷ್ಟು ದರ್ಪಿಷ್ಟರಲ್ಲ' ಎನ್ನುತ್ತಾರೆ.

## ಇಂದಿನ ಸ್ಥಳೀಯ ನಾಯಕರ ಅಭಿವೃದ್ಧಿ ಕಾರ್ಯದ ಒಂದು ಸ್ಯಾಂಪಲ್ !

(ಟಿಪ್ಪಣಿ ದಿ. 5.12.2014):

ಕೆ. ಆರ್. ನಗರದಲ್ಲಿ ಒಕ್ಕಲಿಗ ಸಮುದಾಯದ ಕಲ್ಯಾಣ ಮಂಟಪ ಸುಮಾರು ಮೂರು ಕೋಟಿ ರೂಪಾಯಿ ವೆಚ್ಚದಲ್ಲಿ ನಿರ್ಮಿಸಲಾಗುತ್ತಿದ್ದು, ಅದಕ್ಕೆ ಮಾನ್ಯ ಶಾಸಕರು ಒಂದು ಕೋಟಿ ರೂಪಾಯಿ ಅನುದಾನ ನೀಡಿದ್ದಾರೆಂದು ಹೇಳಿ ತಾಲ್ಲೂಕಿನ ಒಕ್ಕಲಿಗರಲ್ಲಿ ದೇಣಿಗೆ ಸಂಗ್ರಹಿಸುವ ತಂಡ (ತಂಡದಲ್ಲಿ ಮಿರ್ಲೆಯವರೂ ಇದ್ದಾರೆ) 10,000 ರೂಪಾಯಿಗೆ ಕಡಿಮೆ ಇಲ್ಲದಂತೆ ದೇಣಿಗೆ ನೀಡುವಂತೆ ಆಗ್ರಹಿಸುತ್ತಿದೆ. ಈ ಸಂಭಂದ ನನ್ನ ಅನಿಸಿಕೆಗಳನ್ನು

ನಿಮ್ಮೊಟ್ಟಿಗೆ ಹಂಚಿಕೊಳ್ಳುತ್ತಿದ್ದೇನೆ. ಇದು ಈ ಬಳಗದ ಚಿಂತನೆಗಾಗಿಯೇ ಹೊರತು, ಯಾರ ಕಾರ್ಯಕ್ರಮವನ್ನೂ ವಿರೋಧಿಸುವುದಕ್ಕಲ್ಲ ಎಂಬುದನ್ನು ಸ್ಪಷ್ಟಪಡಿಸಲಿಚ್ಛಿಸುತ್ತೇನೆ.

1. ಇರುವ ಅಥವ ಮುಂದೆ ನಿರ್ಮಿಸುವ ಕಲ್ಯಾಣ ಮಂಟಪಗಳನ್ನು ಎಲ್ಲ ಜಾತಿಯವರೂ ಬಳಸುವಂತಾಗಬೇಕಲ್ಲವೆ? ಈಗಾಗಲೇ ಮಠ, ಶಾಲೆ, ಹಾಸ್ಟೆಲ್, ಸಹಕಾರಿ ಬ್ಯಾಂಕ್, ಸೊಸೈಟಿ, ಇತ್ಯಾದಿ ಜಾತಿವಾರು ಆಗಿರುವುದಕ್ಕೆ ಕಲ್ಯಾಣಮಂಟಪವನ್ನೂ ಸೇರಿಸಿ ಮುಂದೆ ಜಾತೀವಾರು ಆಸ್ಪತ್ರೆ,, ಭಾವಿ, ಕೆರೆ, ಶೌಚಾಲಯ, ಸ್ಮಶಾಣ ನಿರ್ಮಾಣ ಮಾಡಬಾರದೆಂಬುದನ್ನ ಯುವ ಪೀಳಿಗೆ ಗಂಭೀರವಾಗಿ ಪರಿಗಣಿಸಬೇಕು. ಹಿಂದೆ ಮಿರ್ಲೆಯ ಹಿರಿಯರನ್ನೊಳಗೊಂಡ ತಂಡವೊಂದು ಬೇರೆ ಊರಿನಲ್ಲಿರುವ ಅವರ ವಂಶಸ್ತರ/ವಠಾರದ ಮನೆದೇವರ ದೇವಸ್ಥಾನದ ದುರಸ್ತಿಕಾರ್ಯಕ್ಕಾಗಿ ದೇಣಿಗೆ ವಸೂಲು ಮಾಡಿತ್ತು. ಈ ಸಂಬಂಧ, 1964ರಲ್ಲಿ ಮಿರ್ಲೆ ಪಂಚಾಯಿತಿಯ ನೂತನ ಕಟ್ಟಡ ಉಧ್ಘಾಟಿಸಿ, ಪಂಚಾಯಿತಿಯ ಸಾಧನೆಗಳ ವರದಿಯನ್ನಾಲಿಸಿ, ಅಂದಿನ ಮುಖ್ಯಮಂತ್ರಿ ಶ್ರಿಮಾನ್ ನಿಜಲಿಂಗಪ್ಪನವರು ದಲಿತರಿಗೆ ಪ್ರತ್ಯೇಕ ಭಾವಿ ವ್ಯವಸ್ಥೆ ಮಾಡಿದ್ದಕ್ಕೆ ಆಕ್ಷೇಪ ವ್ಯಕ್ತಪಡಿಸಿದ್ದನ್ನು ಇಲ್ಲಿ ಸ್ಮರಿಸಬಹುದು.

2. ಇಂತಹ ಕಲ್ಯಾಣ ಮಂಟಪ ಬಡವರಿಗೆ ಎಟಕುವಂತಹುದಲ್ಲ. ಬಹಳ ಮುಖ್ಯವಾಗಿ, ಗ್ರಾಮೀಣ ಪ್ರದೇಶದಲ್ಲಿ ಸರಳ ವಿವಾಹ, ಸಾಮೂಹಿಕ ವಿವಾಹ ಮತ್ತು ಮಂತ್ರಮಾಂಗಲ್ಯದಂತಹ ಮಾರ್ಗದಲ್ಲಿ ವಿವಾಹ ನಡೆಸುವಂತೆ ಪ್ರಚೋದಿಸಿ/ಒತ್ತಾಯಿಸಿ ಪ್ರಚಾರ ನೀಡಬೇಕಲ್ಲವೆ?

3. ಪ್ರತಿ ಜಾತಿಗೂ ಒಂದೊಂದು ಅದ್ಧೂರಿ ಕಲ್ಯಾಣಮಂಟಪ ನಿರ್ಮಿಸುವ ಅವಶ್ಯಕತೆ ಇದೆಯೆ? ಈ ಕಲ್ಯಾಣಮಂಟಪದ ಆಧಾಯವನ್ನು ಒಂದು ಒಕ್ಕಲಿಗರ ವಿಧ್ಯಾರ್ಥಿನಿಯರ ಹಾಸ್ಟೆಲ್ ನಡೆಸಲು ಬಳಸುವುದಾಗಿ ಸಮಜಾಯಿಷಿ ನೀಡಲಾಗಿತ್ತಿದೆ. ಇದಕ್ಕೆ ಸಧ್ಯಕ್ಕೆ ಯಾವ ಕಡ್ಡಾಯ ನಿಯಮಾವಳಿಯಿಲ್ಲ. ಇಷ್ಟು ಮೊತ್ತಕ್ಕೆ ಬರುವ ಬಡ್ಡಿಯಲ್ಲಿ ಇನ್ನಷ್ಟು ಶೈಕ್ಷಣಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾರ್ಯ ಸತತ ನಡಿಸಬಹುದಲ್ಲವೆ? ಪರ್ಯಾಯವಾಗಿ, ಕೈಗಾರಿಕೆಯಲ್ಲಿ ಹಿಂದುಳಿದಿರುವುದರಿಂದ ಒಂದು ಕೈಗಾರಿಕೆಯನ್ನಾದರೂ ಆರಂಬಿಸಬಹುದಲ್ಲವೆ?

4. ಅದ್ದೂರಿ ಕಲ್ಯಾಣಮಂಟಪಗಳನ್ನ ಖಾಸಗಿ ಉಧ್ಯಮವಾಗಿ ಅಥವ ಸಾರ್ವಜನಿಕ ಉಧ್ಯಮವಾಗಿ 10,000 ರೂಪಾಯಿಗಳ ಶೇರ್ ನೊಂದಿಗೆ ಆರಂಭಿಸಬಹುದಾಗಿದೆ. ಬಂದ ಲಾಭದಲ್ಲಿ ಒಂದು ಅಂಶವನ್ನು ವಿಧ್ಯಾರ್ಥಿನಿಯರ ಹಾಸ್ಟೆಲ್ ನಡೆಸಲು ದೇಣಿಗೆ ನೀಡಬಹುದು.

5. ಸುವರ್ಣ ಮಹೋತ್ಸವ ಆಚರಿಸಬೇಕಾದ ಮಿರ್ಲೆ ಸರ್ಕಾರಿ ಪ್ರೌಢಶಾಲೆಗೆ ಒಂದು ಸಭಾ ಭವನವಿಲ್ಲ. ಪಕ್ಕದಲ್ಲೇಹಾಸ್ಟೆಲ್ಲಿನ ಅಂಗಳದಲ್ಲಿ ಬಡವರು ಒಂದು ಸಭಾ ಭವನವಿಲ್ಲದೆಯೂ ಮದುವೆ ನೆರವೇರಿಸುತ್ತಾರೆ. ಈ ಎರಡೂ ಉದ್ದೇಶಕ್ಕೆ, ಅಂದರೆ ಶಾಲೆಗೆ ಮತ್ತು ಹಾಸ್ಟೆಲ್ ನಲ್ಲಿ ಮದುವೆ ನಡೆಸಲು ಅನುವಾಗುವಂತೆ ಒಂದು ಭವನವಿದ್ದರೆ ಒಳಿತಲ್ಲವೆ? ಹನುಮಂತರಾಯನ ಗುಡಿ ಹಿಂಭಾಗದಲ್ಲಿ ಇರುವ ಈಗ ಶಿಥಿಲಗೊಂಡಿರುವಮಂಟಪ ಮತ್ತು ಪಕ್ಕದ ಶಿಶುವಿಹಾರಕ್ಕೆ ಬಳಸುತ್ತಿದ್ದಜಾಗದಲ್ಲೂ ಹಿಂದೆ ಮದುವೆಗಳು ನಡೆಯುತ್ತಿದ್ದವು. ಅವುಗಳ ರಿಪೇರಿಯಿಂದ ಬಡವರಿಗೆ ಸರಳ ವಿವಾಹ ನಡೆಸಲು ಅನುಕೂಲವಾಗಬಹುದು.

**ಅಡಿ ಟಿಪ್ಪಣಿ:**

1. ಐದು ವರ್ಷಗಳ ಹಿಂದೆ ಬರೆದ ಟಿಪ್ಪಣಿಯಿದು. ಇತ್ತೀಚೆಗೆ ಸಾಲಿಗ್ರಾಮವನ್ನು ನಮ್ಮ ತಾಲ್ಲೂಕು ಕೇಂದ್ರವಾಗಿ ಪ್ರಕಟಿಸಿರುವ ಹಿನ್ನೆಲೆಯಲ್ಲಿ ಈ ಛತ್ರವನ್ನು ಅಲ್ಲಿಗೆ ವರ್ಗಾಯಿಸುವರೆ?

2. ಸುವರ್ಣಮಹೋತ್ಸವ ಆಚರಿಸಿಕೊಳ್ಳಬೇಕಾದ ಸರ್ಕಾರಿ ಪ್ರೌಢಶಾಲಾ ಕಟ್ಟಡ ಶಿಥಿಲಗೊಂಡು "ಅವಸಾನದ ಕಡೆಗೆ ದಾಪುಗಾಲು ಹಾಕುತಿದೆ ಕಟ್ಟಡ ದುರಸ್ತಿ ಕೇಳುತಿದೆ" ಎಂದು ಅಧ್ಯಾಪಕರೊಬ್ಬರು Facebook ಇತ್ತೀಚೆಗೆ ಬರೆದಿದ್ದಾರೆ . ಖಾಸಗಿ ಶಾಲೆಗಳು ಸಾಕಷ್ಟು ಅಭಿವೃದ್ಧಿ ಹೊಂದಿವೆ. ಇಲಾಖೆ, ಸರ್ಕಾರ, ರಾಜಕಾರಣಿಗಳಿಗೆ ಬೇರೆಯದೇ ಆದ ಆಧ್ಯತೆಗಳಿದ್ದಂತೆ ತೋರುತ್ತಿದೆ. ಸ್ಥಳೀಯ ಮುಖಂಡರುಗಳು ತಂಡೋಪವಾಗಿ ಬೆಂಗಳೂರಿಗೆ ಧಾವಿಸಿ ಬೇರೆ ಊರಿನಲ್ಲಿರುವ ಅವರ ಮನೆದೇವರ ಗುಡಿಯ ಜೀರ್ಣೋದ್ಧಾರಕ್ಕೆ, ತಾಲ್ಲೂಕು ಕೇಂದ್ರದಲ್ಲಿ ಕೋಟಿಗಟ್ಟಲೆ ವ್ಯಯಿಸಿ ಚೌಲ್ಟ್ರಿ ನಿರ್ಮಿಸಲು, ಇತ್ಯಾದಿಗಳಿಗೆ ದೇಣಿಗೆ ಸಂಗ್ರಹಿಸ ಹೋರಟವರಿಗೆ ಇದು ಕಾಣಿಸದೆ?

# 10

# ಅನುಬಂಧಗಳು

## *ಅನುಬಂಧ ೧*

## *ಮಿರ್ಲೆಯಲ್ಲಿ ಆಚಾರ್ಯ ಶ್ರೀರಾಮಾನುಜರು !*



ಹೌದು ೯೦೦ ವರ್ಷಗಳ ಹಿಂದೆ ಕೆಲಕಾಲ ವಿಶಿಷ್ಟಾದ್ವೈತ ಸಿದ್ಧಾಂತಿ ರಾಮಾನುಜಾಚಾರ್ಯರು **ಮಿರ್ಲೆ**ಯಲ್ಲಿ ನೆಲಸಿ ನಂತರ ಸಾಲಿಗ್ರಾಮಕ್ಕೆ ತೆರಳಿದರು ಎಂಬುದು ಇತಿಹಾಸದಲ್ಲಿ ಧಾಖಲಾಗಿದೆ. ಸುಮಾರು 120 ವರ್ಷ ಬದುಕಿದ್ದ ರಾಮಾನುಜಾಚಾರ್ಯರು ಶ್ರೀವೈಷ್ಣವ ಮತ ಪ್ರಚಾರ ಮಾಡುತ್ತಾ ಭಾರತದ ಉದ್ದಗಲಕ್ಕೆ ಸಂಚರಿಸಿದವರು. ಹುಟ್ಟೂರು ತಮಿಳುನಾಡಿನ ಕಾಂಚೀಪುರದಿಂದ ಮಠಾಧಿಪತಿಯಾಗಿ ತಮ್ಮ ೨೪ನೇ ವಯಸ್ಸಿನಲ್ಲಿ ಶ್ರೀರಂಗಕ್ಕೆ ಬಂದ ರಾಮಾನುಜರು ಶೈವ-ವೈಷ್ಣವ ಸಂಘರ್ಷದ ಉತ್ತುಂಗ ಕಾಲದಲ್ಲಿ ಶೈವಧರ್ಮದಲ್ಲಿ ನಂಬಿಕೆಯಿಟ್ಟಿದ್ದ ಚೋಳ ದೊರೆ ಕುಲೊತ್ತುಂಗ (ಕ್ರಿಮಿಕಂಠ)ನ ಕಿರುಕುಳ ಮತ್ತು ಬೆದರಿಕೆಯಿಂದ ಬೇಸತ್ತು ಮಾರು ವೇಷದಲ್ಲಿ ಮಠ ಮತ್ತು ರಾಜ್ಯವನ್ನು ತ್ಯಜಿಸಿ 1078ರಲ್ಲಿ ನೀಲಗಿರಿ ಮಾರ್ಗವಾಗಿ ಹೊಯ್ಸಳ ನಾಡಿಗೆ (ಅಂದರೆ ಕರ್ನಾಟಕಕ್ಕೆ) ಶಿಷ್ಯರೊಂದಿಗೆ ವಲಸೆ ಬಂದರು, ಕಾವೇರಿ ನದಿ ಮಾರ್ಗದಲ್ಲಿ ಸಂಚರಿಸಿ **ವಹ್ನಿಪುಷ್ಕರಿಣಿ** (ಇಂದಿನ **ರಾಮನಾಥಪುರ**) ಎಂಬಲ್ಲಿ ಕೆಲಕಾಲ ನೆಲೆಸಿ ನಂತರ ಅವರು **ಮಿರ್ಲೆ**ಗೆ ಬಂದರು. ಅಲ್ಲಿಂದ **ಸಾಲಿಗ್ರಾಮ**ವನ್ನು ಅವರ ಮುಂದಿನ ವಾಸಕ್ಕೆ ಆಯ್ಕೆ ಮಾಡಿಕೊಂಡು ಅಲ್ಲಿ ಉಗ್ರನರಸಿಂಹ ದೇವಸ್ಥಾನ ಮತ್ತು ಶ್ರೀಪಾದ ಕೊಳ ಸ್ಥಾಪಿಸಿದರು. ಇಲ್ಲಿ ಸಾಲಿಗ್ರಾಮ ಶ್ರೀವೈಷ್ಣವರಿಗೆ ಮೇಲುಕೋಟೆಯಷ್ಟೇ ಮುಖ್ಯವಾದುದು ಎನ್ನುವುದನ್ನು ಗಮನಿಸಬೇಕು. ಮಿರ್ಲೆಯಲ್ಲಿಯೂ ಸರಿಸುಮಾರು ಅದೇ ಕಾಲದಲ್ಲಿ ಹೊಯ್ಸಳ ಶೈಲಿಯ ದೇವಸ್ಥಾನಗಳನ್ನು ಕಟ್ಟಲಾಗಿದೆಯಲ್ಲದೆ ಉಗ್ರನರಸಿಂಹ ದೇವಸ್ಥಾನವೂ ಇದೆ. ರಾಮಾನುಜಾಚಾರ್ಯರು

ಸಂಚರಿಸಿದ ಹಾದಿಯಲ್ಲಿ ಪುಷ್ಕರಣಿಗಳು ಮತ್ತು ಯೋಗಾನರಸಿಂಹ ದೇವಸ್ಥಾನಗಳು ಅಪಾರ!







ಜೈನ ರಾಜ ಬಿಟ್ಟಿದೇವನಿಗೆ ಶ್ರೀವೈಷ್ಣವ ಧೀಕ್ಷೆ ಕೊಟ್ಟು 'ವಿಷ್ಣುವರ್ಧನ' ಎಂದು ಮರುನಾಮಕರಣ ಮಾಡಿದ ಆಚಾರ್ಯರು ಹೊಯ್ಸಳ ನಾಡಿನಲ್ಲಿ ಸಂಚಾರಮಾಡಿ ನಾಗಮಂಗಲ, ಶ್ರೀರಂಗಪಟ್ಟಣ, ದೊಡ್ಡಮಳ್ಳೂರು, ರಾಮನಾಥಪುರ, ಶಾಂತೀ ಗ್ರಾಮ, ಮಿರ್ಲೆ, ಸಾಲಿಗ್ರಾಮ, ತೊಂಡನೂರು, ಚನ್ನಪಟ್ಟಣ, ಬಿಂಡಿಗನವಿಲೆ, ಹೊನ್ನಾವರ, ಬೇಲೂರು, ನುಗ್ಗೇಹಳ್ಳಿ, ಮಳೂರು, ಗೊರೂರು, ಗದಗ ಇತ್ಯಾದಿ ಊರುಗಳಲ್ಲಿ ಶ್ರೀ ವೈಷ್ಣವ ಕೇಂದ್ರಗಳನ್ನು/ ಮಠಗಳನ್ನು ಸ್ಥಾಪಿಸಿ, ದೇವಸ್ಥಾನಗಳನ್ನು ನಿರ್ಮಿಸಲು ಆದೇಶಿಸಿ ಶ್ರೀವೈಷ್ಣವ ಮತ ಪ್ರಸಾರದಲ್ಲಿ ತೊಡಗಿದ್ದರು. ಅವರ ಈ ಪಯಣದಲ್ಲಿ ಪಾಂಡವಪುರದ ಬಳಿಯ ತೊಂಡನೂರಿನಲ್ಲಿ ನಂಬಿನಾರಾಯಣ ಮತ್ತು ಉಗ್ರನರಸಿಂಹ ದೇವಸ್ಥಾನಗಳನ್ನು ಸ್ಥಾಪಿಸಿದ್ದು, ತೊಣ್ಣೂರು ಕೆರೆ ಕಟ್ಟಿಸಿದ್ದು ಬಹಳ ವಿಶಿಷ್ಟ ಕೊಡುಗೆ ಎಂದು ಪರಿಗಣಿಸಲಾಗಿದೆ. ಈ ಕೆರೆಯಿಂದ ಸಾವಿರಾರು ಎಕರೆ ಜಮೀನಿಗೆ ನೀರಾವರಿಯಾಗಿರುವುದಲ್ಲದೆ ಮೇಲುಕೋಟೆ, ತೊಂಡನೂರು ಮತ್ತಿತರ ಗ್ರಾಮಗಳಿಗೆ ಕುಡಿಯುವ ನೀರಿನ ಆಸರೆಯಾಗಿದೆ. ಇತ್ತೀಚೆಗೆ ಭೇಟಿ ನೀಡಿದಾಗ ತೆಗೆದ ಕೆರೆಯ ಕೆಳಗಿನ ಕೊಳದಲ್ಲಿ ನಿರ್ಮಿಸಿರುವ ಅವರ ಪುತ್ಥಳಿ, ನಂಬಿನಾರಾಯಣ ದೇವಸ್ಥಾನ ಮತ್ತು ಕೆರೆಯ ಸ್ಥೂಲ ಚಿತ್ರ ನೋಡಿ.

ತೊಂಡನೂರಿನಿಂದ ಮೇಲುಕೋಟೆ (ಯದುಗಿರಿ)ಯ ವರೆಗೆ ವಿಷ್ಣುವರ್ಧನ ನಿರ್ಮಿಸಿದ ಮಾರ್ಗದಲ್ಲಿ ರಾಮಾನುಜಾಚಾರ್ಯರು ಶಿಷ್ಯರೊಂದಿಗೆ ಪಯಣಿಸಿ, ಮೇಲುಕೋಟೆಯಲ್ಲಿ 12 ವರ್ಷ ನೆಲಸಿ, ಅಲ್ಲಿ ಪೂಜೆ, ಉತ್ಸವ ಮತ್ತಿತರ ಧಾರ್ಮಿಕ ಪದ್ಧತಿಗಳನ್ನು ಆಚರಣೆಗೆ ತಂದು ತಮ್ಮ ನಾಲ್ಕು ಪರಮಾಪ್ತ ಶಿಷ್ಯರನ್ನು ಉಸ್ತುವಾರಿ ನೋಡಿಕೊಳ್ಳಲು ಸ್ಥಾನಿಕರನ್ನಾಗಿ

ನೇಮಿಸಿದರು. ರಾಮಾನುಜಾಚಾರ್ಯರು ವಿಷ್ಣುವರ್ಧನನಿಗೆ ಆದೇಶಿಸಿ ಪಂಚನಾರಾಯಣ ಕ್ಷೇತ್ರಗಳನ್ನು (ತೊಂಡನೂರು  ನಂಬಿನಾರಾಯಣ, ಮೇಲುಕೋಟೆ ಚಲುವನಾರಾಯಣ, ತಲಕಾಡಿನ ಕೀರ್ತಿನಾರಾಯಣ, ಬೇಲೂರಿನ ವಿಜಯನಾರಾಯಣ ಮತ್ತು ಗದುಗಿನ ವೀರನಾರಾಯಣ -1099 ರಿಂದ 1117) ಸ್ಥಾಪಿಸಿದರು.  ಹೀಗೆ 12 ವರ್ಷ ಮೇಲುಕೋಟೆಯಲ್ಲಿ ಮತ್ತು 2 ವರ್ಷ ಕರ್ನಾಟಕದ ಇತರ ಕ್ಷೇತ್ರಗಳಲ್ಲಿ ನೆಲಸಿದ್ದ ಶೀರಾಮಾನುಜರು ಕುಲೊತ್ತುಂಗ (ಕ್ರಿಮಿಕಂಠ) ಚೋಳನ ಮರಣಾನಂತರ ಶೀರಂಗಕ್ಕೆ ಮತ್ತೆ ತೆರಳಿದರು.

# ಅನುಬಂಧ ೧

## ದೇಶವಿದೇಶಗಳ ಮಿರ್ಲೆ ಹೆಸರು/ ವಂಶಾವಳಿ/ ಕಂಪನಿಗಳು

ಪಾಶ್ಚಿಮಾತ್ಯರಲ್ಲೂ ಮಿರ್ಲೆ ವಂಶವೊಂದಿರುವುದು ಕಾಕತಳೀಯ ಮತ್ತು ಸೋಜಿಗದ ಸಂಗತಿ.

**Mirle in Maharashtra:** **Mirle** is a medium size village located in Khed Taluka of Ratnagiri district, **Maharashtra** with total 139 families.
**Mirle in Chaina:** **Mirle** was founded in 1989, as one of the leaders in **automation** system integrators and related product manufacturers. *Mirle Automation Technology (Shanghai) Co*., Ltd. Employee: 318. Plant Area : Shanghai: 17,310 m2 / Kunshan: 33,334 m2.
**Mirale in USA:**
The Mirale family name was found in the USA in 1920. In 1920 there was 1 Mirale family living in Pennsylvania. This was 100% of all the recorded Mirale's in the USA. Pennsylvania had the highest population of Mirale families in 1920.
**Mirle Family Facts**
Name Distribution (US) Name Distribution (UK)
<Javascript:NavLinks('6');>Place of Origin
<Javascript:NavLinks('5');>Immigration Year
<Javascript:NavLinks('1');>Ports of Departure
<Javascript:NavLinks('4');>Life Expectancy
<Javascript:NavLinks('2');>Occupations
<Javascript:NavLinks('8');>Civil War Service
<Javascript:NavLinks('3');>
Are you a Facebook user? Add Mirle family facts <http://www.facebook.com/apps/application.php?id=6183067965> to your Facebook profile.

**Census - 1880 US Census**
**1.** Andrew MIRLE <http://www.familysearch.org/Eng/Search/Census/individual_record.asp?indi_code=1880US%5F11104182%5F0&lds=5&region=0&regionfriendly=1880+US+Census&frompage=99> - 1880 United States Census / New York

Self Gender: Male Birth: <1827> BADEN
**2.** Theodore MIRLE <http://www.familysearch.org/Eng/Search/Census/individual_record.asp?indi_code=1880US%5F11104182%5F1&lds=5&region=0&regionfriendly=1880+US+Census&frompage=99> - 1880 United States Census / New York
Son Gender: Male Birth: <1864> NY
**3.** Rose MIRLE <http://www.familysearch.org/Eng/Search/Census/individual_record.asp?indi_code=1880US%5F10227569%5F6&lds=5&region=0&regionfriendly=1880+US+Census&frompage=99> - 1880 United States Census / Pennsylvania
Other Gender: Female Birth: <1864> NY
Matches: Census/1880 US Census - 3 <http://www.familysearch.org/Eng/Search/customsearchresults.asp?LDS=5&CN_Code=1880US&last_name=Mirle&standardize=N>

**Census - 1881 British Census**
**4.** Alfred MIRLE <http://www.familysearch.org/Eng/Search/Census/individual_record.asp?indi_code=1881BR%5F1454560%5F0&lds=5&region=1&regionfriendly=1881+British+Census&frompage=99> - 1881 British Census / Hertford
Head Gender: Male Birth: <1837> Waltham Cross, Hertford, England
**5.** William MIRLE <http://www.familysearch.org/Eng/Search/Census/individual_record.asp?indi_code=1881BR%5F1454560%5F1&lds=5&region=1&regionfriendly=1881+British+Census&frompage=99> - 1881 British Census / Hertford
Brother Gender: Male Birth: <1830> Waltham Cross, Hertford, England
**6.** Elizabeth MIRLE <http://www.familysearch.org/Eng/Search/Census/individual_record.asp?indi_code=1881BR%5F1454560%5F2&lds=5&region=1&regionfriendly=1881+British+Census&frompage=99> - 1881 British Census / Hertford
Sister Gender: Female Birth: <1857> Shuttleford
Matches: Census/1881 British Census - 3

<http://www.familysearch.org/Eng/Search/customsearchresults.asp?LDS=5&CN_Code=1881BR&last_name=Mirle&standardize=N

International Genealogical Index - **British Isles**

**7.** ELIZABETH MIRLE <http://www.familysearch.org/Eng/Search/IGI/individual_record.asp?recid=100153437741&lds=1&region=2&regionfriendly=British+Isles&frompage=99> - International Genealogical Index / BI

Gender: Female Marriage: 24 OCT 1857 Saint George, Chorley, Lancashire, England

Matches: International Genealogical Index/British Isles - 1 <http://www.familysearch.org/Eng/Search/customsearchresults.asp?LDS=1&region=2&last_name=Mirle&standardize=N>

International Genealogical Index - **Germany**

**8.** Marie Mirle <http://www.familysearch.org/Eng/Search/IGI/individual_record.asp?recid=100174415860&lds=1&region=8&regionfriendly=Germany&frompage=99> - International Genealogical Index / GE

Gender: Female Birth: 03 JUL 1864 Mucka, , , Germany

**9.** Marie Mirle <http://www.familysearch.org/Eng/Search/IGI/individual_record.asp?recid=100174415870&lds=1&region=8&regionfriendly=Germany&frompage=99> - International Genealogical Index / GE

Gender: Female Birth: 03 JUL 1864 Mucka, , , Germany

**10.** Mattheus Mirle <http://www.familysearch.org/Eng/Search/IGI/individual_record.asp?recid=100174415861&lds=1&region=8&regionfriendly=Germany&frompage=99> - International Genealogical Index / GE

Gender: Male Birth: 25 FEB 1817 Mucka, , , Germany

Matches: International Genealogical Index/Germany - 3 <http://www.familysearch.org/Eng/Search/customsearchresults.asp?LDS=1&region=8&last_name=Mirle&standardize=N>

International Genealogical Index - North America

**11.** Charles Mirle <http://www.familysearch.org/Eng/Search/IGI/individual_record.asp?recid=100347986929&lds=1&region=11&regionfriendly=North+America&frompage=99> - International Genealogical Index / NA

Gender: Male Birth: 28 AUG 1870 Bay City, Bay, Michigan

**12.** Franklin Mirle <http://www.familysearch.org/Eng/Search/IGI/individual_record.asp?recid=100379912351&lds=1&region=11&regionfriendly=North+America&frompage=99> - International Genealogical Index / NA
Gender: Male Birth: 15 AUG 1878 Wyandotte, Wayne, Michigan

**13.** MARY MIRLE <http://www.familysearch.org/Eng/Search/IGI/individual_record.asp?recid=500104039255&lds=1&region=11&regionfriendly=North+America&frompage=99> - International Genealogical Index / NA
Gender: Female Birth: 19 DEC 1856 Belleville Twp, Essex, New Jersey

Matches: International Genealogical Index/North America - 3 <http://www.familysearch.org/Eng/Search/customsearchresults.asp?LDS=1&region=11&last_name=Mirle&standardize=N>

**Pedigree Resource File**

**14.** Marguerite MIRLE <http://www.familysearch.org/Eng/Search/PRF/individual_record.asp?recid=470751172&lds=2&region=-1&regionfriendly=&frompage=99> - Pedigree Resource File
Gender: F Birth/Christening: abt 1675 Kaltenwesten, Germany

Matches: Pedigree Resource File - 1 <http://www.familysearch.org/Eng/Search/customsearchresults.asp?LDS=2&last_name=Mirle&standardize=N>

**U.S. Social Security Death Index**

**15.** Krishnaswa MIRLE <http://www.familysearch.org/Eng/Search/SSDI/individual_record.asp?recid=216316431&lds=3&region=-1&regionfriendly=&frompage=99>15. **Krishnaswa MIRLE** <http://www.familysearch.org/Eng/Search/SSDI/individual_record.asp?recid=216316431&lds=3&region=-1&regionfriendly=&frompage=99> - U.S. Social Security Death Index
Birth: 1 Feb 1925 State Where Number was Issued: Maryland
Death: 11 Jan 1993

Matches: U.S. Social Security Death Index - 1 <http://www.familysearch.org/Eng/Search/customsearchresults.asp?LDS=3&last_name=Mirle&standardize=N>

Matches: U.S. Social Security Death Index - 1 <http://www.familysearch.org/Eng/Search/customsearchresults.asp?LDS=3&last_name=Mirle&standardize=N> Matches: U.S. Social Security Death Index - 1 <http://www.familysearch.org/Eng/Search/customsearchresults.asp?LDS=3&last_name=Mirle&standardize=N>

**Mirle A. Kellett, Jr, MD, FACC**; Main Office - Scarborough

# ಅನುಬಂಧ ೩

# ಮೈಸೂರು ಸಂಸ್ಥಾನದ ಆಳ್ವಿಕೆ

1499 – 1947 – ಆರು ಶತಮಾನದ ಮೈಸೂರು ಒಡೆಯರ ಆಡಳಿತ (ನಡುವೆ ಸುಮಾರು 36 ವರ್ಷ ಹೈದರ್ ಮತ್ತು ಟಿಪ್ಪು ಹಾಗೂ 50 ವರ್ಷ ಬ್ರಿಟೀಷ್ ಕಮೀಷನರ ಆಡಳಿತವಿತ್ತು)

1799 - 1811 – 30 ಜೂನ್ 1799 ರಂದು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ 4 ವರ್ಷದವರಿದ್ದಾಗ ಪಟ್ಟಾಭಿಷೇಕ ವಾಯಿತಾದರೂ ಪೂರ್ಣಯ್ಯನವರ ರೀಜೆನ್ಸೀ ಆಡಳಿತ

1811 - 1831 – **ಮುಮ್ಮಡಿ ಕೃಷ್ಣರಾಜ ಒಡೆಯರ** (ಅರಸರ) ಆಡಳಿತ (19 ಅಕ್ಟೊಬರ್ 1831 ರಂದು ಅಧಿಕಾರ ಕಳೆದುಕೊಂಡರು)

1831 - 1867 – ಬ್ರಿಟೀಷ್ ಕಮೀಷನರ ಆಡಳಿತ (ಸುಮಾರು 50 ವರ್ಷ 1881ರ ವರಿವಿಗೆ)

27 ಮಾರ್ಚ್ 1868 – **ಮುಮ್ಮಡಿ ಕೃಷ್ಣರಾಜ ಒಡೆಯರ** 74ನೇ ವಯಸ್ಸಿನಲ್ಲಿ ನಿಧನ (ಅರಸರ ಹಕ್ಕು ಭಾದ್ಯತೆಗಾಗಿ ಹೋರಾಡಿ ತಮ್ಮ ದತ್ತು ಪುತ್ರ ಚಾಮರಾಜ ಒಡೆಯರಿಗೆ ರಾಜ್ಯಾಡಳಿತ ನೀಡುವ ಭರವಸೆ ಪಡೆದಿದ್ದರು)

ಮಾರ್ಚ್ 1881 – 18 ವರ್ಷ ತುಂಬಿದ **ಚಾಮರಾಜ (ಚಾಮರಾಜೇಂದ್ರ) ಒಡೆಯರು** ನೇರ ರಾಜ್ಯಾಡಳಿತ ವಹಿಸಿಕೊಂಡರು (ನಿಧನ: 1894) ಬಾಲ್ಯ ವಿವಾಹ ನಿಷೇದ, ಬಾಲೀಕಾ ಪಾಠಶಾಲೆ ಸ್ಥಾಪನೆ ಮತ್ತು ದಿವನ್ ರಂಗಾಚಾರ್ಲು ಅವರ ದೂರದೃಷ್ಟಿಯ ಪ್ರತೀಕವಾದ ಪ್ರಜಾಪ್ರತಿನಿಧಿ ಸಭೆ ಆರಂಭ

1897 – ಶ್ರೀಗಂಧ ಮತ್ತು ಸಾಗವಾನಿ ಮರದಿಂದ ನಿರ್ಮಿಸಿದ್ದ ಅರಮನೆ ಸುಟ್ಟು ಭಸ್ಮ

8 ಆಗಸ್ಟ್ 1902 – **ನಾಲ್ವಡಿ ಕೃಷ್ಣರಾಜ ಒಡೆಯರ** ರಾಜ್ಯಾಡಳಿತ ಆರಂಭ (4 ಜ್ಯೂನ್ 1884, 10 ವರ್ಷವಿದ್ದಾಗ ಪಿತೃವಿಯೋಗ, 1900ರಲ್ಲಿ ವಿವಾಹ, 3 ಆಗಸ್ಟ್ 1940ರಂದು ನಿಧನ); ಅವರನ್ನು ರಾಜಋಷಿ ಎಂದು ಕರೆಯಲಾಯಿತು. ಅವರ ತಮ್ಮ ಯುವರಾಜ ಕಂಠೀರವ ನರಸಿಂಹರಾಜ ಒಡಯರ ಮಗ **ಜಯಚಾಮರಾಜ ಒಡೆಯರು** ('ಜಯ' ಎಂಬುದು ಪ್ರಥಮ ಮಹಾಯುದ್ಧದ ಗೆಲುವನ್ನು ಸೂಚಿಸುತ್ತದೆ) ದತ್ತು ಪುತ್ರರಾಗಿ

ನಂತರ ಪಟ್ಟಕ್ಕೇರಿದರು.

**ಕೆಲವು ಪ್ರಮುಖರನ್ನು ಕುರಿತು ಧಾಕಲೆಗಲಲ್ಲಿ ಹೀಗಿದೆ:**

**Chamaraja Wodeyar X** (Ruling Period: 1868-1894) was the son of Rajkumari Sri Puta Ammani Avaru, the eldest daughter of Krishnaraja Wodeyar III, the then Maharaja of Mysore. Due to the lack of a male heir, the Maharaja adopted his grandson in 1867 and Chamarajendra Wodeyar X succeeded him to the throne. He instituted the Representative Assembly of Mysore state in 1881. He sponsored the famous journey of Swami Vivekananda to Chicago in 1893. He constructed many of the famous landmarks of Mysore and Bangalore, including the Bangalore Palace, the Lalbagh Glass House, Oriental Research Institute in Mysore, Fern Hill Palace in Ooty and the Mysore Zoo.

**Krishnaraja Odeyar-III** in 1799, boy of five years and administration was entrusted to Diwan Purnayya. Purnayya caused the repairing of the tanks and canals in the state and also improved them. A dam was erected at Sagarkatte across the Lakshmanatheertha.

**Rule of Commissioners**: The East India Company assumed the administration of Mysore in 1831 and appointed a Commissioner to look after. Mark Cubbon and Lewin Bowring are the most notable commissionaers. **Mark Cubbon** in 1834 shifted State capital to Bangalore. Tippu's palace was the first secretariat. Cubbon divided the State into four divisions. There were 120 taluks each looked after by one amildar. Below amildar was an official, Hoblidar or Shekdar. Cubbon was a great administrator who put the administrative machinery of Mysore on modem lines. He resigned in 1861. **Lewin Bowring** divided State into three divisions containing eight districts, each district administered by a Deputy Commissioner. He introduced the 'Indian Penal Code’ and the 'Code of Criminal Procedure' into Mysore. This registration act was passed in 1864. One criticism on his administration is that he staffed mostly by Englishmen. He encouraged education on a large scale.

**Rangacharlu,** Chief Secretary of revenue in Mysore was appointed the first Diwan. He fully imbibed Western liberalism and responsible for establishing a Representative Assembly which was convened in 1881.

**Sheshadri Iyer** started  gold mining in Kolar.

**Sir M. Visveshvarayya** joined Mysore service in 1909 as Chief Engineer. A liberal statesman, associated with Ghokle and Ranade and was a great believer in democratic institutions. He ushered in an era of all round development and more particularly in the field of industrial enterprise.

# ಅನುಬಂಧ ಳ

# ಪ್ರಜಾಪ್ರತಿನಿಧಿ ಸಭೆ ಹಿನ್ನೆಲೆ

ಮೈಸೂರಿನ ಮುಖ್ಯ ಕಮಿಷನರ್ ಆಗಿದ್ದ ಜೆ. ಡಿ. ಗೋರ್ಡನ್ ಅವರು 1879ರ ಅಧಿಕಾರ ಹಸ್ತಾಂತರ ಷರತ್ತಿನಲ್ಲೇ ಇಂತಹ ಸಭೆ ಆರಂಭಿಸಬೆಕೆಂಬ ಶಿಫಾರಸ್ ಮಾಡಿದ್ದರೂ ಅಂದಿನ ಭಾರತ ಸರ್ಕಾರ ಅನುಮೋದಿಸದೆ ವೈಸರಾಯ್ ಅವರು ಅದನ್ನು ಪ್ರಿಮೆಚ್ಯೂರ್ ಎಂದ್ದಿದ್ದರೂ ಮಹಾರಾಜರು **ಪ್ರಜಾಪ್ರತಿನಿಧಿ ಸಭೆ**ಯನ್ನು 25 ಅಕ್ಟೋಬರ್ 1881 ರಂದು ಮಾಡಿದರು. ಸಭೆಯಲ್ಲಿ ಭಾಗವಹಿಸುವುದು ಸ್ವಯಂ ನಿರ್ಧಾರವಾಗಿದ್ದು ಮತ ಚಲಾಯಿಸುವ ಹಕ್ಕಿಲ್ಲವಾದರೂ ಅದರಲ್ಲಿ ಪ್ರತಿ ಜಿಲ್ಲೆಯ ಒಬ್ಬರು ಅಥವ ಇಬ್ಬರು ಜಮೀನ್ದಾರರು, 3 ಅಥವ 4 ಮುಖ್ಯ ವರ್ತಕರು ಹಾಗೂ ಜಿಲ್ಲಾಡಳಿತದ ಸಂಪನ್ಮೂಲ ಮಂಡಳಿ ಮತ್ತಿತರರಿಗೆ ಪ್ರಾತಿನಿಧ್ಯವಿತ್ತು. ಮುಂದಿನ ವರ್ಷಗಳಲ್ಲಿ ಜನಸಂಖ್ಯೆ, ಉತ್ಪತ್ತಿ, ವಯಸ್ಸು ಮತ್ತಿತರ ಆದಾರಗಳ ಮೇಲೆ ಸದಸ್ಯತ್ವವನ್ನು 3 ವರ್ಷಗಳವರೆವಿಗೂ ನೀಡಲಾಗಿತ್ತಲ್ಲದೆ 1940ರಲ್ಲಿ ಇಬ್ಬರು ಸದಸ್ಯರನ್ನು ಮಹಾರಾಜರ ಕೌನ್ಸಿಲ್ಲಿಗೂ ನಾಮ ನಿರ್ದೇಶನ ಮಾಡಲಾಯಿತು. ಹೀಗೆ 1881ರಲ್ಲಿ ಆರಂಭವಾದ ಪ್ರಜಾಪ್ರತಿನಿಧಿ ಸಭೆ 1949ರ ವರೆವಿಗೂ ನಡೆಯಿತು ಮತ್ತು ಒಟ್ಟು ಸದಸ್ಯತ್ವ 351ರ ವರೆವಿಗೂ ಇರಬಹುದಾಗಿದ್ದು 1886ರಲ್ಲಿ ಸದಸ್ಯರ ಸಂಖ್ಯೆ 279 ಆಗಿದ್ದಿತು.

ಸುಮಾರು 50 ವರ್ಷಗಳ (1831-1881) ಬ್ರಿಟೀಷರ ನೇರ ಆಡಳಿತದ ನಂತರ ಮೈಸೂರು ಸಂಸ್ಥಾನದ ಅಧಿಕಾರ ಮತ್ತೆ ಮೈಸೂರು ಒಡೆಯರಿಗೆ ಹಸ್ತಾಂತರ ಗೊಂಡಾಗ 1881ರಲ್ಲಿ ನಡೆಸಿದ ನವರಾತ್ರಿ ಉತ್ಸವಕ್ಕೆ ಸಂಸ್ಥಾನದ ಎಲ್ಲ ಭಾಗಗಳಿಂದ ಆಗಮಿಸಿದ್ದ ರಾಜಪ್ರಮುಖರುಗಳನ್ನು ಅನೌಪಚಾರಿಕವಾಗಿ ಮಿತ್ರಕೂಟಕ್ಕೆ ಭಾರತದ ಪ್ರಪ್ರಥಮ ಪ್ರಜಾರಾಜ್ಯವಾದಿ ಎಂದು ಹೆಸರಾಗಿದ್ದ ಮೈಸೂರು ಸಂಸ್ಥಾನದ ಪ್ರಥಮ ದಿವಾನ್ ಸಿ. ರಂಗಾಚಾರ್ಲು ಅವರು ಆಹ್ವಾನಿಸಿದ್ದ ಸಭೆ ಮೈಸೂರು ಪ್ರಜಾಪತಿನಿಧಿ ಸಭೆಗೆ ಬೀಜಾಂಕುರವಾಯಿತೆನ್ನಬಹುದು.

ಈ ಹಿಂದೆ ಆಡಳಿತವನ್ನು ಅರಸರಿಗೆ ಒಪ್ಪಿಸಿಕೊಡುವ ಕರಾರಿನಲ್ಲೇ ಸರ್ಕಾರ ಪ್ರಮುಖ ರೈತರ, ವರ್ತಕರ ಮತ್ತು ಇತರ ಪ್ರಜಾಪ್ರಮುಖರ ಪ್ರತಿನಿಧಿಸಭೆ ಏರ್ಪಡಿಸಿ ವಿಚಾರವಿನಿಮಯ ಮಾಡಿ ಅಭಿಪ್ರಾಯ ಸಂಗ್ರಹಿಸತಕ್ಕುದ್ದು ಎಂಬುದನ್ನು ಸೇರಿಸುವಂತೆ ಕಮಿಶನರ್ ಗಾರ್ಡನರ್ ಅವರಿಗೆ ಕಾರ್ಯದರ್ಶಿಯಗಿದ್ದ ರಂಗಾಚಾರ್ಲು ಅವರು ಸಲಹೆ ನೀಡಿ ಸೇರಿಸಿದ್ದರೂ ಇದು ಭರತೀಯರಿಗೆ ಅಸಾಧ್ಯವೆಂದು ಬ್ರಿಟೀಷರು ಶಿಫಾರಸ್ಸನ್ನು ತಿರಸ್ಕರಿಸಿದರು. ಆದರೂ ಸದ್ದುಗದ್ದಲವಿಲ್ಲದೆ ಅದನ್ನೇ ದಿವಾನರು ಅರಸರ ಆಳ್ವಿಕೆಯಲ್ಲಿ ಸ್ವಯಂಪ್ರೇರಿತಾರಾಗಿ ಎಂಬಂತೆ ಆರಂಬಿಸಿದರು.

ಸ್ತ್ರೀ ನಿಷಿದ್ಧ ಮಾನದಂಡವನ್ನು ತೆಗದದ್ದರ ಪರಿಣಾಮವಾಗಿ 1928/1930 ರಲ್ಲಿ ಮೊದಲಬಾರಿಗೆ ಮಹಿಳೆಯರು ಮೈಸೂರು ಪ್ರಜಾಪತಿನಿಧಿ ಸಭೆಗೆ ಸೇರ್ಪಡೆಯಾದರು. ಶ್ರೀಮತಿ ಕೆ. ಡಿ. ರುಕ್ಮಿಣಮ್ಮ, ಶ್ರೀಮತಿ ಕಮಲಮ್ಮ ದಾಸಪ್ಪ ಮತ್ತು ಶ್ರೀಮತಿ ಸಾಕಮ್ಮ ಅವರುಗಳು ಪ್ರಜಾಪತಿನಿಧಿ ಸಭೆಯಲ್ಲಿ ಪಾಲ್ಗೊಂಡರು.

ಭಾರತದಲ್ಲೇ ಮೈಸುರು ಸಂಸ್ಥಾನ ಅತ್ಯಂತ ಹೆಚ್ಚು ಪ್ರಜಾಪ್ರಭುತ್ವ ಗುಣವುಳ್ಳ ಹಾಗೂ ಅತ್ಯಂತ ಹೆಚ್ಚು ಜನಜೀವನ ಗುಣಮಟ್ಟವುಳ್ಳ ರಾಜ್ಯ ಎಂಬ ಹೆಗ್ಗಳಿಕೆಯನ್ನು ಇಲ್ಲಿ ಸ್ಮರಿಸಬಹುದಾಗಿದೆ.

## ಅನುಬಂಧ ೫

# ಮೈಸೂರು ಸಂಸ್ಥಾನಕ್ಕೆ ಮಹಾತ್ಮ ಗಾಂಧಿಯವರ ಭೇಟಿ/ ಸಭೆ

1927, July 3 In Bangalore, Gandhiji spoke after opening the khadi exhibition.

1927, July 8 Spoke to Adi Karnataka boys.

1927, July 8 Spoke at a prize-distribution ceremony in the Khadi exhibition in Bangalore.

1927, July 9 In Mysore, spoke at Amateur Dramatic Association.

1927, July 10 In Bangalore, spoke at All-Karnataka Hindi Conference.

1927, July 12 Spoke at Institute of Science.

1927, July 13 Spoke at Mahila Samaj.

1927, July 14 At Tumkur, spoke in reply to Municipal address; visited the Panchama Boarding School; spoke at Prani Daya Sangh.

1927, July 15 At Maddagiri, spoke at public meeting

1927, July 17 In Bangalore, spoke in reply to Municipal address; addressed labourers' meeting.

1927, July 19 In Mysore, spoke to students.

1927, July 20 Spoke at Hindi Bhasha Seva Samaj.

1927, July 20 Spoke in reply to welcome address by the Mysore City Municipal Council and others.

1927, July 21 Spoke to Adi Karnatakas.

1927, July 23 Spoke at farewell meeting.

1927, July 24 In Bangalore, spoke at Civic and Social Progress Association.

1927, July 26 Spoke at United Theological College and a Mythic Society.

1927, July 29 Had a discussion with Christian missionaries.

1927, July 30 Spoke at Chamarajendra Sanskrit Pathashala.

1927, August 2 At Arsikere Junction spoke to Lambanis.

1927, August 3 In Hassan, spoke at Town Hall.

1927, August 4 In Bangalore, issued an appeal for funds for Gujarat flood relief.

1927, August 7 In Bangalore, spoke at the Gubbi theatre.

1927, August 11 At Davengere addressed a meeting of women; also a public meeting.

1927, August 12 Spoke to Adi Karnataka.

1927, August 13 Arrived at Shimoga, addressed a meeting of women; spoke at Harihar.

1927, August 14 At Shimoga, addressed a public meeting.

1927, August 16 Reached Sagar; in the evening addressed a meeting of women.

1927, August 17 At Tirthahalli, spoke at a public meeting.

1927, August 17 Left Shimoga for Bhadravati.

1927, August 18 At Bhadravati, addressed the workmen and officers of the Iron Works.

1927, August 18 Left for Chikmagalur in the evening.

1927, August 19 At Chikmagalur, addressed a public meeting.

1927, August 19 Issued an appeal to Tamil Nadu regarding orderly arrangement of his tour.

1927, August 20 Reached Belur, addressed a public meeting in front of the Belur Temple.

1927, August 20 At Arsikere, addressed a public meeting.

1927, August 21 In Tiptur, addressed a meeting at Veerasaivananda Ashram.

1927, August 23 In Bangalore.

1927, August 24 Commenced the first stage of Tamil nadu tour.

1927, August 24 Visited Hosur.

1927, August 24 In Krishnagiri, spoke at meeting.

1927, August 28 In Bangalore; addressed five meetings.

# ಅನುಬಂಧ ೬

## *ಐತಿಹಾಸಿಕ ವ್ಯಕ್ತಿ ಅಬೂಮಹಮದ್ ಮಿರ್ಲೆ*

ಹೈದರಾಲಿಯ ಆಪ್ತರಲ್ಲೊಬ್ಬರಾದವರು *ಅಬೂಮಹಮದ್ ಮಿರ್ಲೆ ಎಂಬುದಾಗಿ* ಬ. ನ. ಸುಂದರರಾವ್ ಅವರು ತಮ್ಮ *ಬೆಂಗಳೂರಿನ ಇತಿಹಾಸ* ಪುಸ್ತಕದಲ್ಲಿ (1985, ಹೈದರಾಲಿಯ ಉಪದೇಶ ಮತ್ತು ಮರಣ ಭಾಗ, ಪು.೧೯೨-೩) ದಾಖಲಿಸಿದ್ದಾರೆ. ಹೈದರಾಲಿಯು (೧೭೨೨-೧೭೮೨) ಬೆನ್ನುಫಣಿ ರೋಗದಿಂದ ಮರಣಶಯ್ಯೆಯಲ್ಲಿದ್ದು, ಮಗ ಟಿಪ್ಪುವು ದೂರದ ಕಲ್ಲಿಕೋಟೆಯಲ್ಲಿ ದಂಗೆಯನ್ನಡಗಿಸುವುದರಲ್ಲಿ ನಿರತನಾಗಿದ್ದಾಗ ತನ್ನ ಆಪ್ತರನ್ನು ಕರೆಯಿಸಿಕೊಂಡು ಮಗನಿಗೆ ತಿಳಿಹೇಳಿ ಸಲಹುವಂತೆ ನೀಡುವ ಉಪದೇಶದಲ್ಲಿ ಮೈಸೂರು ದೊರೆಗಳಲ್ಲಿ ಸ್ವಾಮಿಭಕ್ತಿಯಿಡುವುದು, ದೇವಾಲಯ-ಮಸೀದಿಗಳನ್ನು ಏಕ ಭಕ್ತಿಯಿಂದ ಕಾಣುವುದೂ ಸೇರಿದಂತೆ ಹಲಾವರು ಹಿತೋಕ್ತಿಗಳನ್ನು ತನ್ನ ಐದು ಮಂದಿ ಆಪ್ತರಲ್ಲಿ ಹೇಳುತ್ತಾನೆ. ಇತರ ಆಪ್ತರುಗಳು: ತೋಷಿಖಾನೆ ಕೃಷ್ಣರಾಯ, ಪೂರ್ಣಯ್ಯ, ಅಂಚೆ ಶಾಮಯ್ಯ, ಮೀರ್ ಸಾದಕ್.

ಹೈದರಾಲಿ ಬಳಿ *ಅಬೂಮಹಮದ್* ಹೆಸರಿನ ಚತುರ/ ಚಾಲಾಕಿ ಮುಖ್ಯ ಚೊಬ್ದಾರ್ ಎಂಬ ಅಧಿಕಾರಿ ಇದ್ದನೆಂಬುದು ನಿಜ. ತಕ್ಷಣಕ್ಕೆ ಥ್ರಿಲ್ಲ್ ಆದರೂ ಇದು ಮಹರಾಷ್ಟ್ರದ ಮಿರ್ಲೆ ಇರಬಹುದೆ ಎಂಬ ಸಂದೇಹ ಉದ್ಭವಿಸಿ ಹಲವಾರು ಗ್ರಂಥಗಳನ್ನು ಪರಿಶೀಲಿಸಲಾಗಿ, ಇಲ್ಲಿ ಮಿರ್ಲೆ ಎಂಬುದು ಮುಸಲ್ಮಾನ್ ಹೆಸರಿನ Mir Ali Nikam (father of Mir Mohammad Sadak) ಅಥವ Abdul Mohammad Midhe ಎಂಬ ಹೆಸರಿನ ಒಂದು ಭಾಗ ತರ್ಜುಮೆಗೊಂಡಾಗ ತಪ್ಪಾಗಿ Mirle ಎಂದು ಸೇರ್ಪಡೆಯಾಗಿದ್ದರೂ ಇರಬಹುದು ಎನ್ನಿಸಿತು.

ಕ್ಷುಲ್ಲಕ ಕಾರಣಗಳಿಗೂ ಹೈದರನು ಅಧಿಕಾರಿ ಯಾವ ಮಟ್ಟದವನೇ ಅದರೂ ಕೆಟ್ಟ/ಅಶ್ಲೀಲ ಬೈಗುಳಗಳ ಮಳೆಗರೆಯುತ್ತಿದ್ದು (ಅಧಿಕಾರಿಗಳಿಂದಲೂ ತಮ್ಮ ಕೆಳಗಿನವರೊಟ್ಟಿಗೆ ಅಂತೆಯೇ ವರ್ತಿಸುವುದನ್ನು ನಿರೀಕ್ಷಿಸುತ್ತಿದ್ದು), ಅದರಿಂದ ತಪ್ಪಿಸಿಕೊಳ್ಳುತ್ತಿದ್ದ ಆರು

ಮಂದಿಯಲ್ಲಿ *ಅಬೂಮಹಮದ್* ಎಂಬ ಚತುರ ಅಧಿಕಾರಿಯೂ ಒಬ್ಬ (Wilks, Mark 1989 'Characters of Hyder and Tippoo', p757).

ಹೈದರಾಲಿಯ ರೋಗ ಮತ್ತು ಮರಣದ ಸುದ್ದಿಯನ್ನು ಗುಪ್ತವಾಗಿಡಲಾಗಿದ್ದು ಪೂರ್ಣಯ್ಯನವರಲ್ಲದೆ ತಿಳಿದಿದ್ದ ಕೆಲವೇ ಮಂದಿಯಲ್ಲಿ *ಅಬೂಮಹಮದ್ ಮಿರ್ದ ಒಬ್ಬ* (Vikram Sampath, 2008, p210). ಅಲ್ಲದೆ Abdul Mohammad Midhe ಎಂಬ ಮುಖ್ಯ ಅಧಿಕಾರಿಯು ಮರಾಠರೊಂದಿಗಿನ ನಿರ್ಣಾಯಕ ಚಿಂಕುರಳಿ (ಶ್ರೀರಂಗಪಟ್ಟನದಿಂದ ೧೧ ಮೈಲು ದೂರದಲ್ಲಿದೆ) ಯುದ್ಧದಲ್ಲಿ 1771ರ ಮಾರ್ಚ್ 6ರಂದು ಸೆರೆಯಾಗುತ್ತಾನೆ (Vikram Sampath, 2008, p183-4). ಹೈದರನು 1875ರಲ್ಲಿ ಮಾಡಿದ ಮಹತ್ತರ ಆಡಳಿತ ಬದಲಾವಣೆಗಳಲ್ಲಿ ಪಾಯಂಗಾಟ್ ಕಛೇರಿಯನ್ನು Mir Ali Nikam (father of Mir Mohammad Sadak) ಎಂಬುವನಿಗೆ ವಹಿಸುತ್ತಾನೆ (Vikram Sampath, 2008, p188).

ಕಡೆಗೆ ಶ್ರೀ ರಾಮಕೃಷ್ಣರಾವ್ *ಅವರ ಶ್ರೀಮನ್ಮಹಾರಾಜರ ವಂಶಾವಳಿ (ಭಾಗ ೧,* ಪು.೨೩೨) ಪುಸ್ತಕದಲ್ಲಿ ಹೈದರನ ಐವರು ಅಪ್ತರಲ್ಲಿ ಒಬ್ಬರು ಅಬೂಮಹಮದ್ ಮಿರ್ಧೆ ಎಂಬುದು ಖಾತ್ರಿಯಾಯಿತು.

# ಅನುಬಂಧ ೭

# ಮಿರ್ಲೆಯ ಸಾಧಕರು, ವಿಶಿಷ್ಟರು ಮತ್ತು ಸುದ್ಧಿಯಲ್ಲಿರುವ ಸಮಕಾಲೀನರು

*ಈ ವಿಭಾಗದಲ್ಲಿ ಹೆಸರಿಸಿ ವಿವರ ನೀಡಿರುವುದರಲ್ಲಿ ಯಾವ ಆಯ್ಕೆಯಾಗಲಿ, ranking ಆಗಲಿ ಇಲ್ಲ. ಸುಮಾರು ಎರಡು ದಶಕಗಳಲ್ಲಿ ನನ್ನ ಸೀಮಿತ ಗಮನಕ್ಕೆ/ ಸಂಪರ್ಕಕ್ಕೆ ಬಂದ, ನೆನಪಿನಲ್ಲಿ ಉಳಿದ, ನನ್ನ ಮೇಲೆ ಪ್ರಭಾವ ಬೀರಿದ ಕೆಲವೇ ಕೆಲವರನ್ನು ಮಾತ್ರ ಇಲ್ಲಿ ಹೆಸರಿಸಿದ್ದೇನೆ. ಹೀಗೆ ವಿವರಿಸಬೇಕಾದ ಇನ್ನೂ ಅನೇಕ ಮಿರ್ಲೆಯವರಿದ್ದಾರೆ.*



***1.*** **ನ್ಯಾಯಮೂರ್ತಿ (ದಿವಂಗತ) ಎಂ. ಬಿ. ವಿಶ್ವನಾಥ್** ಅವರು ಮಿರ್ಲೆ ಮಂಡ ಬೋರೇಗೌಡರ ಪುತ್ರ. ಕರ್ನಾಟಕ ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಯಾಗಿ ನಿವೃತ್ತರದವರು. ಇವರು ಕೆ. ಆರ್. ನಗರ ತಾಲ್ಲೂಕಿನ ಉಚ್ಚನ್ಯಾಯಾಲಯದ ಮೊದಲ ನ್ಯಾಯಮೂರ್ತಿಗಳೂ ಹೌದು. ಎರಡನೆಯವರು ನ್ಯಾಯಮೂರ್ತಿ ಶ್ರೀ ಚಂದ್ರಶೇಕರಯ್ಯನವರು. ಇವರು ರಾಂಪುರದವರು.

***2. ವಿಶ್ವನಾಥ್ ಮಿರ್ಲೆ:*** ಬಹುಮುಖ ಪ್ರತಿಭೆಯ ವಿಶ್ವನಾಥ್ ಮಿರ್ಲೆ ಲಂಡನ್ ನಲ್ಲಿ ಉನ್ನತ ವಿಧ್ಯಾಭ್ಯಾಸ ಮಾಡಿ ಮೈಸೂರಿನ Regional college of Educationನಲ್ಲಿ ಪ್ರೊಫೆಸರ್ ಆಗಿದ್ದರು. ಇವರು ಹವ್ಯಾಸಿ ನಟರಾಗಿ, ಮಹಾರಾಜ ಕಾಲೇಜಿನ "ಮಿತ್ರ ಮೇಳ" ತಂಡ ಹಾಗೂ ನಂತರ ದಿನಗಳಲ್ಲಿ ಮೈಸೂರಿನ "ಸಮತೆಂತೋ" ಹವ್ಯಾಸಿ ನಾಟಕ ತಂಡದ ಸದಸ್ಯರಾಗಿದ್ದರು. BA (Hons) ನಲ್ಲಿ ಡಾ. ಯು. ಆರ್. ಅನಂತಮೂರ್ತಿಯವರ ಸಹಪಾಠಿ ಮತ್ತು ಆಪ್ತ ಮಿತ್ರ ರಾದ ವಿಶ್ವನಾಥ್ ಮಿರ್ಲೆಯವರ ಬಗ್ಗೆ ನಾಲ್ಕಾರು ಪುಟಗಳಲ್ಲಿ ವಿವರಿಸುವಮುನ್ನ ಅನಂತಮೂರ್ತಿಯವರು ಹೀಗೆ ಹೇಳುತ್ತಾರೆ: "ನಾನು ಆನರ್ಸ್ ವಿದ್ಯಾರ್ಥಿಯಾಗಿದ್ದ ದಿನಗಳಿಂದ ನನ್ನ ಒಳಬಾಳನ್ನು ಬೆಳಸಿದ ಇಬ್ಬರು ಪ್ರತಿಭಾವಂತರು ಈ ರತ್ನ ಮತ್ತು ವಿಶ್ವನಾಥ ಮಿರ್ಲೆ" (ತೇಜಶ್ರೀ, ಜ. ನ. ೨೦೦೧, ಪು ೧೧೪). ನಾನು ನನ್ನ ವಿಧ್ಯಾರ್ಥಿ ದಿನಗಳಲ್ಲಿ ವಿಶ್ವನಾಥ್ ಮಿರ್ಲೆಯವರನ್ನು ನೋಡಿದ್ದೆನಾದರೂ ಅವರ ಫೋಟೊ

ಸಂಪಾದಿಸಲಾಗಲಿಲ್ಲ. ಆಲ್ಲದೆ ಅವರು ಮಿರ್ಲೆಯಲ್ಲಿಯೇ ಹೊಟ್ಟಿ ಬೆಳೆದವರೆ ಅಥವ ಅವರ ಪೂರ್ವಜರು ಮಿರ್ಲೆಯವರೆ ತಿಳಿಯದು. ಕನ್ನಡದ ನವ್ಯ ಸಾಹಿತ್ಯದ ಚಳುವಳಿಯ ಮುಂಚೂಣಿಯಲ್ಲಿದ್ದ ಬಹುತೇಕ ಲೇಖಕರಲ್ಲಿ ಮಿರ್ಲೆ ವಿಶ್ವನಾಥ್ ಅವರೂ ಒಬ್ಬರು ಆ ಕಾಲಘಟ್ಟದಲ್ಲಿ ಸಿಡಿಎನ್ ಅವರ ಪ್ರಿಯ ಶಿಷ್ಯರಾಗಿದ್ದುದು ಆಕಸ್ಮಿಕವೇನಲ್ಲ ಎನ್ನುತ್ತಾರೆ ಸಿ. ಏನ್. ರಾಮಚಂದ್ರರಾವ್ (ಅವರ ಆತ್ಮಕಥೆ - 'ನೆರಳುಗಳ ಬೆನ್ನು ಹತ್ತಿ') . ಮುಂದುವರೆದು ಆಗ ಆನರ್ಸ್ ಮತ್ತು ಎಂ. ಎ. ವಿಭಾಗದಲ್ಲಿದ್ದ ವಿದ್ಯಾರ್ಥಿಗಳಲ್ಲಿ ಅತ್ಯಂತ ಪ್ರತಿಭಾಶಾಲಿಗಳಲ್ಲಿ ಮಿರ್ಲೆ ವಿಶ್ವನಾಥ್ ಒಬ್ಬರು. ಶ್ರೀನಿವಾಸರಾವ್, ಮಿರ್ಲೆ ವಿಶ್ವನಾಥ್, ಮತ್ತು ನನಗಿಂತ ಒಂದು ವರ್ಷ ಕೆಳಗಿದ್ದ ವರ್ಮ, ಮುಂತಾದವರು ಕಟ್ಟಿದ್ದ 'ಮಿತ್ರಮೇಳ' ಎಂಬ ನಾಟಕ ಸಂಸ್ಥೆ ಆಗ ತುಂಬಾ ಹೆಸರು ಗಳಿಸಿತ್ತು. ನಾನು ಸೇರಿದ ವರ್ಷವೇ ವರ್ಷಾಂತ್ಯದಲ್ಲಿ ಮಿತ್ರಮೇಳದವರು ಪರ್ವತವಾಣಿಯವರ "ಉಂಡಾಡಿ ಗುಂಡ" ನಾಟಕವಾಡಿದರು. ಹಾಗೆಯೇ ಸಿಡಿಎನ್ ಅವರ ಎರಡನೆಯ ಮಗ ಸಂಜಯ್ ಹುಟ್ಟುಹಬ್ಬದ ಪಾರ್ಟಿಯಲ್ಲಿ ಮಿರ್ಲೆ ಕಣ್ಣು ಕುಕ್ಕುವ ಸೂಟ್ ಹಾಕಿಕೊಂಡು 'ಬೋ' ಕಟ್ಟಿಕೊಂಡು ಮೋಹನಾಂಗರಾಗಿದ್ದವರು ಎನ್ನುತ್ತಾರೆ.

-------------------------------------------------------------------------

**ಪ್ರತಿಕ್ರಿಯೆ:**

ಪ್ರಶಾಂತ್: Every year there is stage performance in the memory of Vishwanath Mirle in Mysore.... Also I have heard that he was running a news paper in Mysore.

ವಿಶ್ವನಾಥ ಮಿರ್ಲೆಯವರ ಬಗ್ಗೆ ತಿಳಿಯಬೇಕಾದ ವಿಷಯಗಳು ಸಾಕಷ್ಟಿವೆ ಅನಿಸುತ್ತೆ. "ನಂದೇ ತಲಿ ಕೆಟ್ಹೋಯ್ತು. ಬ್ಯಾಡ ಇನ್ನು ಅಂಥ ತಿಳ್ಕೊಂಡೆ. ಬಾನುಲಿ, ಮತಿಬಿಂದು ಸೇರಿ 19 ಕವನ ಸಂಕಲನಗಳು ಬಂದಿದ್ದವು. ನನ್ನ ವ್ಯಂಗ್ಯ ನನಗೇ ಅಸಹ್ಯ ಅನಿಸಿಬಿಟ್ಟಿತ್ತು. ಅಮೇಲೆ ನಾನು ಹೈದ್ರಾಬಾದ್‌ನ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲಿಷ್‌ಗೆ ಹೋದೆ. ಅದು ಒಂದು ಹೊಸ ಜಗತ್ತು. ವಿಶ್ವಾನಾಥ ಮಿರ್ಲೆ ಅಂಥಾ ಮೈಸೂರಿನವರು. ಅವರು ಒಂದು ನಾಟಕ ಬರೆದಿದ್ದರು 'ಗೋಡೆಗಳು' ಅಂಥಾ. ಅದನ್ನ ಓದೋಕೆ ಕೊಟ್ಟರು. ಅದನ್ನ ಓದಿ ಒಂದೇ ರಾತ್ರಿ ಒಳಗೆ ನಾನು 'ಕೊಡೆಗಳು' ಅಂಥಾ ನಾಟಕ ಬರೆದ್ ಬಿಟ್ಟಿದ್ದೆ . ಅದು ನನ್ನ ಮೊಟ್ಟ ಮೊದಲ ನಾಟಕ. ಮಿರ್ಲೆ ಅದನ್ನ ಓದಿ ಕನ್ನಡದಲ್ಲಿ ಹೊಸ ಆಯಾಮದ ನಾಟಕ ಅಂಥಾ ಸರ್ಟಿಫಿಕೇಟ್ ಕೊಟ್ಟರು. ಅಲ್ಲಿಂದ ಶುರುವಾಯಿತು

ಹೊಸ ಪರ್ವ. 'ಅಪ್ಪ' 'ಟೆಂಗರ ಬುಡ್ಡಣ್ಣ' 'ಕುಂಟಾ ಕುಂಟಾ ಕುರವತ್ತಿ' 'ಗುರುತಿನವರು'.. ಇವೆಲ್ಲವೂ ಬಂತು" – ಹೀಗೆ ವಿಶ್ವಾನಾಥ ಮಿರ್ಲೆ ಅವರ ಬಗೆಗೆ ಹೇಳಿದವರು ಸಾಹಿತಿ ಪ್ರೊ. ಚಂದ್ರಶೇಕರ ಪಾಟೀಲ್ .

---

**3. ಎಂ. ಎಸ್. ನಾಗರಾಜ ರಾವ್**

ಶೈಕ್ಷಣಿಕ ವರ್ಷ 1954–55ರ ಅವಧಿಯಲ್ಲಿ ನಾನಿದ್ದ ಎಸ್ ವಿ ಎಸ್ ಹಾಸ್ಟಲ್ಲಿನಲ್ಲಿ ಇಂಡಾಲಜಿ ಆನರ್ಸ್ ಸೇರಿದ್ದ ನಾಗರಾಜ ರಾವ್ ಇದ್ದರು, ಮುಂದೆ ಇವರು ಆರ್ಕಿಯಾಲಜಿ ವಿಭಾಗವನ್ನು ಸೇರಿದರು ಎಂದು ನೆನಪು ಎನ್ನುತ್ತಾರೆ ಸಿ. ಏನ್. ರಾಮಚಂದ್ರರಾವ್. ('ನೆರಳುಗಳ ಬೆನ್ನು ಹತ್ತಿ').

**4. ಎಂ. ವಿ. ಶ್ರೀನಿವಾಸ ಮೂರ್ತಿ**

ಅದೇ ಅವಧಿಯಲ್ಲಿ ಹಾಸ್ಟಲ್ಲಿನಲ್ಲಿ ಕನ್ನಡ ಆನರ್ಸ್ ಸೇರಿದ್ದ ಮಿರ್ಲೆ ಶ್ರೀನಿವಾಸ ಮೂರ್ತಿ ಇದ್ದರು. ಇವರು ತಿಪಟೂರು ಕಲ್ಪತರು ಕಾಲೇಜಿನಲ್ಲಿಯೇ ಬಹುಕಾಲವಿದ್ದು ನಿವೃತ್ತರಾದರು, ಇವರನ್ನು ನೋಡಲು ಆಗಾಗ್ಗೆ ಇವರ ಸಹಪಾಠಿಗಳಾಗಿದ್ದ ಅ.ರಾ.ಮಿತ್ರ, ಲಕ್ಷ್ಮೀನಾರಾಯಣ ಭಟ್ಟ, ಮುಂತಾದವರು ಹಾಸ್ಟಲ್ಲಿಗೆ ಬರುತ್ತಿದ್ದರು ಎನ್ನುತ್ತಾರೆ ಸಿ. ಏನ್. ರಾಮಚಂದ್ರರಾವ್ ('ನೆರಳುಗಳ ಬೆನ್ನು ಹತ್ತಿ').



**5. ಡಾ. ಮಿರ್ಲೆ ಎಸ್. ವಿ. ರಾವ್**

ಮೈಸೂರು ಸಂಸ್ಥಾನ 1881ರಲ್ಲಿ ಆರಂಭಿಸಿದ 'ಪ್ರಜಾಪ್ರತಿನಿಧಿ ಸಭೆ' ಸದಸ್ಯರಾಗಿದ್ದ 'ಮಿರ್ಲೆ ಸುಬ್ಬರಾವ್' (ನ್ಯಾಯಲಯದ ಒಂದು ಧಾಖಲೆಯಲ್ಲಿ Mirle Subba Rao S/o. Late Mirle S. Nanjundaiah, Aged 55 years ಎಂದು ಇದೆ) ಅವರ ಬಗ್ಗೆ ಹೆಚ್ಚಿನ ಮಾಹಿತಿ ಶೋಧದಲ್ಲಿ ತೊಡಗಿದ್ದಾಗ ಇನ್ನೂ ಇಬ್ಬರು ಅದೇ ಹೆಸರಿನ ಮಿರ್ಲೆಯವರು ಇರುವುದು ತಿಳಿಯಿತು.

೧. **ಮಿರ್ಲೆ ಸುಬ್ಬರಾವ್** , Independent Management Consulting Professional, ಬೆಂಗಳೂರು

೨. **ಡಾ. ಮಿರ್ಲೆ ಎಸ್. ವಿ. ರಾವ್ (ಮಿರ್ಲೆ ಸುಬ್ಬರಾವ್ ವೆಂಕಟಸುಬ್ಬರಾವ್)** ಅವರು ತಮ್ಮ 93ನೇ ವಯಸ್ಸಿನಲ್ಲಿ 18ನೇ ಏಪ್ರಿಲ್ 2014 ರಂದು ಅಮೆರಿಕಾದ ಇಂಡಿಯಾನಪೋಲಿಸ್ ನಲ್ಲಿ ನಿಧನರಾದ ವಾರ್ತೆಯಿಂದ ತಿಳಿಯಿತು. ಮೈಸೂರಿನಲ್ಲಿ ಜನಿಸಿದ ಸುಬ್ಬರಾವ್ ಅವರು ಮೈಸೂರು ವಿಶ್ವವಿಧ್ಯಾಲಯದಿಂದ B Sc ಮತ್ತು MSc (Pysics) ಪಧವಿ ಪಡೆದು Royal Indian Air Force ಸೇರಿ Squadron Leader ಆಗಿ 2ನೇ ಮಹಾಯುದ್ಧದಲ್ಲಿ ಭಾಗಿಯಾಗಿದ್ದರು. ಅವರು India Meteorological ಇಲಾಖೆಯಗೆ ಒಬ್ಬ project scientist ಆಗಿ ಸೇರಿ ತಿರುವನಂತಪುರದ ಬಳಿಯ (ಇಂದಿನ ಇಸ್ರೊ) 'Thumba'ದ Rocket Launching Stationನಲ್ಲಿ ಕೆಲಸ ನಿರ್ವಹಿಸಿದ್ದರು. ಕೇರಳ ವಿಶ್ವವಿದ್ಯಾಲಯದಿಂದ Ph D (Atmospheric Sciences) ಪಡೆದು 1972ರಲ್ಲಿ ಅಮೆರಿಕಾಗೆ ತೆರಳಿ ದಶಕಗಳ ಕಾಲ NASA ದಲ್ಲಿ , Satellite based Weather Analysis ವಿಷಯದ ಮೇಲೆ ಸಂಶೋಧನೆ ನಡೆಸಿ, 1983 ರಲ್ಲಿ ನಿವೃತ್ತಿ ಹೊಂದ್ದಿದ್ದರು. ಅವರು 70ರ ದಶಕದಲ್ಲಿ ಕ್ರಿಶ್ಚಿಯನ್ನರಾಗಿ ಮತಾಂತರಗೊಂಡಿದ್ದರು.



**6. ಪ್ರೊ. ಎಂ.ಕೆ. ಸೂರಪ್ಪ**

ಮಿರ್ಲೆಯಲ್ಲಿ ಹುಟ್ಟಿ-ಬೆಳೆದು, ಮಿರ್ಲೆ ಸರ್ಕಾರೀ ಶಾಲೆಗಳಲ್ಲಿಯೇ ಕನ್ನಡ ಮಾಧ್ಯಮದಲ್ಲಿ ವಿಧ್ಯಾಬ್ಯಾಸ ಮಾಡಿ, ಮೈಸೂರಿನ ಯುವರಾಜಾ ಕಾಲೇಜಿನಲ್ಲಿ B Sc ಪದವಿ ಪಡೆದು, ಬೆಂಗಳೂರಿನ Indian Institute of Science ನಲ್ಲಿ M S ಮತ್ತು Ph D ಪದವಿ ಪಡೆದ ಸೂರಪ್ಪನವರು Indian Institute of Science ನಲ್ಲಿಯೇ ಪ್ರಾಧ್ಯಾಪಕರಾಗಿ, ನಂತರ Dean ಆಗಿ ಮತ್ತು ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಪರಿಷತ್ತಿನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದವರು. ಸ್ವಲ್ಪ ಕಾಲ ಅವರು RRL ತಿರುವನಂತಪುರದಲ್ಲಿ ವಿಜ್ಞಾನಿಯಾಗಿಯೂ ಸೇವೆ ಸಲ್ಲಿಸಿದರು. ಪ್ರೊ. ಸೂರಪ್ಪನವರು ಪಂಜಾಬಿನಲ್ಲಿರುವ IIT ರೂಪಾರ್ ನ ಸಂಸ್ಥಾಪಕ ನಿರ್ಧೇಶಕರಾಗಿ ಮತ್ತು ಚನ್ನೈನ ಅಣ್ಣಾ ವಿಶ್ವವಿಧ್ಯಾಲಯದ ಕುಲಪತಿ ಆಗಿ ಒಬ್ಬ ಧಕ್ಷ, ವಸ್ತುನಿಷ್ಠ, ಪ್ರಾಮಾಣಿಕ, ಉನ್ನತ ಶೈಕ್ಷಣಿಕ ಅಧಿಕಾರಿಯಾಗಿ ಅಧ್ವಿತೀಯ ಸಾಧನೆಗೈದಿದ್ದಾರೆ. ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕ ಮುಕ್ತ ವಿಶ್ವವಿದ್ಯಾಲಯದ ಗೌರವ

ಡಾಕ್ಟರೇಟ್ ಪದವಿಯೂ ಸೇರಿದಂತೆ ಹಲವಾರು ಪ್ರಶಸ್ತಿ-ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ. ಅಂತರರಾಷ್ಟ್ರೀಯ ಖ್ಯಾತಿಯ ವಿಜ್ಞಾನಿಯಾಗಿ (Material Science and Metallurgy) ನೂರಾರು ಅಂತರರಾಷ್ಟ್ರಿಯ ಮಟ್ಟದ ಲೇಖನಗಳನ್ನು ಪ್ರಕಟಿಸಿದ್ದಾರೆ ಮತ್ತು ಹಲವಾರು ದೇಶಗಳಲ್ಲಿ ವಿಶಿಷ್ಟ ಪ್ರವಚನಗಳನ್ನು ನೀಡಿದ್ದಾರೆ. ಅಣ್ಣಾ ವಿಶ್ವವಿಧ್ಯಾಲಯದ ಕುಲಪತಿ **ಪ್ರೊ. ಸೂರಪ್ಪನವರ** ಕಾರ್ಯಕ್ಷಮತೆ ಮತ್ತು ಅಭಿವೃದ್ಧಿ ಕಾರ್ಯಗಳ ಬಗ್ಗೆ ತಮಿಳುನಾಡಿನ ಪತ್ರಿಕೆಗಳ ವರದಿ ಓದಿದರೆ ಮಿರ್ಲೆಯವರಾದ ನಮಗೆ ಬಹಳ ಹೆಮ್ಮೆಯೆನಿಸುತ್ತದೆ. ಕರ್ನಾಟಕಕ್ಕೆ ಬಹಳಷ್ಟು ತಡವಾಗಿ ದೊರೆತ IIT ಬಗ್ಗೆ ಮತ್ತು ಅದು ಎಲ್ಲಿ ಸ್ಥಾಪಿತವಾಗಬೇಕೆಂಬ ರಾಜಕೀಯ ಹಗ್ಗಜಗ್ಗಾಟದ ಬಗ್ಗೆ ಪ್ರಜಾವಾಣಿಯ ಸಂದರ್ಶನ ಒಂದರಲ್ಲಿ ಒಬ್ಬ ಶಿಕ್ಷಣ ತಜ್ಞರಾಗಿ ಪ್ರೊ. ಸೂರಪ್ಪ ಅವರ ನೇರ, ನಿಷ್ಠುರ ಮತ್ತು ಸಂಕ್ಷಿಪ್ತ ಹಾಗೂ ಮಹತ್ತರವಾದ ಎಚ್ಚರಿಕೆಯನ್ನು ನೀಡಿದ್ದರು ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅವರನ್ನೇ ಕೇಳಿದರೆ ಅವರ ಬೆಳವಣಿಗೆ ಹೋರಾಟದ್ದು, ಕೆಲವೊಮ್ಮೆ ನೋವಿನಿಂದ ಕೂಡಿದ್ದು, ನ್ಯಾಯ ಮತ್ತು ಮೌಲ್ಯಗಳಿಗಾಗಿ ಹೋರಾಡುವುದರಲ್ಲಿ ಸಂತೃಪ್ತಿಯಿದೆ ಮತ್ತು ಬಾಲ್ಯದಲ್ಲಿ ತನ್ನ ತಾಯಿಯೇ ಇದೆಲ್ಲಕ್ಕೂ ಸ್ಫೂರ್ತಿ ಎನ್ನುತ್ತಾರೆ. ಅವರ ಪದಗಳಲ್ಲಿಯೇ ಓದಿ: “To me, life has been full of struggle, sometimes painful, but has provided me lots of satisfaction and contentment in fighting for justice and values which I learnt during my childhood in Mirle, from numerous people especially from my mother”.



ಅವರ ಇತ್ತೀಚಿನ video ಸಂದರ್ಶನ ಮತ್ತು ಅಣ್ಣಾ ವಿಶ್ವವಿಧ್ಯಾಯಾಲಯದಲ್ಲೇ ಪ್ರೊಫೆಸರ್ ಆಗಿದ್ದವರ ಪತ್ರ ಓದಿದ ಮೇಲೆ ಅದಕ್ಕೆ ಸಂಭಂದಿಸಿದಂತೆ ಕೆಲವು ಅನಿಸಿಕೆಗಳನ್ನು ಹಂಚಿಕೊಳ್ಳಲು ಈ ಟಿಪ್ಪಣಿ ಬರೆಯುತ್ತಿದ್ದೇನೆ. ಮೊದಲಿಗೆ ತಮಗೆ ಹಿಂದಿನ ರಾಜ್ಯಪಾಲರುಗಳು ತೋರಿಸಿಕೊಟ್ಟ ಸುಲಭ ಮಾರ್ಗವನ್ನು ಅನುಸರಿಸಿದ್ದರೆ ಅನಾಯಾಸವಾಗಿ ದೊರಕಬಹುದಾದ ರೂ 50 ಕೋಟಿಯನ್ನು ಧಿಕ್ಕರಿಸಿ ಒಬ್ಬ ದಕ್ಷ,

ಪ್ರಾಮಾಣಿಕ VCಯನ್ನು ಎಲ್ಲ ವಿರೋಧಗಳ ನಡುವೆಯೂ ನೇಮಿಸಿದ ರಾಜ್ಯಪಾಲರನ್ನ ನಾವು ಎಷ್ಟು ಅಭಿನಂದಿಸಿದರೂ, ಹೊಗಳಿದರೂ ಸಾಲದು. ಈ ಸಂದರ್ಭದಲ್ಲಿ ಅವಶ್ಯ ನೆನಪಿಸಿಕೊಳ್ಳ ಬೇಕಾದದ್ದು ಅಂದರೆ ಪ್ರೊ. ಸೂರಪ್ಪನವರನ್ನು ಕುಲಪತಿ ಹುದ್ದೆಗೆ ಕರ್ನಾಟಕದಲ್ಲೇ 2008/9 ರ ಸುಮಾರಿಗೆ ಮೈಸೂರು ವಿಶ್ವ ವಿಧ್ಯಾಲಯಕ್ಕೆ ಮತ್ತು 2017ರಲ್ಲಿ VTUಗೆ ಪರಿಗಣಿಸಲಾಗಿತ್ತಾದರೂ ಅಂತಿಮ ನೇಮಕಾತಿಯಲ್ಲಿ ಅವರಿಗೆ ಸ್ಥಾನ ಕೊಡಲಿಲ್ಲ. ಇದನ್ನು ಹೆಚ್ಚು ವಿಶದಪಡಿಸುವ ಅವಶ್ಯಕತೆಯಿಲ್ಲ ಎಂದು ಭಾವಿಸುತ್ತೇನೆ.

ಪ್ರೊ. ಸೂರಪ್ಪನವರೂ ಕೂಡ ಸುಲಭದ beaten track ಅನುಸರಿಸದೆ ತಾನು ತಮಿಳಿಗನಲ್ಲ ಎಂದು ಎಲ್ಲ ಕಡೆಯಿಂದ (ರಾಜಕೀಯ ನಾಯಕರು, ಸಾರ್ವಜನಿಕರು, ತಮಿಳು ಚಿತ್ರರಂಗದ ದಿಗ್ಗಜರಾದ ಶ್ರೀ ರಜನೀಕಾಂತ್ ಮತ್ತು ಶ್ರೀ ಕಮಲಹಾಸನ್, ಇತ್ಯಾದಿಗಳಿಂದ) ಬಂದ ವಿರೋಧವನ್ನು ಎಧುರಿಸಿ ಅಧಿಕಾರ ಸ್ವೀಕರಿಸಿ, ತಮ್ಮ ನೇರ, ದಿಟ್ಟ, ಸ್ವಚ್ಛ ಆಡಳಿತದಿಂದ ಎಲ್ಲ ವರ್ಗದ ಮನ ಗೆದ್ದು, ವಿಶ್ವವಿಧ್ಯಾಲಯವನ್ನು ಹಳೆಯ ಕರ್ಮಕಾಂಡಗಳಿಂದ ಮುಕ್ತಗೊಳಿಸಿ, ಗುಣಮಟ್ಟದ ಶಿಕ್ಷಣ ಮತ್ತು ಸಂಶೋಧನೆಯನ್ನು ಪ್ರೋತ್ಸಾಹಿಸಿ ತಮ್ಮನ್ನು ವಿರೋಧಿಸಿದವರನ್ನೂ ಸೇರಿದಂತೆ ಎಲ್ಲರ ಮನ ಗೆದ್ದಿದ್ದಾರೆ. ವಿರೋಧಿಸಿದವರನ್ನು ಎಷ್ಟು ತಾಳ್ಮೆ ಮತ್ತು ವಿನಯದಿಂದ ನಡೆಸಿಕೊಂಡಿದ್ದಾರೆ ಎಂಬುದಕ್ಕೆ ಅವರು ತಮಿಳು ಚಿತ್ರರಂಗದ ದಿಗ್ಗಜರ ಬೇಟಿಯ ಬಗ್ಗೆ ಸಂದರ್ಶನದಲ್ಲಿ ನೀಡಿರುವ ಹೇಳಿಕೆ ಸಾಕ್ಷಿಯಾಗಿದೆ.

ಕೊನೆಯದಾಗಿ, ಒಬ್ಬ ಕನ್ನಡಿಗ ದೂರದ ಪಂಜಾಬ್ ರಾಜ್ಯದಲ್ಲಿ ಒಂದು IITಯನ್ನು ಸಂಸ್ಥಾಪಿಸಿ ಬೆಳೆಸಿದ್ದಲ್ಲದೆ, ತಮಿಳುನಾಡಿನ ಒಂದು ಹೆಮ್ಮೆಯ 500ಕ್ಕೂ ಹೆಚ್ಚು ಇಂಜಿನಿಯರಿಂಗ್ ಕಾಲೇಜುಗಳನ್ನು ಹೊಂದಿರುವ ದೊಡ್ಡ ವಿಶ್ವವಿಧ್ಯಾಲಯದ ಚುಕ್ಕಾಣಿ ಹಿಡಿದು ಅದನ್ನು ಒಂದು ಉತ್ತಮ ಸ್ಥಿತಿಗೆ ತಂದಿರುವುದಕ್ಕಾಗಿ ಪ್ರೊ. ಸೂರಪ್ಪನವರ ಬಗ್ಗೆ ಮಿರ್ಲೆಯವರು ಮಾತ್ರವಲ್ಲ ಇಡೀ ಕರ್ನಾಟಕ ಮತ್ತು ಕನ್ನಡಿಗರು ಹೆಮ್ಮೆ ಪಡುವಂತಾಗಿದೆ. ಜೊತೆಗೆ ಅಂತಹವರು ಸ್ವಂತ ರಾಜ್ಯದಲ್ಲಿ ಕುಲಪತಿ ಹುದ್ದೆಯಿಂದ ಎರಡು ಭಾರಿ ವಂಚಿತರಾದರು ಎಂಬುದು ಬೇಸರವನ್ನುಂಟುಮಾಡುವ ಸಂಗತಿ.

ಇತ್ತೀಚೆಗಷ್ಟೆ ಕರೋನ ಹರಡಿದಾಗ ಅಣ್ಣಾ ವಿಶ್ವವಿಧ್ಯಾಲಯದ ವಿಧ್ಯಾರ್ಥಿನಿಲಯಗಳನ್ನು ವಶಪಡಿಸಿಕೊಂಡು, ರೂಮುಗಳ ಬೀಗ ಒಡೆದು ಕರೋನ ಕ್ವಾರಂಟೈನ್ ಗೆ ಬಳಸುವಂತೆ ಸರ್ಕಾರ ಆಧೇಶ ಹೊರಡಿಸಿದಾಗ, ಸರ್ಕಾರ ಮತ್ತು beurocracy ಯನ್ನ ಧಿಟ್ಟವಾಗಿ ಎಧುರಿಸಿ, ವಿಧ್ಯಾರ್ಥಿಗಳಿಲ್ಲದಾಗ ಬೀಗ ಒಡೆದು ಅವರ ಸಾಮಾನುಗಳನ್ನ ಹೊರಗೆಸೆಯುವುದನ್ನ ತಡೆದು, ವಿಧ್ಯಾರ್ಥಿಗಳ ಹಿತ ಕಾಯ್ದದ್ದು ಪ್ರೊ. ಸೂರಪ್ಪನವರ ದಿಟ್ಟ ಕಾರ್ಯ ನಿರ್ವಹಣೆಗೆ ಒಂದು ಉದಾಹರಣೆಯಷ್ಟೆ. ಇತ್ತೀಚಿನ ವರಧಿಯಂತೆ ಅಧಿಕಾರಶಾಯಿ ಸರ್ಕಾರ ಒಂದು ಪ್ರತ್ಯೇಕ ಮಸೂದೆಯನ್ನೇ ತಂದು ವಿಶ್ವವಿಧ್ಯಾಲಯವನ್ನು ಇಭ್ಭಾಗ ಮಾಡಿ, 500ಕ್ಕೂ ಹೆಚ್ಚು ಇಂಜಿನಿಯರಿಂಗ್ ಕಾಲೇಜುಗಳನ್ನು ಒಂದು ಬೇರೆಯೇ ವಿಶ್ವವಿಧ್ಯಾಲಯ ಮಾಡಿ ಅವುಗಳ ವಸೂಲಿಯನ್ನು ಮತ್ತೊಬ್ಬ ಕುಲಪತಿಗೆ ನೀಡಲಿದೆ. ನಾಲ್ಕು ಸ್ಥಳೀಯ ಸಂಸ್ಥಗಳನ್ನು technological and research ವಿಶ್ವವಿಧ್ಯಾಲಯ ಎಂದು ನಾಮಕರಣ ಮಾಡಿ ಅಷ್ಟನ್ನೇ ಹಾಲಿ ಕುಲಪತಿಗಳು (ಪ್ರೊ. ಸೂರಪ್ಪನವರು) ನೋಡಿಕೊಳ್ಳುವಂತೆ ಮಾಡಲಿದೆ. ಈ ಮಧ್ಯೆ, ಪ್ರೊ. ಸೂರಪ್ಪನವರ ಕೋರಿಕೆ ಮೇರೆಗೆ ಕೇಂದ್ರ ಸರ್ಕಾರ ವಿಶ್ವವಿಧ್ಯಾಲಯವನ್ನು Institute of Eminance ಎಂದು ಘೋಷಿಸಿ 1000 ಕೋಟಿ ಅನುದನವನ್ನೂ ಬಿಡುಗಡೆ ಮಾಡಲಿರುವುದಕ್ಕೆ ರಾಜ್ಯ ಸರ್ಕಾರ (ರಾಜಕಾರಣಿಗಳು ಮತ್ತು ಅಧಿಕಾರಿಗಳು) ಕ್ಯಾತೆ ತೆಗೆದು ಅದನ್ನು ತಿರಸ್ಕರಿಸುವುದಾಗಿ ಹೇಳಿದೆ.



**7. ಪ್ರೊ. ಎಂ. ಬಿ. ರಾಜೇಗೌಡ** ಅವರು ಪವನ ತಜ್ಞರಿಾಗಿ ಬೆಂಗಳೂರು ಕೃಷಿ ವಿಶ್ವವಿಧ್ಯಾಲಯದಲ್ಲಿ (ಕೃಷಿ ಹವಾಮಾನ ಪ್ರಾಧ್ಯಾಪಕ ಮತ್ತು) ಕುಲಸಚಿವರಾಗಿದ್ದಾರೆ. ಮಿರ್ಲೆಯ **ಪ್ರೊ. ಎಮ್. ಬಿ. ರಾಜೇಗೌಡ** ಅವರ ಹವಾಮಾನ ಮುನ್ಸೂಚನೆ, ಮಳೆ ಮತ್ತು ಪರಿಸರದ ಬಗೆಗಿನ ಲೇಖನಗಳನ್ನ ಮತ್ತು ಸಂದರ್ಶನಗಳನ್ನು ದಿನಪತ್ರಿಕೆಗಳಲ್ಲಿ (ಪ್ರಜಾವಾಣಿ, ಟೈಮ್ಸ್ ಆಫ್ ಇಂಡಿಯಾ) ಆಗಿಂದಾಗ್ಯೆ ನೋಡಬಹುದು.

**8.ಚೇರ್ಮನ್ ಶ್ರೀ ಹೊಸಹಟ್ಟಿ ಎಮ್. ಆರ್. ಬಲರಾಮೇಗೌಡ** ಅವರು 60ರ ದಶಕದಲ್ಲಿ

ಬಹಳ ವರ್ಷಗಳು ಮಿರ್ಲೆ ಪಂಚಾಯತಿಯ ಜನಪ್ರಿಯ, ದಕ್ಷ ಮತ್ತು ಸೇವಾಮನೋಬಾವದ ಚೇರ್ಮನ್ ಆಗಿದ್ದರು. ಅವರು ಸ್ವತಃ ಮುಂಜಾನೆ ಊರಿನ ಸ್ವಚ್ಛತೆ ಕಾರ್ಯವನ್ನು ತಮ್ಮ ಕರ್ತವ್ಯ ಎಂದು ಪರಿವೀಕ್ಷಿಸುತ್ತಿದ್ದದ್ದು ದಿನ ನಿತ್ಯದ ದೃಷ್ಯವಾಗಿತ್ತು. ಆಷ್ಟೇನು ವಿದ್ಯಾವಂತರಲ್ಲದ ಇವರು ಸಾರ್ವಜನಿಕವಾಗಿ ಊರಿನ ಮತ್ತು ಜನಗಳ ಏಳಿಗೆಗೆ ನಿಸ್ಪೃಹರಾಗಿ ದುಡಿದವರು ಮತ್ತು ಜನಾನುರಾಗಿ ನಾಯಕರು. ಹೀಗಾಗಿ ಇವರನ್ನು 'ಮಿರ್ಲೆಯ ಕಾಮರಾಜ್' ಎನ್ನಬಹುದು. ಅವರ ಕಾಲದಲ್ಲಿ ಖಾಸಗಿ ಮನೆಯೊಂದರಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಪಂಚಾಯಿತಿಯನ್ನು ವಿಶೇಷವಾಗಿ ನಿರ್ಮಿಸಿದ ಕಟ್ಟಡಕ್ಕೆ ಅಂದಿನ ಮುಖ್ಯಮಂತ್ರಿಗಳಾಗಿದ್ದ ಶೀ ನಿಜಲಿಂಗಪ್ಪನವರಿಂದ ಉದ್ಘಾಟಿಸಿ ಸ್ಥಳಾಂತರಿಸಿದರು. ಇವರ ಬಗ್ಗೆ ಅಧ್ಯಾಯ ೨ರಲ್ಲಿ (ಆಡಳಿತ ಮತ್ತು ರಾಜಕೀಯ) ಹೆಚ್ಚಿನ ವಿವರವಿದೆ.

**9.ಎಂ ಪಿ ಶ್ರೀನಿವಾಸಾ ಚಾರ್ಯ (ಪ್ರತಿಕ್ರಿಯೆ ರೂಪದಲ್ಲಿ ತಿಳಿದು ಬಂತು):** Basic Educationಗೆ ಮಿರ್ಲೆಯಲ್ಲಿ PUC ವರೆಗೆ ಕೊರತೆಯಿರಲಿಲ್ಲ. ಅಂದಿಗೆ ಇದೊಂದೆ ಊರಿನ ಹೆಗ್ಗಳಿಕೆ.PUC science in Kannada medium ನನ್ನದು. ನಮ್ಮಕ್ಕ ವೆಂಕಟಲಕ್ಷ್ಮಿ ಪ್ರಥಮ ಪ್ರಯತ್ನದಲ್ಲಿಯೇ sslc pass ಆಗಿ ಪೇಪರ್ ನಲ್ಲಿ ಫಲಿತಾಂಶ ಪ್ರಕಟವದಾಗ ಊರೇ ಕೊಂಡಾಡುತ್ತಿದ್ದುದು ಇಂದಿಗು ನಮ್ಮ ಸವಿನೆನಪು. ನಮ್ಮ ಅಕ್ಕ ಭಾವರವರಿಂದಾಗಿಯೇ ನನಗೆ ಉನ್ನತ ವ್ಯಾಸಂಗಕ್ಕೆ ಅವಕಾಶವಾಯಿತು.ಬಾಳೆಹೊನ್ನೂರಿನಲ್ಲಿ ಪ್ರೌಢಶಾಲಾ ಅಧ್ಯಾಪಕನಾಗಿ 35 ವರ್ಷ ಸೇವೆಯಿಂದ ವಯೋ ನಿವೃತ್ತಿ ಯಾಗಿದೆ.ನಮ್ಮ ತಂದೆ ಪುಟ್ಟಸ್ವಾಮಾಚಾರ್ಯರು ಕೃಷಿಯಜೊತೆಗೆ ಬಡಗಿ ಕೆಲಸ ಮಾಡುತ್ತಿದ್ದರು. ಅವಿಭಕ್ತಕುಟುಂಬ ವಿಭಕ್ತವಾಗುತ್ತಿದ್ದಂತೆ ಕೃಷಿ ಬಿಟ್ಟು ಬಡಗಿ ಕೆಲಸ. ಕಠಿಣ ದುಡಿಮೆಗೆ ಹಡದೆ ಭತ್ತ .ಜೀವನ ನಿರ್ವಹಣೆ ಪಲ್ಲ ಬಡ್ಡಿ ಸುಳಿಯಲ್ಲಿ ಮೂರಾಬಟ್ಟೆ.ಒಟ್ಟಿನಲ್ಲಿ ಈ ಕಸುಬು ನಮ್ಮ ತಲೆಗೇ ಸಾಕು ಕಣ್ರೋ ಎಂಬ ಮೊರೆ.ತಾವರೆ ಕೆರೆ ನೀರು ಒಳ್ಳಯದಿದ್ರೂ ಭವಿಷ್ಯದ ಚಿಂತನೆಗೆ ಎಡೆಮಾಡುತ್ತಿತ್ತು. ಕೆ ಆರ್ ನಗರದಲ್ಲಿ ಯಡತೊರೆ ವಿದ್ಯಾ ಸಂಸ್ಥೆ ಸ್ಥಾಪಿಸಿ BEd ಕಾಲೇಜು ಸಂಸ್ಥಾಪಿಸಿದೆ 12ವರ್ಷಗಳಿಂದ ನಡೆಯುತ್ತಿದೆ. ಆದರೆ New Edn policyಯಲ್ಲಿ ಉಳಿಸಿಕೊಳ್ಳುವುದು ಕಷ್ಟ. ಇಂದು ನನ್ನ ಎರಡೂ ಮಕ್ಕಳು MBBS ಮುಗಿಸಿ ಮಗ M S ಮಾಡುತ್ತಿದ್ದಾರೆಂದರೆ "ತಂದೆ ತಾಯಿ ಮಾಡಿದ್ದು ಮಕ್ಕಳಿಗೆ "" ಎಂಬ ನಾಣ್ಣುಡಿ ನೆನಪು. ಆದರೂ ನಮಗೆ ಮಿರ್ಲೆ ಎಂದರೆ

ರೋಮಾಂಚನ ಅದರ ಹೆಸರಿನಲ್ಲೊಂದು ಮೃದು ಕಂಪನ.(ನಿಮ್ಮ ಲೇಖನ ನಮ್ಮ ಸಮಾಜದ ಬಗ್ಗೆ fbಯಲ್ಲಿ ನೋಡಿದಾಗ ನನ್ನ ಈ ಅನಿಸಿಕೆಗೆ ಅವಕಾಶವಾಯಿತು .ಎಂ ಪಿ ಶ್ರೀನಿವಾಸಾ ಚಾರ್ಯ)

***10. ಡಾ. ಜಿ. ಆರ್. ಕುಪ್ಪುಸ್ವಾಮಿ*** ಅವರು ಮಿರ್ಲೆಯವರು, ಖ್ಯಾತ ಇತಿಹಾಸ ತಜ್ಞರೂ ವಿದ್ವಾಂಸರು. ಕರ್ನಾಟಕ ವಿವಿದ ಇತಿಹಾಸ ಮತ್ತು ಪುರಾತತ್ವ ವಿಭಾಗದಲ್ಲಿ ಪ್ರಾಧ್ಯಾಪಕರ್ರಾಗಿದ್ದ ಇತಿಹಾಸ ಮತ್ತು ಅರ್ಥಶಾಸ್ತ್ರಗಳೆರಡರಲ್ಲೂ MA ಪದವೀದರು. ಇವರು ಡೀನ್ ಆಗಿಯೂ ವಿಶ್ವವಿಧ್ಯಾಲಯದಲ್ಲಿ ಸೇವೆ ಸಲ್ಲಿಸಿದ್ದಾರೆ ಮತ್ತು ಹಲವಾರು ಸಂಶೋಧನಾ ಲೇಖನ ಮತ್ತು ಪುಸ್ತಕಗಳನ್ನು ಬರೆದಿರುವಂತಿದೆ. ಇವರ ವಂಶಸ್ಥರು ಮಿರ್ಲೆಯಲ್ಲಿ ಯಾರೆಂದು ತಿಳಿಯದು.

*Economic conditions in mediaeval Karnataka, Tank Irrigation in Karnataka: A Historical Survey* ಮತ್ತು *'ಹಿಂದು ದೇಶದ ಚರಿತ್ರ"* ಇವರ ಮುಖ್ಯ ಪುಸ್ತಕಗಳು. ಇವರ PhD ಮಹಾಪ್ರಭಂದದ ಪರಿಷ್ಕರಿಸಿದ ಸಂಕ್ಷಿಪ್ತ ರೂಪವೇ Economic conditions in Karnataka (AD 973- AD1336), Research Publication Series 22, Dharwar, Karnataka University, 1975.

'Role of Mahajanas in the History of. Medieval Karnataka', JKU (Social Sciences) VI, 1970, pp. 61 - 65

"Some Aspects of Irrigation System in Karnataka-. Historical Mysore. Canaras and Malabar, 3 vols. The Asian Educational Services.

## ಅಂತರ್ ಜಾಲದಲ್ಲಿ ಕಾಣಸಿಗುವ ಮಿರ್ಲೆಯವರ ಸುದ್ದಿಗಳು

***11. ಕೃಷ್ಣ ಮಿರ್ಲೆ ಅಚ್ಚುತ ರಾವ್ -*** Whats the story with my name? I got my own initials, an 'M' for the ancestral village Mirle and an 'A' from my father's name. M. A. Krishna. I want my name to be written as

Krishna Mirle AchutaRao. <http://www.india9.com/i9show/Mirle-70214.htm>

***12. ರವಿಶಂಕರ್ ಮಿರ್ಲೆ*** Emirates Sky Cargo’s Regional Manager Cargo Commercial, East.
<http://www.deccanherald.com/Content/May32008/she2008050265901.asp>

***13. ಮಿರ್ಲೆ ಕಾರ್ತಿಕ್*** - ಪತ್ರಕರ್ತರು? A zoologist who is also a Sanskrit scholar: That is Dr N S Leela for you, says Mirle Karthik after a chat with the multi-faceted lady who is not just a researcher and a zoologist but also a Sanskrit scholar and a writer!

***14.ಡಾ. ಶ್ರೀನಿವಾಸ್ ಮಿರ್ಲೆ*** - P&G ನಲ್ಲಿ ವಿಜ್ಞಾನಿ ಮತ್ತು ಬಹಳಕಾಲದಿಂದ AID ಸಂಸ್ಥೆಯ ಸ್ವ್ಯಂ ಸೇವಕ. ಸುನಾಮಿ ಪರಿಹಾರ ಕಾರ್ಯದಲ್ಲಿ ಭಾಗಿಯಗಿದ್ದರು.
<http://cincinnati.aidindia.org/events/mirletalk/mirletalk2.htm>
ಮಕ್ಕಳ ವಿದ್ಯಾಬ್ಯಾಸ ಮುಂದುವರಿಸಲು ಸಹಾಯ ಮಾಡುವುದರ ಬಗ್ಗೆ ಕೆಲಸ ಮಾಡುತ್ತಿದ್ದಾರೆ. srimirle@yahoo.com



***15. ಸ್ನೇಕ್ ಶಾಮ್ (ಎಮ್. ಎಸ್. ಬಾಲಸುಬ್ರಹ್ಮಣ್ಯ)*** ಅವರು ಮಿರ್ಲೆ ಶ್ರೀ ಎಮ್. ಆರ್. ಸುಬ್ಬರಾವ್ ಮತ್ತು ಶ್ರೀಮತಿ ಎ. ನಾಗಲಕ್ಷ್ಮಿ ಅವರ ಪುತ್ರ. ಮೈಸೂರಿನಲ್ಲಿ ನೆಲೆಸಿರುವ ಇವರು ಬಾಲ್ಯದಿಂದಲೇ ಹಾವು ಹಿಡಿಯುವುದು, ಅದರೊಂದಿಗೆ ಆಡುವುದು ಮತ್ತು ಸಂರಕ್ಷಿಸುವುದನ್ನೇ ಹವ್ಯಾಸವಾಗಿಸಿಕೊಂಡು ಸ್ನೇಕ್ ಶಾಮ್ ಎಂದೇ ಖ್ಯಾತಿ ಪಡೆದವರು. ಸ್ನೇಕ್ ಶಾಮ್ ಎಷ್ಟು ಕ್ಯಾತಿವೆತ್ತರು ಅಂದರೆ ಮೈಸೂರಿನಲ್ಲಿ ಒಂದು ರಸ್ತೆಗೆ ಅವರ ಹೆಸರನ್ನಿಡಲಾಗಿದೆ. ಸ್ನೇಕ್ ಶ್ಯಾಮ್ ಅವರ ಮುತ್ತಜ್ಜ ಮಿರ್ಲೆ ಶ್ರೀ



ರಾಮಣ್ಣಯ್ಯನವರು. ಇವರ ವಂಶಸ್ಥರು ಖಾಸಗಿ ಈಶ್ವರ ದೇವಸ್ಥಾನ ನಿರ್ಮಿಸಿದ್ದರು. ಅಂದು ಜಮಿನ್ದಾರರಾಗಿ ಅವರು ಒಂದೇ ಕಡೆ ನೂರು ಎಕರೆ ಪ್ರದೇಶವನ್ನು ಹೊಂದಿದ್ದರು ಎಂಬುದು ವಿಶೇಷ. ನಂತರದ ದಿನಗಳಲ್ಲಿ ಭೂಸುಧಾರಣಾ ಕಾಯಿದೆಯಡಿ 'ತಮ್ಮ ಸ್ವಾಯತ್ತತೆಯನ್ನು ಕಳೆದುಕೊಂಡವರಲ್ಲಿ ಇವರ ಕುಟುಂಬದವರ ಪಾಲು ದೊಡ್ಡದು.

***16. ಕಾವ್ಯ ಶಿವಶಂಕರ್*** ಮತ್ತು ವನ್ಯ **ಶಿವಶಂಕರ್** - ಅಮೆರಿಕ ನಿವಾಸಿ ಮಿರ್ಲೆ ಶಿವಶಂಕರ್ ಅವರ ಪುತ್ರಿಯರು. ***ಕಾವ್ಯ*** ೧೧ ವರ್ಷದವಳಿರುವಾಗ ಮಕ್ಕಳ national spelling bee ಸ್ಪರ್ಧೆಯಲ್ಲಿ ವಿಜೇತೆ. "Spellbound" ಚಿತ್ರದಿಂದ ಪ್ರಭಾವಿತಳು ಮತ್ತು ತನ್ನ ತಂದೆಯ ಮಾರ್ಗದರ್ಶನದಲ್ಲಿ ತಯಾರಿ ಪಡೆದವಳು. ಮುಂದೆ ತಂಗಿ **ವನ್ಯ ಶಿವಶಂಕರ್** ಮುಂದೆ ಕೂಡ ಪ್ರತಿಷ್ಟಿತ ವಾಶಿಂಗ್ಟನ್ "ಸ್ಪೆಲ್ಲಿಂಗ್ ಬೀ" ವಿಜೇತೆಯಾದರು .

Kavya Shivashankar said she still enjoys each time at the microphone. But each word — each letter — uttered is a result of hard work. "It's fun to break each word up," Kavya said. "It helps me with vocabulary and has taught me good discipline." It's a hobby — she still frequently watches her favorite movie, "Spellbound," for inspiration. But spelling is also a practice. She learns patterns and etymology and does quizzes with her father and coach, Mirle Shivashankar. Mirle Shivashankar said Kavya has learned to be a "spelling detective." "Spelling is not about memorizing," he said. "It is about understanding the clues behind the words."

***17. ಚಾಯಾಪತಿ ವಿ. ಮಿರ್ಲೆ*** - CPA, Financial & Tax Planning, Tax Preparation, Accounting, Financial & Management Consulting for Individuals & Businesses. #1000, John R Road Suite 100 Troy, MI 48083. cvmirle@cvmirle.com <mailto:cvmirle@cvmirle.com> .

ಇವರು ಹುಣಸಮ್ಮನ ಗುಡಿ ಅರ್ಚಕರಾದ ಶ್ರಿ ಮಂಜಣ್ಣಯ್ಯನವರ ಹಾಗೂ ಎಲ್. ಐ. ಸಿ. ದೆವೆಲಪ್ ಮೆಂಟ್ ಆಫೀಸರ್ ಆಗಿದ್ದ ಎಮ್. ವಿ. ಶ್ರೀನಿವಾಸಮೂರ್ತಿ ಅವರುಗಳ ತಮ್ಮಂದಿರು.

***18. ಚೇತನ ಮಿರ್ಲೆ*** ಆಹಾರೋದ್ಯಮದಲ್ಲಿ ಪ್ರಾಣಿ ಕಲ್ಯಾಣದ ಬಗ್ಗೆ ಉದ್ಯೋಗ ಮತ್ತು Humane Society International (HSI) ನಲ್ಲಿ ಭಾಗಿ. **Chetana Mirle,** Working with the food industry in India on animal welfare issues is a unique experience. Humane Society International (HSI) has been a welcome participant in animal industry expos within India, and has been invited to submit articles on humane poultry production to major industry publications.

***19.ಶ್ರಿನಿವಾಸ್ ಮಿರ್ಲೆ*** The Procter & Gamble Company, Cincinnati A, Ohio 45202, United States.

***20.ಮಿರ್ಲೆ ಆರ್. ಗಿರೀಶ್,*** MD, FCCP; Ryland P. Byrd, MD, FCCP, ತಜ್ಞರು Critical Care Medicine, Internal Medicine, ಮತ್ತು Pulmonary, ಜಾನ್ಸನ್ ಪಟ್ಟಣ, ಟೆನ್ನಿಸ್ಸೆ. Dr. Girish practices Critical Care Medicine, Internal Medicine, and Pulmonary in Johnson City, Tennessee. Dr. Mirle Girish graduated with an MD.



**21. ಜಮುನರಾಣಿ ವಿ. ಮಿರ್ಲೆ:** ಮಿರ್ಲೆಯಲ್ಲಿ ಹುಟ್ಟಿ ಬೆಳೆದ ಇವರು ಜೋತಿಷ್ಯದ ಬಗ್ಗೆ ಆಸಕ್ತಿ ತಳೆದು, ಶ್ರೀ ಕೆ. ಜಿ. ರಾಮಚಂದ್ರ ಅವರ ಸಹಾಯದಿಂದ ಅದರಲ್ಲಿ ಪ್ರಾವೀಣ್ಯತೆ ಪಡೆದರು. ಜೊತೆಜೊತೆಗೆ ನರ್ತನ ಮತ್ತು ಚಿತ್ರಕಲೆಯನ್ನೂ ಅಭ್ಯಾಸಿಸಿ "ಜ್ಯೋತಿಷ್ಯದ ಧೃಕ್ಕನ ದೇವತೆಗಳು" (zodiac gods) ಎಂಬ ಪ್ರದರ್ಶನವನ್ನು ಮೈಸುರಿನಲ್ಲಿ ನೀಡಿದರು.

ಇವರು ಫೇಸ್ ಬುಕ್ ನಲ್ಲಿ ಸದಸ್ಯರಾಗಿದ್ದಾರೆ.




**22. ಅಮೋಘ**: ಇತ್ತೀಚಿನ ವರ್ಷಗಳಲ್ಲಿ ಜೀ ಟಿ ವಿ ಯ 'ಡ್ರಾಮ ಜೂನಿಯರ್ಸ್" ನಲ್ಲಿ ಅಮೋಘಳ ಸಾಧನೆ ಮಿರ್ಲೆಯವರೆಲ್ಲರೂ ಹೆಮ್ಮೆ ಪಡುವಂತಹದು. ಅವಳ ನಟನೆಗೆ ಮಾರುಹೋಗಿ ತೀರ್ಪುಗಾರರು ಅವಳನ್ನು ಖ್ಯಾತ ನಟಿ ಪಂಡರೀಬಾಯಿಗೆ ಹೋಲಿಸುತ್ತಿದ್ದರು.

***23.ಮಿರ್ಲೆಯ ಮೊದಲ ಡಾಕ್ಟರ್ ಪುಟ್ಟಯ್ಯನವರೆ?*** ಹೌದು, **ಮಿರ್ಲೆ ಪುಟ್ಟಯ್ಯ** ಎಂಬುವವರು 1940ರ ಸುಮಾರಿಗೆ ಮೈಸೂರು ಅರಮನೆಯ ಆರೋಗ್ಯ ಕೇಂದ್ರದಲ್ಲಿ ಅಸಿಸ್ಟೆಂಟ್ ಸರ್ಜನ್ ಆಗಿದ್ದರು ಎನ್ನಲಾಗಿದೆ. ಅವರ ಪೂರ್ವಿಕರು ಮಿರ್ಲೆಯವರೊ ಅಥವ ಅವರೇ ಮಿರ್ಲೆಯಲ್ಲಿ ಹುಟ್ಟಿ ಬೆಳೆದವರೊ ತಿಳಿಯದು.

24. **Ravishankar Mirle**, Emirates SkyCargo's Regional Manager Cargo Commercial, East.
http://www.deccanherald.com/Content/May32008/she2008050265901.asp

25. **Srinivas Mirle:** AID is sponsoring a tsunami relief seminar from 4-6 p.m. Monday, May 2, in the Engineering Research Center, Room 427. Srinivas Mirle, a P&G scientist and longtime AID volunteer, will share his experience of assisting victims in the tsunami-affected areas, as will Professor of Social Work Steven Sunderland, who traveled with a delegation to Indonesia in March to promote peace and healing in the region. "Dr. Mirle has been visiting the affected villages and visiting with children there, and one of the major interests of AID is in helping the children. They

have been orphaned, many have lost siblings and classmates – their education is affected by the tsunami. Dr. Mirle has been working toward helping the children continue their education," says Khar.

## ಅನುಬಂಧ ಲ

# *ಪ್ರವಾಸೀ ತಾಣಗಳಾಗುವ ಸಾಧ್ಯತೆಗಳಿದ್ದ ಕಾವೇರಿ ತೀರ, ಸಣ್ಣ ಮಠ ಮತ್ತು ತಡಕಡ - ಪ್ರತಿಕ್ರಿಯೆಗಳು ಮತ್ತು ಚರ್ಚೆ*

**ಕಿಶೋರ್ ಕುಮಾರ್** : ನೀವು ಹೇಳಿದ ಎಲ್ಲಾ ಲಕ್ಷಣಗಳು ಸಣ್ಣಮಠ ಹಾಗೂ ನದಿತಿರುವಿಗೆ ಇದೆ. ಈ ತಾಣಗಳನ್ನು ರೆಸಾರ್ಟ್ ನಿರ್ಮಿಸಿ ಪ್ರವಾಸಿ ತಾಣಗಳಾಗಿ ಪರಿವರ್ತಿಸಿದರೆ ಅನುಕೂಲಕ್ಕಿಂತ ಅನಾನುಕೂಲವೇ ಹೆಚ್ಚು. ನಮ್ಮ ಊರಿನ ಹೆಚ್ಚು ಫಲವತ್ತಾದ ಜಮೀನು ಆ ರಸ್ತೆ ಹಾಗೂ ಅಲ್ಲಿಯ ಪರಿಸರದಲ್ಲೇ ಇದೆ., ರೆಸಾರ್ಟ್ ನಿರ್ಮಿಸುವದರಿಂದ ನಮ್ಮೂರು ವ್ಯವಹಾರಿಕವಾಗಿ ಬೆಳೆಯುತ್ತದೆ ನಿಜ ಆದರೆ ಅಪರೂಪಕ್ಕೆ ಬರುವ ಪ್ರವಾಸಿಗರ ಅತ್ಯಾಧುನಿಕ ಜೀವನಶೈಲಿ ಯುವಕರ ಹಾಗೂ ಪರಿಸರದ ಮೇಲೆ ವ್ಯತಿರಿಕ್ತ ಪರಿಣಾಮ ಉಂಟು ಮಾಡುವದು ಖಂಡಿತ .ಉದಾಹರಣೆಗೆ ಮುತ್ತತ್ತಿ ಹಿಂದೆ ರಜಾಸಮಯ ಕಳೆಯಲು ಉತ್ತಮ ತಾಣವಾಗಿದ್ದ ಅದು ಈಗ ಪ್ಲಾಸ್ಟಿಕ್ , ಗಾಜಿನಸೀಸೆ ಮುಂತಾದ ಹಾನಿಕಾರಕ ವಸ್ತುಗಳಿಂದ ತುಂಬಿ ಅನೈತಿಕ ಚಟುವಟಿಕೆಗಳ ಆಗರವಾಗಿದೆ ..ಈ ಅಪಾಯ ನಮ್ಮೂರಿನ ತಾಣ ಹಾಗೂ ಜನಕ್ಕೆ ಬರುವುದು ಬೇಡವೆಂದು ನನ್ನ ಹಾರೈಕೆ ಏಕೆಂದರೆ ನನ್ನ ಮುಂದಿನ ಪೀಳಿಗೆಗೂ ನನ್ನೂರನ್ನು ಈಗ ಇರುವಂತೆಯೇ ಯಾವುದೇ ಬೇರೆ ಛಾಯೆಯಿಲ್ಲದೆ ಪರಿಚಯಿಸಬೇಕೆಂದು ನನ್ನ ಆಶಯ.., ಊರಿನ ಬೆಳವಣಿಗೆಗೆ ನನ್ನ ವಿರೋಧವಿಲ್ಲ ಆದರೆ ಊರು ಮೂಲಕ್ಕೆ ಹಾಗೂ ಸಾಂಸ್ಕೃತಿಕ ನೆಲೆಗಟ್ಟಿಗೆ ಪೆಟ್ಟಾಗದಂತೆ ಬೆಳೆದರೆ ಚೆಂದ.,

**ಕಾಂತರಾಜು:** ಪ್ರವಾಸಿತಾಣವಾದರೆ ಪರಿಸರ ಹಾಳಾಗಬೇಕೆಂದೇನಿಲ್ಲ .ವಾಸಕ್ಕಾಗಿ ಮನೆ ಕಟ್ಟಿಕೊಂಡರೆ ಅದರ ಮುಂದೆ ದುರ್ನಾಥ ಬೀರುವ ಚರಂಡಿಯೇ ಇರಬೇಕೆಂದೇನಿಲ್ಲ . ಪರಿಸರ ಸಂರಕ್ಷಣೆ ನಾವು ನಿರ್ವಹಿಸುವ ರೀತಿ ನೀತಿ, ಇಟ್ಟುಕೊಳ್ಳುವ ಕಟ್ಟುಪಾಡುಗಳನ್ನು ಅವಲಂಬಿಸಿರುತ್ತದೆ .ಇಲ್ಲಿಯ ಚರ್ಚೆಗೆ ತುಸು ಭಾರವೆನಿಸಿದರೂ ವಿಷಯ ಸ್ಪಷ್ಟನೆಗಾಗಿ ಮುಂದುವರಿಸಿ ಹೇಳಲಿಚ್ಚಿಸುತ್ತೇನೆ .ಪ್ರವಾಸೋದ್ಯಮ ,ಕೈಗಾರಿಕೋದ್ಯಮಗಳನ್ನು ಸರಿಯಾಗಿ ನಿರ್ವಹಿಸಿದರೆ ಪರಿಸರವೇನೂ ಹಾಳಾಗುವುದಿಲ್ಲ. ಸಿಂಗಪುರ್, ಸ್ವಿಟ್ಜರ್ಲೆಂಡ್, ಪ್ಯಾರೀಸ್ ಪಟ್ಟಣಗಳಿಗೆ ಪ್ರವಾಸಿಗರು ಮುತ್ತಿಕೊಳ್ಳುತ್ತಾರೆ .ಅವುಗಳನ್ನು ಕಣ್ಣರಳಿಸಿ ನೋಡುತ್ತೇವೆ .ಅಲ್ಲೆಲ್ಲಾ ಉತ್ತಮ ಪರಿಸರ ಕಾಪಾಡಿಕೊಂಡಿದ್ದಾರೆ .ಸ್ವಿಟ್ಜರ್ಲೆಂಡ್ ನಲ್ಲಿ

ಪ್ರವಾಸಿಗಳು ಹಿಮಪರ್ವತಗಳಿಗೆ ಹೋಗಿಬರಲು ಮಾಡಿರುವ ಅದ್ಭುತ ವ್ಯವಸ್ಥೆಯನ್ನು ನಮ್ಮ ಹಿಮಾಲಯ ಪರ್ವತದ ಚಾರ್ಧಾಮಗಳಿಗೂ ಹೋಗಿಬರಲು ಮಾಡಿದ್ದಿದ್ದರೆ ಕೇದಾರ್ನಾಥ್ ಬದರಿನಾಥ್ ಗಳಲ್ಲಿ ಈಗ ಸಂಭವಿಸಿರುವ ಪ್ರಳಯಸಮಾನ ದುರ್ಘಟನೆ, ಸಾವಿರಾರು ಸಾವು ನೋವುಗಳು ತಪ್ಪುತ್ತಿರಲಿಲ್ಲವೇ? ಇದು ಪ್ರಕೃತಿ ವಿಕೋಪದಿಂದ ಆಗಿದೆಯೆಂದರೂ ಅದಕ್ಕೆ ಮುಂಚಿತವಾಗಿ ಸಿದ್ಧತೆ ನಡೆಸಿರಬೇಕಿತ್ತು .ಸರಿಯಾದ ವ್ಯವಸ್ಥೆ ಮಾಡಿದರೆ ಆಗಾಗ ಬಸ್ಸು, ಕಾರುಗಳು ಕಣಿವೆಗಳಿಗೆ ಬಿದ್ದು ಆಗುವ ಅನಾಹುತಗಳು ತಪ್ಪುತ್ತವೆ .ಮೇಲೆ ಹೇಳಿದ ಪಟ್ಟಣಗಳು ಮತ್ತು ದೇಶಗಳು ಪ್ರವಾಸೋದ್ಯಮದಿಂದ ಆರ್ಥಿಕವಾಗಿಯೂ ಮುಂದುವರಿದಿವೆ .ಪರಿಸರ ತುಂಬಾ ಚನ್ನಾಗಿಯೇ ಇದೆ ಅಷ್ಟೆಲ್ಲಾ ದೂರದ ಮಾತು ಬಿಡಿ , ಮಿರ್ಲೆಯ ಪಕ್ಕದಲ್ಲೇ ಇರುವ ಸಾಲಿಗ್ರಾಮ ವಾಣಿಜ್ಯೋದ್ಯಮದಲ್ಲಿ ಎಷ್ಟು ಮುಂದುವರಿದಿದೆ !ಅಲ್ಲಿರುವಷ್ಟು ಅಂಗಡಿಗಳು ,ಹೋಟೆಲ್ ಗಳು ಮಿರ್ಲೆಯಲ್ಲಿ ಇಲ್ಲವೇಕೆ ? ಇವುಗಳಿಂದ ಆರ್ಥಿಕ ಲಾಭವಿಲ್ಲವೆ ? ತಮಿಳಿನ ಐಯ್ಯರ್ ಎಂಬುವವರೊಬ್ಬರು ಅನೇಕ ವರ್ಷಗಳು ಮಿರ್ಲೆಯಲ್ಲಿ ಯಶಸ್ವಿಯಾಗಿ ಹೋಟೆಲೊಂದನ್ನು ನಡೆಸಿ ಅವರ ದೊಡ್ಡಸಂಸಾರವನ್ನೇ ಸಾಕಿಬೆಳೆಸಿದರು .ತಮಿಳಿನವರಾದ್ದರಿಂದ ಅವರ ಭಾಷೆಯನ್ನೂ ಮಿರ್ಲೆಯಲ್ಲಿ ಮೆರೆಸಿ ಅದರ ಬೀಜ ಬಿತ್ತಿಹೋದರು .ನಮ್ಮಲ್ಲಿ ಅನೇಕರಿಗೆ ಬೇಸಾಯವೊಂದೇ ಗೊತ್ತಿರುವುದು .ಅದೂ ಕೆಲವು ನಿರ್ಧಿಷ್ಟ ಬೆಳೆಗಳು,ನಾಲಾ ಬಯಲಿನಲ್ಲಿ ಫಲವತ್ತಾದ ಭೂಮಿ ಇದ್ದರೆ !ಹೊಲಗಳಲ್ಲಿ ಮಳೆನೀರಿನಿಂದ ಫಸಲು ತೆಗೆಯುವುದರಲ್ಲಿ ಹಿಂದೆ ಉಳಿದಿದ್ದೇವೆ .ಕೋಲಾರದ ಕಡೆ ಬೋರ್ವೆಲ್ ಹಾಕಿಸಿಕೊಂಡು ಉತ್ತಮಬೆಳೆ (ಹೆಚ್ಚು ಹಣ್ಣು,ತರಕಾರಿ) ತೆಗೆಯುತ್ತಾರೆ. ದುಬೈನಲ್ಲಿ ಫಲವತ್ತಾದ ಭೂಮಿಯಿದೆಯೆ? ಮರಳುಭೂಮಿಯಲ್ಲೂ ಫಲವತ್ತಾದ ಮಣ್ಣನ್ನು ಹರಡ ಕೃತಕ ಭೂಮಿಯಲ್ಲಿ ಬೆಳೆ ತೆಗೆಯುತ್ತಾರೆ .ಗ್ರೀನ್ ಹೌಸ್ ಬಳಕೆ ಮುಂತಾದ ಆಧುನಿಕ ಪದ್ಧತಿ ಅನುಸರಿಸುತ್ತಾರೆ .ನೆದರ್ಲ್ಯಾಂಡ್ )ಹಾಲೆಂಡ್ (ನಲ್ಲಿ ಹಸು,ಕುರಿ,ಕೋಳಿ,ಕುದುರೆ,ಸಾಕಾಣಿಕೆ ಚನ್ನಾಗಿದ್ದು ಕ್ಷೀರೊದ್ಯಮ ಅಭಿವೃದ್ಧಿಹೊಂದಿದೆ . ಅಲ್ಲೆಲ್ಲಾ ಪರಿಸರ,ಜನರ ಆರೋಗ್ಯ ಸೂಪರ್ !ಜಪಾನ್,ಜರ್ಮನಿಗಳಲ್ಲಿ ಕೈಗಾರಿಕೋದ್ಯಮ ಅಭಿವೃದ್ಧಿ ಚನ್ನಾಗಿದ್ದರೂ ಪರಿಸರ ಉತ್ತಮವಾಗಿದೆ .ಜಪಾನ್ ಪ್ರಕೃತಿ ವಿಕೋಪಕ್ಕೆ ತುತ್ತಾಗುವುದುಂಟು .ಅದನ್ನೂ ಸಮರ್ಥವಾಗಿ ಎದುರಿಸುತ್ತಾರೆ .ಮಿರ್ಲೆಯ ಉತ್ತಮ

ಕೃಷಿಕರೊಬ್ಬರ ಬಗ್ಗೆ ಚಿತ್ರಸಹಿತ ಲೇಖನವನ್ನು ಒಮ್ಮೆ ಪ್ರಜಾವಾಣಿಯಲ್ಲಿ ಓದಿ ಸಂತೋಷವಾಯಿತು .ಪ್ರವಾಸಿತಾಣವನ್ನು ಕಾವೇರಿ ದಡದಲ್ಲಿ ಮಾಡಿದರೂ ಒಳ್ಳೆ ಪರಿಸರ ಕಾಪಾಡಿಕೊಳ್ಳುವುದು ಸಾಧ್ಯ .ಹೇಳುವುದು ಸುಲಭ ಮಾಡುವುದು ಕಷ್ಟ ಎಂಬ ಮಾತು ನನ್ನ ಮನಸ್ಸಿನಲ್ಲಿ ಕುಳಿತಿದ್ದು ತುಸು ಹಿಂಜರಿಕೆ ಇಂದಲೇ ಇಷ್ಟು ಹೇಳುತ್ತಿದ್ದೇನೆ .ಇದು ಕೊರೆತ ಎನ್ನಿಸಿದರೆ ಕ್ಷಮೆ ಇರಲಿ.

**ಉ** :ಕಿಶೋರ್ ಕುಮಾರ್, ನಿಮ್ಮ ಅನಿಸಿಕೆಯನ್ನು ಗೌರವಿಸುತ್ತೇನೆ .ಮಿರ್ಲೆಯ ಪ್ರವಾಸೋಧ್ಯಮ ಸಾಧ್ಯತೆಯ ಬಗ್ಗೆ ಪ್ರತ್ಯೇಕವಾಗಿಯೇ ಬರೆಯುವ ಉದ್ಧೇಶವಿತ್ತು .ಇರಲಿ, "ಅಭಿವೃದ್ಧಿ ವೆರ್ಸಸ್ ಪರಿಸರ ನಾಶ "ಬಹಳ ಚರ್ಚೆಗೆ ಗ್ರಾಸವಾದ ವಿಷಯ .ಯಾವುದೇ ವಾಣಿಜ್ಯೋದ್ಯಮ, ಕೈಗಾರಿಕೆ ಮತ್ತು ಪ್ರವಾಸೋಧ್ಯಮದಿಂದ ಪರಿಸರ ಹಾನಿ ನಮ್ಮ ದೇಶದಲ್ಲಿ ಅನಿವಾರ್ಯ .ಆದರೆ ಇದಾವುದೂ ಇಲ್ಲದೆಯೂ, ಕಳೆದ 50 ವರ್ಷಗಳಲ್ಲಿ ಮಿರ್ಲೆಯ ಬಳಿ ಹರಿವ ಕಾವೇರಿ ನೀರು ಕಲುಷಿತವಾಗಿ, ದಂಡೆಯಲ್ಲಿದ್ದ ಕಾಡು ನುಣ್ಣಗಾಗಿ ದಡ ಕೊಚ್ಚಿಹೋಗಿರುವುದು ಮಾತ್ರ ವಿಪರ್ಯಾಸ !ಮೇಲೆ ತಿಳಿಸಿದ ನನ್ನ ನೆನಪಿನಲ್ಲಿರುವ ಕಾವೇರಿ ತೀರದ ಚಿತ್ರ ಮುಂದಿನ ಪೀಳಿಗೆಗಿರಲಿ ಇಂದಿನ ಪೀಳಿಗೆಗೆ ಅಲ್ಲಿ ಕಾಣಸಿಗದು . ಅಲ್ಲದೆ ಮೂಲ ಸೌಕರ್ಯಗಳನ್ನು ಕಲ್ಪಿಸದೇ ಇದ್ದರೆ ಮಿರ್ಲೆಯವರೂ ಈಗ ಇರುವುದನ್ನೂ ಅನುಭವಿಸಲಾರರು .ಅಂದರೆ ಪರಿಸರ ಹಾನಿಯನ್ನು ಆದಷ್ಟು ಖನಿಷ್ಠಗೊಳಿಸುವ ಪ್ರಯತ್ನದೊಂದಿಗೆ ಅಭಿವೃದ್ಧಿಯಿರಬೇಕು .ಅಭಿವೃದ್ಧಿಯ ಸಂಪೂರ್ಣ ನಿರಾಕರಣೆ ಸರಿಯೆ?. ಮಿರ್ಲೆಯ ಅರ್ಧಕ್ಕೂ ಹೆಚ್ಚು ಭಾಗ, ಅಂದರೆ ಚಾಮರಾಜ ನಾಲೆಯ ಕೆಳಭಾಗವೆಲ್ಲಾ, ನೀರಾವರಿಗೆ ಒಳಪಡಬಹುದಾಗಿದ್ದ ಫಲವತ್ತಾದ ಭೂಮಿ .ಅಮೃತೆಶ್ವರ ದೇವಸ್ಥಾನ ಸ್ಥಳಾಂತರಿಸಿದ್ದೂ ಫಲವತ್ತಾದ ಭೂಮಿ ಹಿಂಪಡೆಯಲೇ ಅಲ್ಲವೆ?

**ಕಿಶೋರ್ ಕುಮಾರ್ :** ಸಾರ್ ನಿಮ್ಮ ಅಭಿಪ್ರಾಯ ಉತ್ತಮವಾಗಿದೆ ಇದು ನಿಮ್ಮ ಉತ್ತಮ ಅನುಭವ . ನನಗೂ ನನ್ನೂರ ಹೆಸರು ಉತ್ತುಂಗಕ್ಕೆರುವುದು ಇಷ್ಟ ಆದರೆ ನಮ್ಮ ದೇಶದ ರಾಜಕೀಯ ದುರವಸ್ಥೆ, ಇಚ್ಚಾಶಕ್ತಿಯಿಲ್ಲದ ಅಧಿಕಾರಿ ಸಮೂಹ ಇತ್ಯಾದಿಗಳಿಂದ ..ಒಂದು ಊರನ್ನು ಪ್ರವಾಸಿ ಕೇಂದ್ರ ಮಾಡುವಲ್ಲಿ ಇರುವ ಉತ್ಸಾಹ, ಆಸಕ್ತಿ ನಂತರ ಅದನ್ನು ಬೆಳೆಸುವಲ್ಲಿ ತೋರುತಿಲ್ಲ.., ಈ ವ್ಯವಸ್ಥೆ ಬದಲಾಗಬೇಕು ಆಗ ನಾವು ಕೂಡ ನಮ್ಮೂರನ್ನು ಪ್ರವಾಸಿತಾಣವಾಗಿ ಜಾಗತಿಕ ಮಟ್ಟದಲ್ಲಿ ಗುರುತಿಸುವಂತೆ ಮಾಡಬಹುದು.,

ಉದಾಹರಣೆಗೆ ಥೇಮ್ಸ್ ನದಿಯ ದಂಡೆಯಲ್ಲೇ ಲಂಡನ್ ನಗರ ಬೆಳೆದಿದರೂ ಅಪಾಯವಾಗದಂತೆ ಎಚ್ಚರವಹಿಸಿರುವ ಅವರ ಜಾಣ್ಮೆ ನಿಜಕ್ಕೂ ಶ್ಲಾಘನಿಯ.., ಅಲ್ಲಿನ ರೀತಿ ಕಾವೇರಿ ತಟವೂ ಬೆಳೆದರೆ ನಿಜಕ್ಕೂ ಸ್ವಾಗತಾರ್ಹ ಆದರೆ ಇದು ಮತ್ತೊಂದು ಕೇದರ, ಬದ್ರಿನಾಥ, ಗಂಗಾತಟವಾಗದಿದ್ದರೆ ಸಾಕು .ಇನ್ನೂ ಕಾವೇರಿ ನದಿಯ ದಂಡೆಯ ಸವೆತದ ಬಗ್ಗೆ ಹೇಳುವುದದರೇ ಇದು ಅರಣ್ಯ ಹಾಗೂ ಪರಿಸರ ಸಂರಕ್ಷಣೆ ಇಲಾಖೆಯವರ ದಿವ್ಯ ನಿರ್ಲ್ಯಕ್ಷ ಏಕೆಂದರೆ ಸವೆತ ಉಂಟಾಗುತ್ತಿರುವುದು ನದಿದಂಡೆಯ ಮರಗಳ ನಾಶದಿಂದ ಇವುಗಳ ರಕ್ಷಣೆ ಸಾಧ್ಯವಾಗಿದ್ರೆ ಇಂದು ನದಿ,ನದಿದಂಡೆ,ಪರಿಸರ & ಅಂತರ್ಜಲ ಮಟ್ಟ ಉತ್ತಮವಾಗಿರುತ್ತಿತ್ತು, ಇನ್ನೂ ಕಲುಷಿತದ ಬಗ್ಗೆ, ನದಿದಂಡೆಯ ಊರುಗಳ ಗಟಾರ, ರೈತರು ಗದ್ದೆಗೆ ಬಳಸಿದ್ದ ಗೊಬ್ಬರ,ರಾಸಾಯನಿಕಗಳ ಜಿನುಗು ಹಾಗೂ ಕಾರ್ಖಾನೆಯ ನೀರನ್ನು ನದಿಗೆ ಸೇರಿಸುವುದನ್ನು ತಪ್ಪಿಸಬೇಕು .ಕಾರ್ಖಾನೆಗಳಿಗೆ ನೀರಿನ ಬಳಕೆ ಬಗ್ಗೆ ಮಾರ್ಗದರ್ಶಿಸೂತ್ರವಿದ್ದರೂ ಅದನ್ನೂ ಪಾಲಿಸುವವರೆಷ್ಟೂ ಜನ??!! ನಾನು ಕಂಡ ಒಂದು ನೈಜದೃಶ್ಯ ಸುಮಾರು 2ವರ್ಷದ ಹಿಂದೆ ನಂಜನಗೂಡಿನ ಬಳಿ ಬಟ್ಟೆ ಕಾರ್ಖಾನೆಯೊಂದರಲ್ಲಿ ಬಳಸಿದ್ದ ರಾಸಾಯನಿಕಯುಕ್ತ ನೀರನ್ನು ಸಂಸ್ಕರಿಸದೇ ರಾತ್ರಿಯ ವೇಳೆ ನದಿಗೆ ಸೇರಿಸಿದರು ಇದು ಎಷ್ಟು ಸರಿ??! ಇದು ಸರ್ಕಾರಕ್ಕೆ ಗೊತ್ತಿಲ್ಲವೇ?? ಕಾರ್ಖಾನೆಗಳು ಮೇಲ್ನೋಟಕ್ಕೆ ಅಭಿವೃಧಿ ಪೂರಕವಾಗಿದರೂ ನಡೆಯುತ್ತಿರುವುದೇನೂ? ಅವರಿಗೆ ವೈಜ್ಞಾನಿಕ ಜ್ಞಾನವಿಲ್ಲವೇ?!? ನನ್ನ ಅಂತಿಮ ಅಭಿಪ್ರಾಯ :ಊರು ಅಭಿವೃದಿ ಹೊಂದಿಯೂ ಹಾಳಾಗಬಾರದೆಂದರೆ ಪರಿಸರ ಸಂರಕ್ಷಣೆಯ ಮಾತು ಪುಸ್ತಕದಲ್ಲಿರದೇ ಆಚರಣೆಯಲ್ಲಿರಲಿ .ಸರ್ಕಾರದ ಪರಿಸರ ಸಂಬಂಧಿ ಇಲಾಖೆಗಳು ಕಾರ್ಯಪವೃತ್ತವಾಗಲಿ .. ಆಗ ಊರಿನ ಸರ್ವತೋಮುಖ ಬೆಳವಣಿಗೆ ಸಾದ್ಯ.

# ಗ್ರಂಥಋಣ

## ಕನ್ನಡ:

ಅನಂತಮೂರ್ತಿ, ಯು. ಆರ್., *ಮಾತು ಮರೆತ ಭಾರತ*, ಬೆಂಗಳೂರು, ಅಭಿನವ, 2007,

ಮೈಸೂರು ವಿಶ್ವವಿದ್ಯಾಲಯ, ಕನ್ನಡ ಅಧ್ಯಯನ ಸಂಸ್ಥೆ. *ಎಪಿಗ್ರಫಿಯಾ ಕರ್ನಾಟಕ* (*Epigrphia Karnataka),* ೫ನೆ ಸಂಪುಟ, ೧೯೭೬.

*ಕರ್ನಾಟಕ ಸರ್ಕಾರ. ಕರ್ನಾಟಕ ಗೆಜೆಟಿಯರ್: ಮೈಸೂರು ಜಿಲ್ಲೆ.* ಪ್ರದಾನ ಸಂ: ಸೂರ್ಯನಾಥ ಯು ಕಾಮತ್. ಸರ್ಕರಿ ಮುದ್ರಣಾಲಯ, ಬೆಂಗಳೂರು, ೧೯೮೮.

*ಕರ್ನಾಟಕ ಸರ್ಕಾರ.* ಕೃಷ್ಣರಾಜನಗರ ತಾಲ್ಲೂಕು *ಗೆಜೆಟಿಯರ್. ಲೇ: ತೇ. ಸಿ. ವಿಶ್ವೇಶ್ವರ. ಮುಖ್ಯ* ಸಂ:ಎಸ್. ಅನೀಸ್ ಸಿರಾಜ್. ಬೆಂಗಳೂರು, ೨೦೧೧.

ತೇಜಶ್ರೀ, ಜ. ನ, *ಸುರಗಿ: ಯು. ಆರ್. ಅನಂತಮೂರ್ತಿ ಅವರ ಅತ್ಮಕಥನ*. ಹೆಗ್ಗೋಡು, ಅಕ್ಷರ ಪ್ರಕಾಶನ, ೨೦೧೨.

ದಯಾನಂದ, ನಾ. *ಬಂಗಾರದ ತೆನೆ* (ಎಮ್. ಟಿ. ರಾಮುಸ್ವಾಮಿಗೌಡರ ಜೀವನ ಕಥನ),

ರಾಮ ಕೃಷ್ಣರಾವ್, ಬಿ. (ಸಂ). *ಶ್ರೀಮನ್ಮಹಾರಾಜರ ವಂಶಾವಳಿ. ಭಾಗ ೧ ಮತ್ತು ೨. ಮೈಸೂರು, ಸರ್ಕಾರಿ ಮುದ್ರಣಾಲಯ, ೧೯೧೬ ಮತ್ತು ೧೯೨೨.*

ರಾಮಚಂದ್ರರಾವ್, ಸಿ. ಏನ್. ನೆರಳುಗಳ ಬೆನ್ನು ಹತ್ತಿ, .

ರಾಮರಾವ್, ನವರತ್ನ . *ಕೆಲವು ನೆನಪುಗಳು*, ೫ನೇ ಮುದ್ರಣ, ಡಿ. ವಿ. ಕೆ. ಮೂರ್ತಿ, ಮೈಸೂರು, 2006.

ಸತ್ಯನ್, ಟಿ. ಏಸ್. "ಕಾಲಕ್ಕೆ ಕನ್ನಡಿ: ಫೋಟೋಗ್ರಾಫರನ ಕೆಲವು ನೆನಪುಗಳು", ಪ್ರಿಸಮ್, 2003.

ಸುಂದರರಾವ್, ಬ. ನ. *ಬೆಂಗಳೂರಿನ ಇತಿಹಾಸ*, ಬೆಂಗಳೂರು, ಅಂಕಿತ, ೧೯೮೫.

ಸೂರ್ಯನಾಥ ಕಾಮತ್, ಸಂ. *ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು [ಕರ್ನಾಟಕದ ಸಂಗ್ರಾಮವನ್ನು ಕುರಿತು]*, ಸಂಪುಟ ೩, ಮೈಸೂರು, ಗೀತಾ ಬುಕ್ ಹೌಸ್, ೧೯೮೦.

ಶ್ರೀಧರ ಮೂರ್ತಿ. *ಒಡೆಯರು ಮತ್ತು ಮೈಸೂರು.* ಮೈಸೂರು: ಕರ್ನಾಟಕ ಸಹಕಾರಿ ಪ್ರಕಾಶನ, ೧೯೭೨.

ಶ್ರೀನಿವಾಸ ಮೂರ್ತಿ, ಎಸ್. ಎಲ್. ಪುರಾತತ್ತ್ವ ಪಿತಾಮಹ ಬಿ. ಎಲ್. ರೈಸ್ : ಜೀವನ ಸಾಧನೆ. ಕನ್ನಡ ಪುಸ್ತಕ ಪ್ರಾಧಿಕಾರ, 2011.

## English:

The forgotten soldiers of Mysore https://karnatakahistory.blogspot.com/2013/01/the-forgotten-soldiers-of-mysore.html

Hayavadana Rao, Ed. *Mysore Gazetteer* (Compiled for government). B R Publishing Corporation, Delhi, 1927-30. Reprint 1984. Vol. III, Economic

Heras, Rev. Henry. The Aravidu dynasty of Vijayanagara. St. Xavier's college, Bombay, With a preface by Sir Richard carnac temple, C.b.. C. I. E. . F. B. *.. F. S. A., Hon. Fellow. Trin. Hall. Cam, Vol. I G. Paul. & co. Publishers, Madras, 1927.

How do you compare the Maratha-Wodeyar relations with the Maratha-Mysore Sultan relations? https://www.quora.com/How-do-you-compare-the-Maratha-Wodeyar-relations-with-the-Maratha-Mysore-Sultan-relations

Karnataka through ages, 1970, Government of Karnataka

*Rice, B L ed. Imperial gazetteer of India: the Indian Empire.* Vol. III, Economic, New edition. Today and Tomorrow Publishers, New Delhi.

Rice, B L. Report on the Mysore census of 1881.

Sathyanatha Iyer, History of the Nayaks.

